ವಿಶಾಲ ಭಾರತ

# ಇತಿಹಾಸ ದರ್ಶನ

## ಎರಡನೆಯ ಪುಸ್ತಕ

( ಒಂಬತ್ತನೆಯ ಇಯತ್ತೆಗಾಗಿ )



ಲೇಖಕರು :

ಎಸ್. ಆರ್. ಶರ್ಮಾ, ಎಮ್. ಎ.

ವ್ಹಿ. ಬಿ. ನಾಯಕ, ಎಮ್. ಎ., ಎಲ್ಎಲ್. ಬಿ.



" ನಿಜವಾದ ಸಂಸ್ಕೃತಿಯ ಸ್ಫೂರ್ತಿಯು ವಿಶ್ವದ ಪ್ರತಿಯೊಂದು ಸಂದಿ ಮೂಲೆಯೊಳಗಿಂದಲೂ ದೊರೆಯುತ್ತಿದೆ. "

—ಪಂ. ಜವಾಹರಲಾಲ ನೆಹರೂ



ಓರಿಯೆಂಟ್ ಲಾಂಗ್‌ಮನ್ಸ್ ಲಿಮಿಟೆಡ್

ಮುಂಬಯಿ ಕಲಕತ್ತಾ ಮದ್ರಾಸ

**ಓರಿಎಂಟ್ ಲಾಂಗ್‌ಮನ್ಸ್ ಲಿಮಿಟೆಡ್**

೧೭, ಚಿತ್ತರಂಜನ ಅವ್ಹೆನ್ಯೂ, ಕಲಕತ್ತಾ ೧೩
ನಿಕಲ್ ರೋಡ, ಬಲಾರ್ಡ್ ಇಸ್ಟೇಟ, ಮುಂಬಯಿ ೧
೩೬ ಎ, ಮೌಂಟ ರೋಡ, ಮದ್ರಾಸ ೨
ಕೆನ್‌ಸನ್ ಹೌಸ್, ಅಜಮೀರಿ ಗೇಟ, ನ್ಯೂ ದಿಲ್ಲಿ
೧೭/೬೦, ಸನ್ಯಾಸಿ ರಾಜು ಸ್ಟ್ರೀಟ, ವಿಜಯವಾಡಾ ೨
೧೭, ನಾಝಿಮುದ್ದೀನ ರೋಡ, ಡಾಕಾ

**ಲಾಂಗ್‌ಮನ್ಸ್ ಗ್ರೀನ್ ಮತ್ತು ಕಂಪನಿ ಲಿಮಿಟೆಡ್**

೬ ಮತ್ತು ೭ ಕ್ಲಿಫರ್ಡ್ ಸ್ಟ್ರೀಟ, ಲಂಡನ್, ಡಬ್ಲ್ಯು ೧
ಮತ್ತು
ನ್ಯೂಯಾರ್ಕ್, ಟೊರೊಂಟೊ, ಕೇಪ್‌ಟೌನ್ ಮತ್ತು ಮೆಲ್‌ಬರ್ನ್.

ಪ್ರಥಮ ಮುದ್ರಣ: ೧೯೫೫
ದ್ವಿತೀಯ ಮುದ್ರಣ: ೧೯೫೫



**ಬೆಲೆ: ರೂ. ೨—೪—೬**

ಭಾರತದಲ್ಲಿ ಮುದ್ರಿತ

ಡಬಲ್ ಡೆಮಿ ೩೬ ಪೌಂಡ ಸುಪರ್ ಕ್ಯಾಲೆಂಡರ ಕಾಗದದ ಮೇಲೆ

ಈ ಪುಸ್ತಕವನ್ನು ಶ್ರೀ. ಹನಮಂತರಾವ ಮೊಹರೆ ಇವರು ಹುಬ್ಬಳ್ಳಿಯಲ್ಲಿ ಸಂಯುಕ್ತ-ಕರ್ನಾಟಕ ಮುದ್ರಣಾಲಯದಲ್ಲಿ ಮುದ್ರಿಸಿದರು ಮತ್ತು ಶ್ರೀ. ಎನ್. ಬಿ. ಕೂಪರ, ಮ್ಯಾನೇಜರ, ಓರಿಎಂಟ್ ಲಾಂಗ್‌ಮನ್ಸ್ ಲಿ. ನಿಕಲ್ ರೋಡ, ಬಲಾರ್ಡ್ ಇಸ್ಟೇಟ್

# ಅನುಕ್ರಮಣಿಕೆ



# ನಕಾಶಗಳು

# ನಿವೇದನ

ನಮ್ಮ 'ಆದರ್ಶ ಇತಿಹಾಸ ಮಾಲೆ'ಯಲ್ಲಿಯ ಇತಿಹಾಸ ದರ್ಶನದ ಮೊದಲನೆಯ ಹಾಗು ಎರಡನೆಯ ಪುಸ್ತಕಗಳನ್ನು ಅನುಕ್ರಮವಾಗಿ ೮ನೆಯ ಮತ್ತು ೯ನೆಯ ಇಯತ್ತೆಗಳಿಗಾಗಿ ಬರೆಯಲಾಗಿದೆ. ಇದಕ್ಕಿಂತ ಮುಂಚಿನ "ಇತಿಹಾಸ ಪ್ರವೇಶಮಾಲೆ"ಯ ಮುಖಾಂತರ ನಾವು ಇತಿಹಾಸ ಮಂದಿರದಲ್ಲಿ ಅಡಿಯಿಟ್ಟು 'ವಿಶಾಲ ಭಾರತ'ದ ವಿಹಂಗಮ ದೃಶ್ಯವನ್ನು ನೋಡಿದೆವು. ಇನ್ನು ಮುಂದೆ 'ವಿಶಾಲ ಭಾರತ'ದ ಕಿಡಿಕಿಯೊಳಗಿಂದ ಅದಕ್ಕಿಂತಲೂ ವ್ಯಾಪಕವಾದ ಮಾನವ ಇತಿಹಾಸವನ್ನು ನೋಡಲಿರುವೆವು. ಇತಿಹಾಸ ವಾಚನದಲ್ಲಿ ಇನ್ನು ಮುಂದೆ ನಾವು ಇಟ್ಟುಕೊಳ್ಳಬೇಕಾದ ವಿಶಾಲ ದೃಷ್ಟಿಕೋನದ ಕಲ್ಪನೆಯನ್ನು 'ಇತಿಹಾಸ ದರ್ಶನ' ಎಂಬ ಪಾಠದಲ್ಲಿ ಆರಂಭದಲ್ಲಿಯೆ ಕೊಡಲಾಗಿದೆ. ಅದನ್ನು ಚೆನ್ನಾಗಿ ಮನನ ಮಾಡಿಕೊಂಡ ಮೇಲೆಯೇ ಓದುಗರು ಮುಂದಿನ ಪಾಠಗಳ ಅಭ್ಯಾಸವನ್ನು ಮಾಡಬೇಕು.

ಈ ಪುಸ್ತಕದಲ್ಲಿ ಓದತಕ್ಕ ಇತಿಹಾಸದಲ್ಲಿ ಭಾರತವು ಜಗತ್ತಿನ ಒಂದು ಘಟಕವೆಂಬ ರೀತಿಯಲ್ಲಿ ಯಾವ ಸ್ಥಾನವನ್ನು ಪಡೆದಿದೆಯೆಂಬುದನ್ನು ನಾವು ಅರಿತುಕೊಳ್ಳಲಿರುವೆವು. ಕಲೆ, ಸಂಸ್ಕೃತಿ, ಸುಧಾರಣೆ ಮತ್ತು ಶಾಂತತೆ ಇವುಗಳ ಪ್ರಗತಿಗಾಗಿ 'ಮಾನವ'ನು ಮಾಡಿದ ಪ್ರಯತ್ನಗಳಲ್ಲಿ ಭಾರತವು ಸಲ್ಲಿಸಿದ ಕಾಣಿಕೆಯು ಅಭಿಮಾನಾಸ್ಪದವಾಗಿದೆ. ಈ ಮಹಾ ಕಾರ್ಯವನ್ನು ಸುಸ್ಪಷ್ಟಗೊಳಿಸುವ ಪ್ರಯತ್ನವನ್ನು ನಾವಿಲ್ಲಿ ಮಾಡಿರುವೆವು. ಹಾಗೆ ಮಾಡುವಾಗ 'ಇತಿಹಾಸ ಪ್ರವೇಶ' ಮಾಲೆಯ ಮೂರೂ ಪುಸ್ತಕಗಳಲ್ಲಿ ಕೊಟ್ಟ ತಿಳಿವಳಿಕೆಯು ಓದುಗರ ಮನಸ್ಸಿನಲ್ಲಿ ಇದ್ದೇ ಇದೆಯೆಂಬ ಕಲ್ಪನೆಯಿಂದಲೇ ಮೊದಲಿನ ವಿಷಯಗಳ ದ್ವಿರುಕ್ತಿಯ ಪ್ರಸಂಗವನ್ನು ಅವಶ್ಯವಿದ್ದಲ್ಲಿ ತಪ್ಪಿಸಿರುವೆವು.

ಕೊನೆಯ 'ಸಮಾಲೋಚನ' ಎಂಬ ಪಾಠವು ವಿಶಿಷ್ಟ ದೃಷ್ಟಿಕೋನದಿಂದಲೇ ಬರೆಯಲ್ಪಟ್ಟಿದೆ. 'ಜಗತ್ತಿನ' ವಿಶೇಷತಃ ಭಾರತದ ಇತಿಹಾಸದಲ್ಲಿದ್ದ ಮಾನವೀ ವಿಚಾರಸರಣಿಯಲ್ಲಿ ಏಕಸೂತ್ರತೆಯನ್ನು ವಿಶದೀಕರಿಸುವದೇ ಅದಾಗಿದೆ. ಈ ಪುಸ್ತಕದಲ್ಲಿ ಭಾರತೀಯ ಮತ್ತು ಜಾಗತಿಕ ಹೀಗೆ ಎರಡೂ ಐತಿಹಾಸಿಕ ಘಟನೆಗಳ ವಿಚಾರವನ್ನು ಮಾಡಿರುವದರಿಂದ ತುಲನಾತ್ಮಕ ಕಾಲಪಟವನ್ನು ಕೊಟ್ಟಿದೆ. ವಿಚಾರ ಪ್ರವರ್ತಕ ಅವತರಣಿಕೆಗಳು, ಮೂಲ ಸುಂದರ ಚಿತ್ರಗಳು, ಇವೇ ಮೊದಲಾದ ವೈಶಿಷ್ಟ್ಯಗಳನ್ನು ಈ ಪುಸ್ತಕಗಳಲ್ಲಿಯೂ ನಾವು ಕಾಯ್ದುಕೊಂಡಿರುವೆವು.

ಶಿಕ್ಷಣ ಶಾಖೆ ಮತ್ತು 'ಮಾಧ್ಯಮಿಕ ಶಿಕ್ಷಣ ಆಯೋಗ'ದವರು ಇತಿಹಾಸದ ಪಠ್ಯ ಪುಸ್ತಕಗಳ ವಿಷಯವಾಗಿ ಮಾಡಿದ ವಿಧಾಯಕ ಸೂಚನೆಗಳನ್ನು ಬಳಕೆಯಲ್ಲಿ ತರಲು ಪರಮಾವಧಿ ಪ್ರಯತ್ನವನ್ನು ಮಾಡಿದೆ. ನಮ್ಮ ಈ ಪ್ರಯತ್ನವಾದರೂ ಓದುಗರ ಮನಸ್ಸಿಗೆ ಬರುವದೆಂಬ ನಂಬಿಗೆಯು ನಮಗಿದೆ.

# ೧ನೆಯ ಪಾಠ

## ಇಸ್ಲಾಮದ ಉದಯ ಮತ್ತು ವಿಕಾಸ

**ಮುಹಮ್ಮದ ಪೈಗಂಬರ:—** ಹಿಂದು, ಬೌದ್ಧ, ಕ್ರಿಸ್ತೀ ಮತ್ತು ಇಸ್ಲಾಮ ಇವು ನಾಲ್ಕು ಸದ್ಯದ ಜಗತ್ತಿನೊಳಗಿನ ಪ್ರಸಿದ್ಧ ಧರ್ಮಗಳು. ಇವುಗಳಲ್ಲಿ ಎರಡು ಧರ್ಮಗಳು ಭಾರತದಲ್ಲಿ ಹುಟ್ಟಿದವು. ಮತ್ತು ಅವು ವಿಶೇಷ ಪ್ರಾಚೀನವಾದವುಗಳು. ಉಳಿದ ಎರಡು ಧರ್ಮಗಳ ಸ್ಥಾಪನೆಯು 'ಮಧ್ಯಪೂರ್ವದಲ್ಲಿ' (ಪೆಲೆಸ್ಟಾಯಿನ್ ಮತ್ತು ಅರಬಸ್ತಾನ) 'ಸೆಮೆಟಿಕ್' ವಂಶೀಯ ಸಮಾಜದಲ್ಲಿ ಆಯಿತು. ಬೌದ್ಧ ಧರ್ಮವು ಹಿಂದೂ ಧರ್ಮದಿಂದ ಉದ್ಭವಿಸಿದಂತೆ ಇಸ್ಲಾಮವು ಕ್ರಿಸ್ತೀ ಮತ್ತು ಇಸ್ರಾಯಿಲ್ ಧರ್ಮದ ಪರಂಪರೆಯಿಂದ ಹುಟ್ಟಿತು. ಮೇಲಿನಿಂದ ನೋಡಿದರೆ ಈ ಧರ್ಮಗಳಲ್ಲಿ ಇಂದಿಗೂ ಕೆಲವು ವಿಷಯಗಳಲ್ಲಿ ಸಾಮ್ಯವು ಕಂಡುಬರುತ್ತದೆ. ಇವುಗಳ ಸಂಸ್ಥಾಪಕರ ಬೋಧೆಯಲ್ಲಿ ಮೂಲಭೂತವಾದ ಯಾವ ವ್ಯತ್ಯಾಸವೂ ಇರುವದಿಲ್ಲ. ಹಿಂದು, ಬೌದ್ಧ, ಝುರತುಷ್ಟ್ರ ಧರ್ಮ ಇತ್ಯಾದಿ ಪ್ರಾಚೀನ ಧರ್ಮಗಳಲ್ಲಿ ಮೂಲಭೂತ ಏಕತೆಯು ಯಾವ ರೀತಿ ಇದೆ ಎಂಬುದನ್ನು ನಾವು ನೋಡಿದ್ದೇವೆ. ನಮ್ಮ ವೇದಗಳು ಹೇಳುವಂತೆ, 'ಏಕಂ ಸತ್ ವಿಪ್ರಾಃ ಬಹುಧಾ ವದಂತಿ' 'ಸತ್ಯವೆಂಬುದು ಒಂದೇ ಆಗಿದ್ದರೂ ಅದನ್ನು ವಿದ್ವಾಂಸರು ವಿವಿಧ ರೀತಿಯಲ್ಲಿ ಮಂಡಿಸುತ್ತಾರೆ.' ಏಸು ಕ್ರಿಸ್ತ ಮತ್ತು ಇಸ್ಲಾಮ ಧರ್ಮಸ್ಥಾಪಕ ಮುಹಮ್ಮದ ಇವರ ಉಪದೇಶದಲ್ಲಿಯೂ ಇದೇ ಕಂಡುಬರುತ್ತದೆ.

ಅರಬಸ್ತಾನದ ಮಕ್ಕಾ ಎಂಬಲ್ಲಿ ಸ. ೫೭೦ರಲ್ಲಿ ಮುಹಮ್ಮದನ ಜನ್ಮವಾಯಿತು. ತಂದೆ ತಾಯಿಗಳ ಆಶ್ರಯವು ಅವನಿಗೆ ಬಹಳ ದಿವಸ ಲಭಿಸಲಿಲ್ಲ. ಆದ್ದರಿಂದ ಕಕ್ಕನಾದ ಅಬುತಾಲಿಬನು ಚಿಕ್ಕ ಮುಹಮ್ಮದನನ್ನು ಸಾಕಿ ಸಲುಹಿದನು. ವಯಸ್ಸಿನ ೨೫ನೆಯ ವರ್ಷದ ವರೆಗೆ ಒಬ್ಬ ಸಣ್ಣ ವ್ಯಾಪಾರಿ ಎಂದು ಕಾಲ ಕಳೆದನು. ಖಾದಿಜಾ ಬೀಬಿ ಎಂಬ ವಿಧವೆಯ ಸರಕುಗಳ ವ್ಯವಸ್ಥೆಯನ್ನು ಅವನು ಮಾಡುತ್ತಿದ್ದನು. ಮುಂದೆ ಅವಳೊಡನೆಯೇ ಅವನ ಮದುವೆಯಾಯಿತು. ಸಂತ ಪಾಲನಿಗೆ ದಮಾಸ್ಕಸದಲ್ಲಿ ಸಾಕ್ಷಾತ್ಕಾರವಾದಂತೆ ಮುಹಮ್ಮದನಿಗೆ ೪೦ನೆಯ ವರ್ಷದಲ್ಲಿ ಹಿರಾ ಎಂಬ ಪರ್ವತದ ಮೇಲೆ ಸಾಕ್ಷಾತ್ಕಾರವಾಯಿತು. ಅರಬ ಜನರಿಗೆ ಉಚಿತವಾದ ಧರ್ಮದ ಉಪದೇಶ ಮಾಡಬೇಕೆಂಬ ಪ್ರೇರಣೆಯು ಮುಹಮ್ಮದನಿಗೆ ದೇವದೂತ 'ಗೇಬ್ರಿಯಲ'ನಿಂದ ದೊರಕಿತು.

ಮುಹಮ್ಮದನ ಉದಯದವರೆಗೆ ಅರಬ ಜನರು ಬಹಳ ಹಿಂದುಳಿದವರಾಗಿದ್ದರು. ಅವರೊಳಗಿನವರು ಹೆಚ್ಚಾಗಿ ಉಸುಬಿನ ಪ್ರದೇಶಗಳಲ್ಲಿ ಯಾವಾಗಲೂ ಅಲೆದಾಡುತ್ತಿ

ದ್ದರು. ಕೆಂಪು ಸಮುದ್ರದ ದಂಡೆಯ ಪ್ರದೇಶವು ಅದರೊಳಗೆಯೇ ಬೆಳೆಯುಳ್ಳದ್ದು. ಆದ್ದರಿಂದ ಅಲ್ಲಿ ಒಕ್ಕಲತನವು ನಡೆಯುತ್ತಿತ್ತು. ಕೆಲವೇ ನಗರಗಳಾದ ಮಕ್ಕಾ, ಮದೀನಾ, ಜೇಡ್ಡಾ ಎಂಬ ನಗರಗಳು ಇದೇ ಭಾಗದಲ್ಲಿ ಉದಯಕ್ಕೆ ಬಂದವು. ಅರಬ ಜನರಲ್ಲಿ ಅನೇಕ ಬಣಗಳಿದ್ದವು. ಈ ಬಣಗಳಲ್ಲಿ ಯಾದವೀ ಕಲಹವು ಆಗಾಗ್ಗೆ



ಕಾಬಾ

ನಡೆದೇ ಇತ್ತು. ಸಂಗೀತವೊಂದೇ ಅವರಿಗೆ ಅವಗತವಾದ ಲಲಿತ ಕಲೆಯು. ಬಹು-ಪತ್ನೀಕತ್ವ, ಮದ್ಯಪಾನ, ಕೊಲೆಗಳಂತಹ ಕಾಡು ಸಂಗತಿಗಳು ಇವರಲ್ಲಿ ಆತಂಕವಿಲ್ಲದೆ ನಡೆಯುತ್ತಿದ್ದವು. ಮಕ್ಕೆಯ ಯಾತ್ರೆಯ ವೇಳೆಯಲ್ಲಿ, ವರ್ಷದ ಕೊನೆಗೆ ಒಮ್ಮೆ ಮಾತ್ರ ಅವರು ಈ ದುರಾಚಾರಗಳನ್ನು ಬಿಟ್ಟು 'ಈಶ್ವರೀ ಸಂಧಿ'ಯನ್ನು ಪಾಲಿಸು ತ್ತಿದ್ದರು. ಕಪ್ಪು ಬಣ್ಣದ ಒಂದು ಅತಿ ದೊಡ್ಡ ಶಿಲೆಯು ಮಕ್ಕಾದಲ್ಲಿ ಇತ್ತು. ಆ ಶಿಲೆಯು ಸ್ವರ್ಗದಿಂದ ಭೂಮಿಗೆ ಬಂದಿತೆಂದು ಅರಬ ಜನರ ಭಾವನೆ ಇತ್ತು. ಈ ಶಿಲೆಯನ್ನು ಮುದ್ದಿಸುವದರಿಂದ ಮನುಷ್ಯನು ಪಾಪಮುಕ್ತನಾಗುತ್ತಾನೆಂದು ಅವರ ಶ್ರದ್ಧೆ ಇತ್ತು. ಪ್ರಾಚೀನ ಇಜಿಪ್ತೀ ಜನರಂತೆ ಅರಬರೂ ಅನೇಕ ಮೂರ್ತಿಗಳನ್ನು ಪೂಜಿಸುತ್ತಿದ್ದರು. ಕೆಲವು ವಿಶೇಷ ಪ್ರಸಂಗಗಳಲ್ಲಿ ಈ ಮೂರ್ತಿಗಳೆದುರು ನರಬಲಿಯನ್ನೂ ಕೊಡುತ್ತಿದ್ದರು !

ತಮ್ಮ ದೇಶಬಾಂಧವರೊಳಗಿನ ಇಂತಹ ಕಾಡು ರೂಢಿಯನ್ನು ತೆಗೆದುಹಾಕುವ ಪ್ರಯತ್ನವನ್ನು ಮುಹಮ್ಮದನು ಮಾಡಿ ನೋಡಿದನು. ಪರಮೇಶ್ವರನು (ಅಲ್ಲಾ) ಒಬ್ಬನೇ. ಅವನ ಮೇಲೆ ವಿಶ್ವಾಸವಿಡಿರಿ ಎಂಬ ಏಕೇಶ್ವರೀ ಮತದ ಉಪದೇಶವನ್ನು ತನ್ನ ಅರಬ ಬಾಂಧವರಿಗೆ ಅವನು ಮಾಡಿದನು. "ನಾನು ಅಲ್ಲಾನಿಂದ ಕಳಿಸಲ್ಪಟ್ಟ-ವನು" ಎಂದು ಮುಹಮ್ಮದನು ಡಂಗುರಸಾರಿದನು. ತನಗಿಂತ ಮುಂಚೆ ಆದ ಏಸು ಕ್ರಿಸ್ತ, ಮೋಝೆಸನು ಪರಮೇಶ್ವರನಿಂದ ಪ್ರೇಷಿತರೆಂಬುದು ಮುಹಮ್ಮದನಿಗೆ ಮಾನ್ಯವಿತ್ತು. ಆದರೆ ಮುಹಮ್ಮದನು ಕೊನೆಯ ಮತ್ತು ನಿಜವಾಗಿ ಪರಮೇಶ್ವರ-ನಿಂದ ಕಳಿಸಲ್ಪಟ್ಟವನೆಂದು ಮುಸಲ್ಮಾನರು ಮನ್ನಿಸುತ್ತಾರೆ. (ಲಾ ಇಲಾಹ್ ಇಲ್ಲಾ ಅಲ್ಲಾ ಮುಹಮ್ಮದ ರಸುಲ ಅಲ್ಲಾ). ಅವನು ತನ್ನ ಧರ್ಮಕ್ಕೆ 'ಇಸ್ಲಾಮ' ಎಂದು ಕರೆದನು. ಇಸ್ಲಾಮ ಎಂದರೆ ಅಲ್ಲಾನಿಗೆ (ಹಿಂದು ಧರ್ಮದೊಳಗಿನ '**ಈಶ್ವರ** ಪ್ರಣಿಧಾನ') ಸಂಪೂರ್ಣವಾಗಿ ಶರಣು ಹೋಗುವದು.

ಅವನು ತನ್ನ ಧರ್ಮದ ಮತ್ತು ಸುಖಲೋಲುಪ ಬಾಂಧವರಿಗೆ ಮದ್ಯಪಾನ, ವೇಶ್ಯಾಗಮನ ಇವುಗಳಂತಹ ದುರಾಚಾರಗಳನ್ನು ಬಿಟ್ಟುಬಿಡುವ ಕಳಕಳಿಯ ಉಪ-ದೇಶವನ್ನು ಮಾಡಿದನು. ಅಂತಃಕಲಹ ಮತ್ತು ರಕ್ತಪಾತ ಇವುಗಳಲ್ಲಿ ಯಾವಾಗಲೂ ಮಗ್ನರಾದ ಅರಬ ಬಣದವರಿಗೆ ಪರಸ್ಪರ ಅಣ್ಣತಮ್ಮಂದಿರಂತೆ ವರ್ತಿಸಬೇಕೆಂಬ ಉಪದೇಶವನ್ನು ಅವನು ತಿಳಿಸಿಕೊಟ್ಟನು. ಅವರಿಗೆ ಶಿಸ್ತಿನಿಂದ ಕೂಡಿದ ಜೀವನದ ಕೆಲವು ನಿಯಮಗಳನ್ನು ಮುಹಮ್ಮದನು ಹಾಕಿಕೊಟ್ಟನು. ಅವು ಹೀಗಿವೆ. "ದಿನಾಲು ಐದು ಸಲ ಅಲ್ಲಾನ ಪ್ರಾರ್ಥನೆ (ನಮಾಜ) ಮಾಡುವದು; ರಮಝಾನದೊಳಗೆ ನಾಲ್ವತ್ತು ದಿವಸ ಉಪವಾಸ ಮಾಡುವದು; ದೀನ ದರಿದ್ರರಿಗೆ ದಾನಮಾಡುವದು; ಆಯುಷ್ಯದೊಳಗೆ ಕನಿಷ್ಟ ಒಮ್ಮೆಯಾದರೂ ಮಕ್ಕಾ ಯಾತ್ರೆ ಮಾಡುವದು; ಅಲ್ಲಾ ಮತ್ತು ಅವನ ಭಕ್ತ ಇವರೊಳಗೆ ಯಾರ ಮಧ್ಯಸ್ಥಿಯನ್ನೂ ಮನ್ನಿಸದಿರುವದು."

ಸಾದಾ ಜೀವನ ಮತ್ತು ಶುದ್ಧಾಚರಣೆಗಳ ಉಪದೇಶವು ಕೂಡ, ಪುರಾಣ ಮತವಾದಿಗಳಾದ ಅರಬರ ಕಲ್ಪನೆಯಂತೆ, ಅತಿಶಯ ಕ್ರಾಂತಿಕಾರಕವಾಗಿತ್ತು. ಆದ್ದರಿಂದ ಏಸು ಕ್ರಿಸ್ತನಂತೆಯೆ ಮುಹಮ್ಮದನಿಗೂ ಈ ಜನರ ಹಿಂಸೆಯನ್ನು ಮೊದಲು ಎದುರಿಸಬೇಕಾಯಿತು. ಸ. ೬೨೨ರಲ್ಲಿ ಮಕ್ಕೆಯಿಂದ ಮದಿನಾಕ್ಕೆ ಓಡಿ ಹೋಗಿ ತನ್ನ ಜೀವ ಉಳಿಸಿಕೊಳ್ಳಬೇಕಾಯಿತು. ಏಸುವಿನ ದೇಹಾಂತ ಶಿಕ್ಷೆಯಂತೆ ಮುಹಮ್ಮದನ ಈ ಪಲಾಯನವು ಇತಿಹಾಸಪ್ರಸಿದ್ಧವಿದೆ. ಈ ಘಟನೆಯಾದಂದಿನಿಂದ ಇಸ್ಲಾಮ ಧರ್ಮೀಯರ 'ಹಿಜರಿ' ಶಕೆಯ ಎಣಿಕೆಯು ಸುರುವಾಗುತ್ತದೆ. ಈ ಹಿಜರೀ ಶಕೆಯು ಎಲ್ಲ ಕಡೆಯಲ್ಲಿ ಇಂದಿಗೂ ಪಾಲಿಸಲ್ಪಡುತ್ತದೆ. ಮದಿನಾವಾಸಿಗಳ ಸಹಾಯದಿಂದ ಮುಹಮ್ಮದನು ಶೀಘ್ರವೇ ಮಕ್ಕೆಯನ್ನು ಗೆದ್ದು ತಿರುಗಿ ತೆಗೆದು-ಕೊಂಡನು. ಸ್ವಲ್ಪ ಅವಧಿಯಲ್ಲಿಯೇ ಇಡೀ ಅರಬಸ್ತಾನದ ಮೇಲೆ ಅವನ ಅಧಿಕಾರವು ಸ್ಥಾಪಿತವಾಯಿತು. ಮುಹಮ್ಮದನ ಉಳಿದ ೧೧ ವರ್ಷದ ಆಯುಷ್ಯ

ದಲ್ಲಿ ವಡವಾಗ್ನಿಯಂತೆ ಇಸ್ಲಾಮದ ಪ್ರಸಾರವಾಯಿತು. ಸನ್ ೬೩೨ ರಲ್ಲಿ ಮುಹಮ್ಮದನು ಮಕ್ಕೆಯಲ್ಲಿ ಮರಣಹೊಂದಿದನು. ಇದರ ನಂತರ ನೂರು ವರ್ಷಗಳಲ್ಲಿ ಏಶಿಯಾ, ಆಫ್ರಿಕಾ ಮತ್ತು ಯುರೋಪ ಈ ಮೂರೂ ಖಂಡಗಳಲ್ಲಿ ಲಕ್ಷಾವಧಿ ಜನರು ಇಸ್ಲಾಮು ಧರ್ಮವನ್ನು ಸ್ವೀಕರಿಸಿದರು. ಸದ್ಯಕ್ಕೆ ಇಸ್ಲಾಮು ಧರ್ಮೀಯ ಜನಸಂಖ್ಯೆಯು ೩೦ ಕೋಟಿಗೆ ಮಿಕ್ಕಿದೆ. ಅದರೊಳಗೆ ⅓ ದಷ್ಟು ಭಾರತ ಮತ್ತು ಪಾಕಿಸ್ತಾನ ನಿವಾಸಿಗಳಿದ್ದಾರೆ.

**ಖಲಿಫಾ:—** ಇಸ್ಲಾಮದ ವಿಶ್ವವ್ಯಾಪಿ ಪ್ರಸಾರವನ್ನು 'ಖಲಿಫಾ' ಎಂಬ ಧರ್ಮಗುರುಗಳು ಮಾಡಿದರು. (ಖಲಿಫಾ ಎಂದರೆ ಪೈಗಂಬರನ 'ಉತ್ತರಾಧಿಕಾರಿ') ಅಬುಬಕ್ರನೆಂಬವನೇ ಮೊದಲನೆಯ ಖಲಿಫಾ. ಎರಡನೆಯ ಉಮರನು ಸ. ೬೩೪–೬೪೪ ರ ಅವಧಿಯಲ್ಲಿ ಇದ್ದನು. ಸ. ೬೪೪–೫೬ ರ ಕಾಲದಲ್ಲಿ ಉಥಮಾನ ಎಂಬ ಮೂರನೆಯ ಖಲಿಫನು ಇದ್ದನು. ಮುಹಮ್ಮದನ ಅಳಿಯನಾದ ಅಲಿಯು ನಾಲ್ಕನೆಯ ಖಲಿಫನಾದನು. ಅವನ ನಂತರ ದೊಡ್ಡ ಜಗಳವಾಗಿ ಮುಸಲ್ಮಾನರಲ್ಲಿ ಸುನ್ನೀ ಮತ್ತು ಶಿಯಾ ಎಂಬ ಎರಡು ಪಂಥಗಳು ನಿರ್ಮಾಣವಾದವು. ಸುನ್ನೀ ಪಂಥವು ಸನಾತನವಾಗಿದ್ದು ಖಲಿಫರ ಆಯ್ಕೆಯು ಆಗಲೇಬೇಕೆಂಬ ಮತದವರಿದ್ದರು. ಖಲಿಫ ಪಟ್ಟವು ಮುಹಮ್ಮದನ ಮನೆತನಕ್ಕೆ ವಂಶಪರಂಪರೆಯಾಗಿ ಸಲ್ಲಬೇಕೆಂದು ಶಿಯಾ ಪಂಥದವರ ಮತವಿದ್ದಿತು. ಮುಹಮ್ಮದನಿಗೆ ಗಂಡುಮಕ್ಕಳಿದ್ದಿಲ್ಲ. ಅವನ ಮಗಳಾದ ಫಾತಿಮಾಳ ವಿವಾಹವು ಅಲಿಯ ಸಂಗಡ ಆಗಿದ್ದಿತು. ಅವರಿಗೆ ಹಸನ ಮತ್ತು ಹುಸೇನ ಎಂಬ ಇಬ್ಬರು ಮಕ್ಕಳಿದ್ದರು. ಖಲಿಫ ಪದವಿಗಾಗಿ ದೊಡ್ಡ ಯಾದವೀ ಯುದ್ಧವು ಸುರುವಾಗಿ ಕರಬಲಾ ಎಂಬಲ್ಲಿ ಭಯಂಕರ ರಕ್ತಪಾತವಾಯಿತು. ಈ ಪ್ರಸಂಗದಲ್ಲಿ ಹಸನ ಮತ್ತು ಹುಸೇನ ಇಬ್ಬರೂ ಕೊಲ್ಲಲ್ಪಟ್ಟು ಮುಹಮ್ಮದನ ವಂಶದೀಪವನ್ನು ನಂದಿಸಲಾಯಿತು. ಪ್ರತಿ ವರುಷ ಮುಹರಮ ತಿಂಗಳಲ್ಲಿ ಈ ದುಃಖದಾಯಕ ಘಟನೆಯ ನೆನಪನ್ನು ಮುಸಲ್ಮಾನರು ಇಂದಿಗೂ ಆಚರಿಸುತ್ತಾರೆ.

ಸುನ್ನೀ ಎಂಬ ಶಬ್ದವು ಸುನ್ನಾ ಶಬ್ದದಿಂದ ಬಂದುದು. ಸುನ್ನಾ ಎಂದರೆ ನಿಯಮ ಎಂದು ಅರ್ಥ. ಮುಹಮ್ಮದನು ತನ್ನ ನಂತರದ ವಾರಸದಾರನನ್ನು ನಿಯಮಿಸಿದ್ದಿಲ್ಲ. ಅವನ ಲೋಕಪ್ರಭುತ್ವದ ಉಪದೇಶಕ್ಕೆ ಅನುಸಾರವಾಗಿ ಮೊದಲಿನ ನಾಲ್ಕು ಖಲಿಫರು ಸುನ್ನಾನುಸಾರ (ನಿಯಮಾನುಸಾರ) ಆರಿಸಲ್ಪಟ್ಟಿದ್ದರು. ಆನುವಂಶಿಕ ಅಧಿಕಾರದ ಕಲ್ಪನೆಯು ಈ ನಿಯಮಕ್ಕೆ ವಿರುದ್ಧವಾಗಿದ್ದಿತು. ಇದೊಂದು ಅಂಶವನ್ನುಬಿಟ್ಟರೆ ಸುನ್ನೀ ಮತ್ತು ಶಿಯಾ ಇವುಗಳಲ್ಲಿ ಬಹಳ ವ್ಯತ್ಯಾಸವಿಲ್ಲ. 'ಕುರಾಣ' ವೆಂಬ ಧರ್ಮಗ್ರಂಥವು ಎಲ್ಲ ಮುಸಲ್ಮಾನರಿಗೆ ಶಿರೋಧಾರ್ಯವಿದೆ. 'ಹಾದೀ' ಎಂಬ ಗ್ರಂಥದಲ್ಲಿ ಮುಹಮ್ಮದನ ದಾಖಲೆಗಳನ್ನು ಮತ್ತು ಆಚರಣೆಯ ನಿಯಮಗಳನ್ನು ಕೊಡಲಾಗಿದೆ. ಕುರಾಣವು ಹಿಂದುಗಳ 'ಶ್ರುತಿ'ಯೇ ಸರಿ. ಆದರೆ 'ಹಾದೀ' ಇದು ಸ್ಮೃತಿಯಂತೆ ಇದೆ. ಅರಬಸ್ತಾನದ ಹೊರಗೆ

ಇಸ್ಲಾಮದ ವಿಶ್ವವ್ಯಾಪಿ ಪ್ರಸಾರವನ್ನು ಖಲೀಫರ ಎರಡು ಮನೆತನಗಳು ಮಾಡಿದವು: ಓಮಿಯಾ (ಸ. ೬೬೧–೭೫೦) ಮತ್ತು ಅಬ್ಬಾಸ (ಸ. ೭೫೦–೧೨೫೮). ಮುವಾವಿಯಾ ಎಂಬವನು ಓಮಿಯಾ ಮನೆತನದ ಸಂಸ್ಥಾಪಕನು. ಇಸ್ಲಾಮದ ಮುಖ್ಯಸ್ಥನಿಗೆ ಮುಸಲ್ಮಾನರು ಧಾರ್ಮಿಕ, ರಾಜಕೀಯ ಮತ್ತು ಸೈನಿಕ ಪ್ರಮುಖ ನೆಂದು ಮನ್ನಿಸುತ್ತಿದ್ದರು. ಆದ್ದರಿಂದ ಖಲೀಫರಿಗೆ 'ಧರ್ಮನಿಷ್ಠರ ಪ್ರಮುಖ' ಎಂಬ ಹೆಸರು ಬಿದ್ದಿತು. ಖಲೀಫರ ಕೈಯಲ್ಲಿ ಬಹಳ ಅಧಿಕಾರವು ಕೇಂದ್ರೀಕೃತ ವಾಗಿತ್ತು. ಆದ್ದರಿಂದ ಆಯ್ಕೆಯ ದುಷ್ಪರಿಣಾಮವನ್ನು ಎದುರಿಸಲು ಅವರು ಸಿದ್ಧ-ರಿದ್ದಿಲ್ಲ ಕರಬಲಾದ ದುಃಖದ ಘಟನೆಯ ನಂತರವೂ ಖಲೀಫ ಪಟ್ಟಕ್ಕೆ ಒಂದು ವಿಲೋಭನೀಯ ಕೌಟುಂಬಿಕ ಜೀವನದ ಸ್ವರೂಪವು ಪ್ರಾಪ್ತವಾಯಿತು. ಇದರ ಪರಿಣಾ ಮವು ಏನಾಗಬೇಕೋ ಅದು ಆಯಿತು. ಉತ್ತರಾಧಿಕಾರಕ್ಕಾಗಿ ಕಾರಸ್ಥಾನ, ಕುಟಿಲತೆ ಇತ್ಯಾದಿಗಳು ಹಬ್ಬಿ ಕೊನೆಗೆ ಮೂಲ ಮನೆತನದ ಉಚ್ಚಾಟನೆಯಾಯಿತು ಅಧಿಕಾ ರಕ್ಕೆ ಬರುವ ಪುರುಷರೆಲ್ಲ ಯಾವಾಗಲೂ ಕರ್ತೃತ್ವಶಾಲಿಗಳೇ ಹೊರಡುತ್ತಾರೆಂದು. ರಾಜಸತ್ತಾತ್ಮಕ ಪದ್ಧತಿಯಲ್ಲಿ ಆಶ್ವಾಸನವನ್ನು ಕೊಡಲು ಬರುವದಿಲ್ಲ. ಅದೇಬಗೆ ಯಾಗಿ ಖಿಲಾಫತ ವಿಷಯದಲ್ಲಿಯೂ ಘಟಿಸಿತು ಕರ್ತೃತ್ವಶಾಲಿಗಳಾದ ಖಲೀಫರ ತರುವಾಯ ಕರ್ತೃತ್ವಶೂನ್ಯ ವ್ಯಕ್ತಿಗಳು ಖಲೀಫರಾದರು. ಮೊದಲಿನ ಖಲೀಫರು ನಿಜ ವಾಗಿಯೂ ಧ್ಯೇಯವಾದಿಗಳಾಗಿದ್ದರು. ಮುಹಮ್ಮದ ಪೈಗಂಬರನ ಉದಾತ್ತ ಆದರ್ಶ ವನ್ನು ಮುಂದಿಟ್ಟುಕೊಂಡು ನಡೆದರು. ನಂತರದ ಖಲೀಫರು ಬಹಳ ದೊಡ್ಡ ಪ್ರದೇಶದ ಸತ್ತಾಧೀಶರಾದುದರಿಂದ ಅಪಾರ ಸಂಪತ್ತಿಯು ಅವರೆದುರಿಗೆ ಕಂಡಿತು. ಈ ವೈಭವದ ಮೂಲಕ ಅವರು ಕರ್ತವ್ಯಚ್ಯುತರಾದರು. ಶ್ರೀಮಂತಿಕೆಯು ಹೆಚ್ಚಿದಂತೆ ಮನುಷ್ಯನ ಅಧಃಪತನವಾಗುತ್ತ ಹೋಗುತ್ತದೆ ಎಂಬುದಕ್ಕೆ ಇದೇ ಸಾಕ್ಷಿ. ಮುಹಮ್ಮದ ಪೈಗಂಬ-ರರ ನಂತರ ಇಸ್ಲಾಮರಾಜ್ಯವಿಸ್ತಾರವು ಹೆಚ್ಚಾಯಿತು. ರಾಜ್ಯವಿಸ್ತಾರವು ಬೆಳೆಯುತ್ತ ನಡೆದಂತೆ ಇಸ್ಲಾಮ ಸಾಮ್ರಾಜ್ಯದ ರಾಜಧಾನಿಗಳು ಬದಲಾಗುತ್ತ ನಡೆದವು. ಮೊದಲು ಮಕ್ಕಾ, ನಂತರ ದಮಾಸ್ಕಸ್; ಅನಂತರ ಬಗದಾದ; ಈ ರೀತಿಯಾಗಿ ರಾಜಧಾನಿಗಳ ಸ್ಥಳಾಂತರವಾಯಿತು. ಖಿಲಾಫತದ ಮೂರು ತುಣುಕುಗಳಾದವು. ಅವು ಯಾವವೆಂದರೆ; ಬಗದಾದದ (ಏಶಿಯಾ ಮಾಯನರ) ಖಲಿಫಾ, ಕಾರ್ಡೊ-ವ್ಹಾದ (ಸ್ಪೇನ) ಖಲಿಫಾ, ಮತ್ತು ಕೈರೋದ (ಇಜಿಪ್ತ) ಖಲಿಫಾ. ಸ. ೧೨೫೮ ರಲ್ಲಿ ಮಂಗೋಲಿಯನ್ನರು ಬಗದಾದವನ್ನು ನಾಶಗೊಳಿಸಿದರು. ಆ ಕಾರಣದಿಂದ ಖಲಿ-ಫಾರ ವೈಭವಕ್ಕೆ ಅಡ್ಡಿಯಾಯಿತು. ಅವರ ರಾಜಕೀಯ ಪ್ರಮುಖತ್ವವು ಸಂಪುಷ್ಟಕ್ಕೆ ಬಂತು. ಮುಂದಿನ ಕಾಲದಲ್ಲಿ ತುರ್ಕಸ್ತಾನದ ಸುಲ್ತಾನರು 'ಖಲಿಫಾ' ಸತ್ತೆ ಯನ್ನು ಪುನರುಜ್ಜೀವಿಸಲು ಪ್ರಯತ್ನಿಸಿದರು. ಹರೂನ-ಅಲ್-ರಶೀದನು (ಸ. ೭೮೬–೮೦೯) ಒಳ್ಳೇ ದೊಡ್ಡ ಯೋಗ್ಯತೆಯ ಖಲೀಫನಾಗಿ ಹೋದನು. ಅವನ ವೇಳೆಯಲ್ಲಿ ಇಸ್ಲಾಮ ಸಾಮ್ರಾಜ್ಯದ ಸಾಮರ್ಥ್ಯ ಮತ್ತು ವೈಭವಗಳು ಕಳಸಕ್ಕೆ ಮುಟ್ಟಿದ್ದವು. "ಅರಬಸ್ತಾನದ ಸುರಸ ಕಥೆಗಳು" ಎಂಬ ಅದ್ಭುತ ಕಥಾಸಂಗ್ರಹದ ಮೂಲಕ

ಹರೂನ-ಅಲ್-ರಶೀದನು ಜಗದ್ವಿಖ್ಯಾತನಾಗಿದ್ದಾನೆ. ವಿಕ್ರಮಾದಿತ್ಯನಂತೆ ಅವನೂ ದೊಡ್ಡ ವಿಜೇತಾ ಮತ್ತು ರಾಜಕಾರಣಿಯಾಗಿದ್ದು ವಿದ್ಯೆ ಮತ್ತು ಕಲೆಗಳ ಪರಮ-ಭಕ್ತನಾಗಿದ್ದನು.

ಖಲೀಫರ ಸಾಮ್ರಾಜ್ಯದ ಮೂಲಕ ಇರಾಣ ಮತ್ತು ಕಾನಸ್ಟ್ಯಾಂಟಿನೋಪಲ ಇವುಗಳೊಳಗಿನ ಸಾಮ್ರಾಜ್ಯಗಳು ತೀವ್ರವಾಗಿ ನಾಶವಾದವು. ವಿಸ್ತಾರ ಮತ್ತು ವೈಭವ



ಖಲಿಫಾ ಹರೂನ ಅಲ್‌ರಶೀದ ( ಬಗದಾದ )

ಇವುಗಳಲ್ಲಿ ಖಲೀಫರ ಸಾಮ್ರಾಜ್ಯಗಳು, ರೋಮ ಸಾಮ್ರಾಜ್ಯವನ್ನು ಮೀರಿದ್ದವು. "ಹಿಜರೀ ಶಕೆಯ ಮೊದಲಿನ ಶತಕದ ಕೊನೆಗೆ, ಪೃಥ್ವೀ ತಲದ ಮೇಲೆ ಖಲೀಫರೇ ಅತ್ಯಂತ ಬಲಿಷ್ಠ ಸಮ್ರಾಟರಿದ್ದರು." ಎಂದು ಇತಿಹಾಸಕಾರ ಗಿಬನ್ನನು ಬರೆಯುತ್ತಾನೆ.

ಸಂಪೂರ್ಣ ಏಶಿಯಾ ಮತ್ತು ಏಶಿಯಾಮಾಯನರಗಳನ್ನು ಪಾದಾಕ್ರಾಂತಗೊಳಿಸಿ ಅರಬಸೇನೆಯು ಇಜಿಪ್ತ ಮತ್ತು ಆಫ್ರಿಕೆಯ ದಂಡೆಗೆ ಹೊಂದಿರುವ ಮೊರೊಕ್ಕೊ ವರೆಗಿನ ಪ್ರದೇಶವನ್ನು ವಶಪಡಿಸಿಕೊಂಡಿತು. ಭೂಮಧ್ಯಸಮುದ್ರದ ಪ್ರವೇಶದ್ವಾರವನ್ನು ಬಂದುಮಾಡಿ ಬಿಡುವ ಸಾಮುದ್ರಧುನಿಯಲ್ಲಿ ಅರಬ ಸೇನಾಪತಿ ಜೇಬಲನು ಸ. ೭೧೧ರಲ್ಲಿ ಕಾಲಿಟ್ಟನು. ಆ ಸ್ಥಳಕ್ಕೆ ಜಿಬ್ರಾಲ್ಟರ ಎಂಬ ಹೆಸರು ಅವನ ಹೆಸರಿನಿಂದಲೇ ಬಂತು. ( ಜೇಬಲ-ಉಲ್-ತಾರೀಕ ಎಂದರೆ ಜೇಬಲನ ಸಾಮುದ್ರ-ಧುನಿ). ಅರಬರು ಸ್ಪೇನ ದೇಶವನ್ನು ವ್ಯಾಪಿಸಿದರು. ಮತ್ತು ಅಲ್ಲಿ ಅವರ ಸತ್ತೆಯು ನೂರಾರು ವರ್ಷಗಳ ವರೆಗೆ ನಡೆಯಿತು ( ಸ. ೭೧೨-೧೪೯೨) ಸ. ೭೩೨ರಲ್ಲಿ ಟೂರ್ಸದ ಕಾಳಗದಲ್ಲಿ ಫ್ರಾನ್ಸದ ರಾಜನಾದ ಚಾರ್ಲಸ್ ಮಾರ್ಟೆಲನು ದಕ್ಷಿಣ ಫ್ರಾನ್ಸದ ಮೇಲಿನ ಆಕ್ರಮಣಕಾರರನ್ನು ಪರಾಭವಗೊಳಿಸಿದನು. ( ಮುಹಮ್ಮದ ಪೈಗಂಬರನ ಮರಣದ ನಂತರ ಸರಿಯಾಗಿ ನೂರನೆಯ ವರ್ಷಕ್ಕೆ ಈ ಘಟನೆಯು ಸಂಭವಿಸಿತು.)

ಸ. ೭೧೭ರಲ್ಲಿ ಕಾನಸ್ಟಾಂಟಿನೋಪಲವನ್ನು ವಶಪಡಿಸಿಕೊಳ್ಳುವ ಕಾರ್ಯದಲ್ಲಿ ಮುಸಲ್ಮಾನೀ ಸೈನ್ಯಕ್ಕೆ ಅಪಯಶವು ಬಂದುದರಿಂದ ಪೂರ್ವ ಯುರೋಪದೊಳಗಿನ ಅವರ ಪ್ರಗತಿಯು ನಿಂತಿತು. ಭೂಮಧ್ಯ ಸಮುದ್ರದೊಳಗಿನ ಸಿಸಿಲೀ, ಕ್ರೀಟ ಮತ್ತು ರ್‍ಹೋಡ್ಸ ನಡುಗಡ್ಡೆಗಳನ್ನು ಕೆಲವು ವರ್ಷಗಳ ವರೆಗೆ ಮುಸಲ್ಮಾನರು ವ್ಯಾಪಿಸಿದ್ದರು. ಇದೇ ಸಮಯದಲ್ಲಿ ಪೂರ್ವದ ಕಡೆಯ ಅವರ ಆಕ್ರಮಣವು ಭಾರತವರ್ಷದ ವರೆಗೆ ಬಂದು ನಿಂತಿದ್ದಿತು. ಸಿಂಧ ಮತ್ತು ಸ್ಪೇನಗಳ ಮೇಲೆ ಅವರು ಒಂದೇ ವೇಳೆಗೆ ದಾಳೀ ಮಾಡಿದ್ದರು.

**ಇಸ್ಲಾಮುದ ಉತ್ತರಾಧಿಕಾರ :—** ಇಸ್ಲಾಮ ಧರ್ಮದ ಮೂಲಸ್ವರೂಪ ಮತ್ತು ಅನಂತರ ಇಸ್ಲಾಮ ಧರ್ಮವನ್ನು ಸ್ವೀಕರಿಸಿದ ತುರ್ಕ ಜನರು ಆ ಧರ್ಮಕ್ಕೆ ಕೊಟ್ಟ ವಿಪರ್ಯಸ್ತ ರೂಪ, ಇವುಗಳಲ್ಲಿ ಬಹಳ ಅಂತರವಿದೆ. ಇರಾಣ ಮತ್ತು ಅರಬ ಜನರು ತುರ್ಕ ಜನರಷ್ಟು ಧರ್ಮಾಂಧರೂ ಕ್ರೂರರೂ ಇದ್ದಿಲ್ಲ. ಆದರೆ ದುರ್ದೈವ-ದಿಂದ ಧರ್ಮಾಂಧರಾದ ತುರ್ಕರೇ ಭಾರತದಲ್ಲಿ ಇಸ್ಲಾಮುದ ಪ್ರಚಾರವನ್ನು ಮಾಡಿದರು. ಈ ಕಾರ್ಯದಲ್ಲಿ ತುರ್ಕರ ಕೈಯಿಂದಾದ ದುಷ್ಕೃತ್ಯಗಳ ಮೂಲಕ ನಮ್ಮ ಮನಸ್ಸಿನಲ್ಲಿ ಇಸ್ಲಾಮ ಧರ್ಮದ ವಿಷಯಕ್ಕೆ ತಪ್ಪು ಗ್ರಹಿಕೆಯಾಗಿದೆ. ಮೊಘಲರು ಮೂಲತಃ ತುರ್ಕರು. ಆದರೆ ಅವರ ಮೇಲೆ ಇರಾಣಿ ಸಂಸ್ಕೃತಿಯ ಪ್ರಭಾವವು ಬಿದ್ದಿತ್ತು. ಅವರ ಒಳ್ಳೆಯ ಮತ್ತು ಕೆಟ್ಟ ಕೆಲಸಗಳ ಬಗ್ಗೆ ನಾವು ಮುಂದೆ ವಿಚಾರ ಮಾಡುವವರಿದ್ದೇವೆ. "ಕಾಲಕ್ಕೆ ಅತ್ಯಂತ ಅನುರೂಪವಾದ ಸಾಮಾಜಿಕ ಮತ್ತು ರಾಜಕೀಯ ವ್ಯವ-ಸ್ಥೆಯು ಇಸ್ಲಾಮುದಲ್ಲಿ ಅಡಕವಾಗಿದ್ದುದರಿಂದ ಅವರ ಕಣ್ಣುಗಳು ಕುರುಡಾಗಿದ್ದವು. ಉಳಿದ ಯಾವುದೇ ಧರ್ಮಕ್ಕಿಂತ ಇಸ್ಲಾಮುಧರ್ಮವು ಜನರ ಮನಸ್ಸನ್ನೆ ಹಿಡಿದಿದ್ದಿತು." ಎಂದು ಪ್ರಸಿದ್ಧ ಇತಿಹಾಸಕಾರನಾದ ಎಚ್. ಜಿ. ವೆಲ್ಸನು ಬರೆಯುತ್ತಾನೆ. ಈ ವಿಧಾ-ನವು ಅರಬಸ್ತಾನದ ವಿಷಯದಲ್ಲಿ ಎಷ್ಟು ಸತ್ಯವೆನಿಸುವದೋ ಅಷ್ಟು ಇತರ ಪ್ರದೇಶಗಳ ವಿಷಯದಲ್ಲಿ ಒಮ್ಮೆಲೇ ಅನಿಸುವದಿಲ್ಲ. ಆದರೂ, ಇಸ್ಲಾಮುದ ಉದಯದ ಕಾಲಕ್ಕೆ ರೋಮ ಮತ್ತು ಇರಾಣ ಇವುಗಳೊಳಗಿನ ಸಾಮ್ರಾಜ್ಯಗಳಿಗೆ ಇಳಿಕೆಯ ಕಾಲವು ಬಂದಿದ್ದಿತೆಂಬುದು ಮಾತ್ರ ನಿಜ. ನವೋದಿತ ಇಸ್ಲಾಮೀ ಸತ್ತೆಯಲ್ಲಿ ಯಾವದೋ ಒಂದು ಪ್ರಕಾರದ ಚೈತನ್ಯವು ಇದ್ದುದರಿಂದ ಅದರ ಎದುರಿಗೆ ಯಾರೂ ತಡೆಯಲಿಲ್ಲ. ಜ್ಯೂಲಿಯಸ್ ಸೀಝರನಂತೆ 'ಇಸ್ಲಾಮುವು ಬಂದಿತು, ದೃಷ್ಟಿಕ್ಷೇಪ ಮಾಡಿತು, ಮತ್ತು ವಿಜಯವನ್ನು ಗಳಿಸಿತು.' ಇಸ್ಲಾಮುವು ಅರಬಸ್ತಾನದ ಹೊರಗಿನ ಜನರ ಮನಸ್ಸನ್ನು ಹಿಡಿದುದು ಕೇವಲ ಖಡ್ಗಬಲದಿಂದಲ್ಲ. ಜನರ ಮನಸ್ಸಿನ ಮೇಲೆ ಪರಿ-ಣಾಮವನ್ನುಂಟುಮಾಡುವ ಎಷ್ಟೋ ಒಳ್ಳೆಯ ಅಂಶಗಳು ಇಸ್ಲಾಮ ಧರ್ಮದಲ್ಲಿ-ದ್ದವು. ಮಕ್ಕೆಯ ವಿಜಯದ ನಂತರ ಮುಹಮ್ಮದ ಪೈಗಂಬರನು ತೋರಿಸಿದ ಆತ್ಮ ಸಂಯಮ ಮತ್ತು ಸಹಿಷ್ಣುವೃತ್ತಿ ಇವುಗಳ ಮೂಲಕ ಅವನ ಅನುಯಾಯಿಗಳಿಗೆ ಅವನು ಒಳ್ಳೆಯ ಪಾಠವನ್ನು ಹಾಕಿಕೊಟ್ಟನು. "ಧರ್ಮದ ವಿಷಯದಲ್ಲಿ ಯಾರ ಮೇಲೆಯೂ ಒತ್ತಾಯ ಮಾಡಕೂಡದು" ಎಂದು ಆತನು ಪ್ರಕಟಪಡಿಸಿದನು. ಅವನ



ಅಲ್ಹಾಂಬ್ರಾ ( ಸ್ಪೇನ)

ಅಭಿಪ್ರಾಯದಂತೆ 'ಜಿಹಾದ' ಎಂದರೆ 'ಪರಮೇಶ್ವರನ ಪ್ರಾಪ್ತಿಯ ಮಾರ್ಗದ ಪ್ರಯತ್ನ'.
ಅದರಂತೆ 'ಇಸ್ಲಾಮ'ಎಂದರೆ 'ಪರಮೇಶ್ವರನ ಇಚ್ಛೆಗೆ ಶರಣು ಹೋಗುವದು. ಖಡ್ಗಕ್ಕಿಂತ ಲೆಕ್ಕಣಿಕೆಯ ಸಾಮರ್ಥ್ಯವು ಹೆಚ್ಚು ಎಂದು ಅವನು ಹೇಳಿದನು. 'ಮುಸಲ್ಮಾನ' ಎಂದರೆ ಎಲ್ಲರೂ ಒಂದೇ ಅವರಲ್ಲಿ ಮೇಲು ಮತ್ತು ಕೀಳು ವಂಶ, ಬಡವ, ಶ್ರೀಮಂತ ಇತ್ಯಾದಿ ಭೇದಕ್ಕೆ ಸ್ಥಾನವಿಲ್ಲವೆಂದು ಆತನು ಪ್ರತಿಪಾದಿಸಿದನು. ಕುರಾಣವನ್ನು ಬಿಟ್ಟು ಇತರ ಧರ್ಮಗ್ರಂಥಗಳನ್ನು ಮನ್ನಿಸುವ ಜ್ಯೂ ಮತ್ತು ಕ್ರಿಸ್ತೀ ( ಇವರಿಗೆ ' ಝಿಮ್ಮೀ ' ಎನ್ನುತ್ತಿದ್ದರು ) ಜನರ ವಿಷಯಕ್ಕೆ ಅವನು ಆದರಸಹಿತ-ವಾದ ಸಹಿಷ್ಣುತೆಯನ್ನು ಪ್ರಕಟಿಮಾಡಿದನು. ಇಸ್ಲಾಮದ ರಕ್ಷಣೆಗಾಗಿ ಯುದ್ಧ ಮಾಡುವದು, ಅವನ ಪ್ರತಿಯೊಬ್ಬ ಅನುಯಾಯಿಯ ಕರ್ತವ್ಯವಾಗಿದ್ದಿತು. ಮುಸಲ್ಮಾನೇತರರಿಗೆ ಈ ಕರ್ತವ್ಯಪಾಲನೆಯಲ್ಲಿ ಸಹಭಾಗಿಗಳಾಗುವದು ಶಕ್ಯವಿದ್ದಿಲ್ಲ. ಅದಕ್ಕೆ ಬದಲಾಗಿ 'ಜಿಜಿಯಾ' ಎಂಬ ಕರವನ್ನು ಅವರು ಕೊಡಬೇಕಾಯಿತು. ಆ ಮೇಲೆ ' ಜಿಜಿಯಾ ' ಕರವನ್ನು ತಲೆಪಟ್ಟಿಯೆಂದು ಪ್ರತಿಯೊಬ್ಬ ಮೂರ್ತಿಪೂಜಕನ ಮೇಲೆ ಹೇರಲಾಯಿತು. ಸ್ಪೇನವನ್ನು ಆರಬರು ವಶಪಡಿಸಿಕೊಂಡಬಳಿಕ ಅಲ್ಲಿಯ ಪ್ರಸಿದ್ಧವಾದ ಸೇಂಟ ವಿನ್ಸೆಂಡದ ಪ್ರಾರ್ಥನಾ ಮಂದಿರವನ್ನು ನಾಶಗೊಳಿಸದೆ, ಅದರೊಳಗಿನ ಅರ್ಧ ಭಾಗವನ್ನು ಮುಸಲ್ಮಾನರ ಉಪಯೋಗಕ್ಕೆಂದು ಕೊಂಡುಕೊಂಡರು. ನಂತರ ಅಬ್ದುಲ್ ರಹಮಾನನು ಆ ಮಂದಿರವನ್ನು ಸಂಪೂರ್ಣವಾಗಿ ಕೊಂಡು ಅದನ್ನು ಮಶೀದೆಯನ್ನಾಗಿ ರೂಪಾಂತರಿಸಿದನು. ಭಾರತಕ್ಕೆ ಬಂದ ತುರ್ಕೀ ಮುಸಲ್ಮಾನರ ಮನಸ್ಸಿನ ವೃತ್ತಿಯು ಇದಕ್ಕಿಂತಲೂ ಎಷ್ಟು ಬೇರೆಯಾಗಿದ್ದಿತು ! ಸೋಮನಾಥದ ಮೂರ್ತಿಯ ಮಣಗಟ್ಟಲೆ ಬಂಗಾರವನ್ನು ಕೊಟ್ಟರೂ ಗಝನಿ ಮಹಮ್ಮದನು " ತಾನು ಮೂರ್ತಿ ಭಂಜಕನಿದ್ದೇನೆ " ಎಂದು ಉದ್ಗಾರ ತೆಗೆದುದನ್ನು ನಾವು ಓದಿದ್ದೇವೆ.

ಕ್ರಿಸ್ತೀ ಜನರು ಆರಬ ವಿಜೇತರಿಗೆ ' ಮೂರ ' ಎನ್ನುತ್ತಿದ್ದರು. ಈ ಮೂರ ಜನರ ರಾಜ್ಯದಲ್ಲಿ ಕಾಡೋರ್ವ್ಹ ಎಂಬುದು ಒಂದು ದೊಡ್ಡ ಸಾಂಸ್ಕೃತಿಕ ಕೇಂದ್ರವಾಯಿತು. ಯುರೋಪ ಖಂಡದ 'ಅಂಧಕಾರ ಯುಗದಲ್ಲಿ' ಮಾಗದರ್ಶಕ ದೀಪ-ವೆಂದು ಕಾರ್ಡೋವ್ಹಾದ ವರ್ಣನೆ ಮಾಡಲಾಗಹತ್ತಿತು. ಮುಸಲ್ಮಾನರು ಮೊದಲು ತಯಾರಿಸಿದ ದೊಡ್ಡ ದೊಡ್ಡ ಶಿಲ್ಪ ಕೆಲಸಗಳಲ್ಲಿ ಸೇವ್ಹಿಲ್ ಎಂಬಲ್ಲಿಯ ಅಲ್ಕಾ-ಝಾರ ಮತ್ತು ಗ್ರೇನಡಾ ಎಂಬಲ್ಲಿಯ ಅಲ್ಹಾಂಬ್ರಾ, ( ಎರಡೂ ಸ್ಪೇನದೊಳಗಿವೆ ) ಬಗದಾದದಲ್ಲಿಯ ಭವ್ಯ ಮಶೀದೆ ಮತ್ತು ಇಸ್ಪಹಾನದೊಳಗಿನ ಜುಮ್ಮಾ ಮಶೀದೆ ಇವು ವಿಶೇಷ ಉಲ್ಲೇಖನೀಯವಾಗಿವೆ. ಕಾಡೋರ್ವ್ಹಾ ಇದು ಜಗತ್ತಿನೊಳಗಿನ ಅದ್ಭುತ ನಗರವಾಗಿತ್ತು. ಅಲ್ಲಿ ೭೦೦ ಸಾರ್ವಜನಿಕ ಸ್ನಾನಗೃಹಗಳಿದ್ದವು. 'ಮದಿನತ-ಉಲ-ಝುಹರ' ಎಂಬ ಶೀತ ಅರಮನೆಯು 'ಅರೇಬಿಯನ್ ನಾಯಿಟ್ಸ' ಸ್ವಪ್ನ ಸೃಷ್ಟಿಯೊಳಗಿನ ಅರಮನೆಯ ಮೂರ್ತಿಮಂತ ದೃಶ್ಯವಾಗಿತ್ತು. ಯುರೋಪಕ್ಕೆ ಬೇಕಾದ ಸಂಗೀತಜ್ಞ, ಶಸ್ತ್ರವೈದ್ಯ, ಶಿಲ್ಪಕಾರ ಮತ್ತು ಇತರ ಕಲಾಕಾರ ಇವರನ್ನು ' ಮೂರ' ಜನರ ವಶದೊಳಗಿನ ಸ್ಪೇನದಿಂದ ದೊರಕಿಸಬೇಕಾಗುತ್ತಿತ್ತು.

ಧಾತು ಕೆಲಸ, ಕಾಜಿನ ಕೆಲಸ 'ಮತ್ತು ಪಾತ್ರೆಗಳನ್ನು ತಯಾರಿಸುವ ಕೆಲಸ ಇವುಗಳಲ್ಲಿ ಆರಬ ಕಲಾಕಾರರು ಬಹಳ ಕುಶಲರಿದ್ದರು. ರಾಸಾಯನಿಕ ಔಷಧ ಗಳನ್ನು ತಯಾರಿಸುವದರಲ್ಲಿ ಅವರು ಪಳಗಿದವರಿದ್ದರು. ಒಡ್ಡುಗಳನ್ನು ಹಾಕಿ ಹೊಲ ಗಳಲ್ಲಿ ಅವರು ಅನೇಕ ಸುಧಾರಣೆಗಳನ್ನು ಮಾಡಿದರು ಕಲವು ಮಾಡಿದ ಎಷ್ಟೋ ಅಪರಿಚಿತ ಹೂ-ಫಲಗಳನ್ನು ಬೆಳೆಸಿದರು. ಸೋಫಾ, ಅಲಮಿರಾ, ಅಲಜಿಬ್ರಾ, ಝೆನಿಥ್, ನಾದಿರ ಎಂಬ ಇಂಗ್ಲಿಷ ಭಾಷೆಯ ಶಬ್ದಗಳು ಆರಬ ಜನರ ಸಾಂಸ್ಕೃತಿಕ ದೇಣಿಗೆಯ ಕುರುಹುಗಳು. ಭಾರತೀಯರ ಗಣಿತದೊಳಗಿನ 'ಶೂನ್ಯದ' ಕಲ್ಪನೆ ಯನ್ನು ಯುರೋಪಕ್ಕೆ ಕೊಟ್ಟವರು ಅರಬರೇ ಆಗಿದ್ದಾರೆ. ಆದರಂತೆ ಚೀನದ ರೇಶಿಮೆ ಮತ್ತು ಕಾಗದ ಇವು ಯುರೋಪಕ್ಕೆ ಆರಬರ ಮುಖಾಂತರವೇ ದೊರೆತವು. ಯುರೋಪದ ವೈಜ್ಞಾನಿಕ ಮತ್ತು ವೈದ್ಯಕೀಯ ಪ್ರಗತಿಗೆ ಆರಬ ಜನರು ಬೆಲೆ ಯುಳ್ಳ ನಿಧಿಯನ್ನು ಇತ್ತರು. ಅರಬ ಪಂಡಿತರ ಪ್ರೇರಣೆಯೇ ಯುರೋಪದೊಳಗೆ 'ಜ್ಞಾನದ ಪುನರುಜ್ಜೀವನಕ್ಕೆ ಸಾಕಷ್ಟು ಕಾರಣವಾಯಿತು. ( ಈ ವಿಷಯವು ಮುಂದೆ ಬರುವದು )

ಕೆಲವು ಪ್ರಸಿದ್ಧ ವ್ಯಕ್ತಿಗಳ ಪರಿಚಯ ಮಾಡದಿದ್ದರೆ ಇಸ್ಲಾಮದ ಈ ನಿಧಿಯ ಸಂಗತಿಯು ಅಪೂರ್ಣವೆನಿಸುವದು. ಆ ದೃಷ್ಟಿಯಿಂದ ಅಂಥ ಕೆಲವು ವ್ಯಕ್ತಿಗಳ ಕಾರ್ಯದ ವಿವರವನ್ನು ಸ್ವಲ್ಪದರಲ್ಲಿ ಕೊಡಲಾಗಿದೆ.

ಗಝ್ನಿ ಮುಹಮ್ಮದನ ಜೊತೆಗೆ ಭಾರತಕ್ಕೆ ಬಂದ ಅಲ್ಬೇರುನಿಯು ( ಸ. ೯೭೩-೧೦೪೮ ) ನಮಗೆ ಪರಿಚಿತನಿದ್ದಾನೆ. ಅವನು ಅರಬೀ ಮತ್ತು ಇರಾಣೀ ಭಾಷೆಯೊಳಗಿನ ಒಬ್ಬ ಮಹಾ ಪಂಡಿತನು. ಭಾರತಕ್ಕೆ ಬಂದ ಬಳಿಕ ಅವನು ಸಂಸ್ಕೃತದ ಅಭ್ಯಾಸವನ್ನು ಮಾಡಿದನು. ಭಾರತದ ಪ್ರಾಚೀನ ವಾಙ್ಮಯದೊಳಗಿನ ಜ್ಞಾನನಿಧಿಯು ಅವನಿಗೆ ಅಮೌಲ್ಯವೆನಿಸಿತು. ಇರಾಣದ ಸ್ವರ್ಗೀಯ ಕವಿ ಫಿರ್ದೌ-ಸಿಯು ( ಜಗತ್ಪ್ರಸಿದ್ಧ ಶಾಹ-ನಾಮದ ಕರ್ತೃ ) ಅಲ್ಬೇರುನಿಯ ಸಮಕಾಲೀನನು. ಉಮರ ಖಯಾಮನೆಂಬ ಇನ್ನೊಬ್ಬ ದೊಡ್ಡ ಇರಾಣಿ ಕವಿಯು ಈ ಕಾಲದಲ್ಲಿ ಆಗಿಹೋದನು. ಅವನು ಬೀಜಗಣಿತದ ವಿಷಯಕ್ಕೆ ಒಂದು ಮಹತ್ವದ ಗ್ರಂಥವನ್ನು ಬರೆದಿದ್ದನೆಂಬುದು ಹೆಚ್ಚಾಗಿ ಯಾರಿಗೂ ಗೊತ್ತಿಲ್ಲ. ಈ ಕಾಲದ ಮುಸಲ್ಮಾನ ಪಂಡಿತರ ಬುದ್ಧಿಮತ್ತೆಯು ನಿಜವಾಗಿ ಸರ್ವವಿಧವಾಗಿದ್ದಿತು.

ಯುರೋಪದ ಮಧ್ಯಯುಗದಲ್ಲಿ ಅವಿಸೆನ್ನಾ ( ಸ. ೯೮೦-೧೦೩೭ ) ಮತ್ತು ಅವೇರಾಸ ( ಸ. ೧೧೨೬-೯೮ ) ಇವರಿಬ್ಬರು ಪ್ರಸಿದ್ಧಿಗೆ ಬಂದರು. ಮೊದಲನೆ ಯವನು ತತ್ವಜ್ಞನಾಗಿದ್ದು ವಿಜ್ಞಾನ ಮತ್ತು ಗಣಿತ ಇವುಗಳ ಅಭ್ಯಾಸಿಯಾಗಿದ್ದನು. ಭಾರತದ ಚರಕ ಮತ್ತು ಸುಶ್ರುತ ಇವುಗಳಿಗೆ ಸರಿಯಾದ ವೈದ್ಯಕೀಯ ಶಾಸ್ತ್ರದ ಗ್ರಂಥಗಳನ್ನು ಅವನು ಬರೆದನು. ಪ್ರಯೋಗಾವಸ್ಥೆಯಲ್ಲಿಯ ಯುರೋಪೀಯ ವಿಜ್ಞಾನಕ್ಕೆ 'ಅವೇರಿಝುಮ್' ಎಂಬ ಹೆಸರು ಅವೇರಾಸನ ಮೂಲಕ ಬಂತು.

ಸ. ೭೦೦ ರಿಂದ ೧೧೦೦ರ ವರೆಗಿನ ಕಾಲವು ಇಸ್ಲಾಮ ಇತಿಹಾಸದೊಳಗಿನ

"ಸುವರ್ಣ ಯುಗ'ವೇ ಸರಿ. ಈ ಕಾಲದಲ್ಲಿ ರಾಝೀಸನ ( ಸ. ೮೬೫-೯೨೫ ) "ಅಲ್‌ಹಾವೀ' ಎಂಬ ಅತ್ಯಂತ ಉದ್ಬೋಧಕ ಗ್ರಂಥವು ಸಿದ್ಧವಾಯಿತು. ವೈದ್ಯಕೀಯ ಶಾಸ್ತ್ರದಲ್ಲಿ ಅದೊಂದು ಜ್ಞಾನಕೋಶವೇ ಆಗಿದೆ. ಪ್ರತಿಯೊಂದು ವ್ಯಾಧಿಯ ಮೇಲೆ ರಾಝೀಸನು, ಗ್ರೀಕ, ಅರಬ, ಇರಾಣಿ ಮತ್ತು ಭಾರತೀಯ ವೈದ್ಯರ ಆಧಾರವನ್ನು ಕೊಟ್ಟು ಕೊನೆಗೆ ತನ್ನ ವೈಯಕ್ತಿಕ ಅಭಿಪ್ರಾಯವನ್ನು ಕೊಟ್ಟಿದ್ದಾನೆ. ಮೈಲಿ ಮತ್ತು ಗೊಬ್ಬರ ಇವುಗಳ ಚಿಕಿತ್ಸೆಯ ವಿಷಯವಾಗಿ 'ಅಲ್-ಹಾವೀ'ಯಲ್ಲಿ ಹೇಳಿದುದನ್ನು ಮುಂದೆ ಅವತರಣಿಕೆಯಲ್ಲಿ ಕೊಡಲಾಗಿದೆ. ಅದರ ಮೇಲಿಂದ ಈ ಗ್ರಂಥದ ಸ್ವರೂಪವು ಎಷ್ಟು ಶಾಸ್ತ್ರಶುದ್ಧವಿದ್ದಿತೆಂಬುದರ ಕಲ್ಪನೆಯು ಬರುವದು.

## ಅವತರಣಿಕೆ

'ಮೈಲಿಯು ಏಳುವ ಮುಂಚೆ ಒಂದೇ ಸವನೆ ಜ್ವರ, ಬೆನ್ನಲ್ಲಿ ನೋವು, ಮೂಗಿನಲ್ಲಿ ಉರಿಯುವದು, ನಿದ್ರೆಯಲ್ಲಿ ಚಳಿ ಎನಿಸುವದು ಇತ್ಯಾದಿ ಸಂಗತಿಗಳು ಘಟಿಸುವವು. ಮೈಲಿಯು ಎದ್ದ ಮುಖ್ಯ ಲಕ್ಷಣಗಳೆಂದರೆ-ಜ್ವರ ಬರುವದು, ಮತ್ತು ಬೆನ್ನು ನೋಯುವದು, ಎಲ್ಲ ಅವಯವಗಳು ಹೊಡೆಯುವದು, ಮುಖದ ಮೇಲೆ ಬೊಕ್ಕೆಗಳಾಗುವದು, ಗಲ್ಲ ಮತ್ತು ಕಣ್ಣುಗಳು ಬಹಳ ಕೆಂಪಗಾಗುವವು, ಶರೀರವು ಜಡವಾಗುವದು, ಕಂಠ ಮತ್ತು ಎದೆಯು ನೋಯಹತ್ತಿ ಶ್ವಾಸೋಚ್ಛ್ವಾಸ ಮಾಡುವಾಗ್ಗೆ ಮತ್ತು ಕೆಮ್ಮುವಾಗ್ಗೆ ತೊಂದರೆಯಾಗುವದು, ಬಾಯಿ ಒಣಗುವದು, ಗೊಗ್ಗರುಧ್ವನಿ ತಲೆನೋವು ಮತ್ತು ತಲೆ ಜಡವಾಗುವದು, ಮಳಮಳಿಸುವದು ಮತ್ತು ಸಮಾಧಾನವಿಲ್ಲದಿರುವದು. ಗೊಬ್ಬರ ಬೇನೆಯಲ್ಲಿ ಮಳಮಳಿಸುವದು ಮತ್ತು ಅಸ್ವಸ್ಥತೆಗಳು ಹೆಚ್ಚು ಪ್ರಮಾಣದಲ್ಲಿ ಇದ್ದರೆ ಮೈಲಿಯಲ್ಲಿ ಬೆನ್ನುನೋವು ಹೆಚ್ಚು ತೀವ್ರವಾಗಿರುತ್ತದೆ'.

—ರಾಝೀಸನ 'ಅಲ್-ಹಾವಿ'ಗ್ರಂಥದಿಂದ

## ಅಭ್ಯಾಸ

೧. ಅರಬ ದೇಶಬಾಂಧವರಿಗೆ 'ಇಸ್ಲಾಮು' ಧರ್ಮದ ಉಪದೇಶ ಮಾಡುವ ಅವಶ್ಯಕತೆಯು ಮುಹಮ್ಮದನಿಗೆ ಏಕೆ ಅನಿಸಿತು ?
೨. ಅವನು ಅರಬ ಜನರಿಗೆ ಏನೆಂದು ಉಪದೇಶ ಮಾಡಿದನು ?
೩. ಇಸ್ಲಾಮಿ ಸತ್ತೆಯ ಪ್ರಸಾರವು ಯಾವ ಪ್ರದೇಶಗಳಲ್ಲಿ ಆಯಿತು ? ಆ ಪ್ರಸಾರವನ್ನು ಯಾರು ಮತ್ತು ಯಾವಾಗ್ಗೆ ಬಂದು ಮಾಡಿದರು ?
೪. ಖಿಲಾಫತದ ಸಾಮರ್ಥ್ಯವು ಏತಕ್ಕಾಗಿ ಕಡಿಮೆಯಾಯಿತು ? ಅದರ ಪರಿಣಾಮವೇನಾಯಿತು ?
೫. ಇಸ್ಲಾಮ ಪ್ರಸಾರವು ಇಷ್ಟು ದೊಡ್ಡ ಪ್ರಮಾಣದಲ್ಲಿ ಆದುದರ ಕಾರಣಗಳನ್ನು ಕೊಡಿರಿ.
೬. ಸ್ಪಷ್ಟೀಕರಿಸಿರಿ :— (ಅ) ಕಾಬಾ (ಆ) ಹಿಜರಾ (ಇ) ಸುನ್ನೀ (ಈ) ಶಿಯಾ (ಉ) ಖಿಲಾಫತ (ಊ) ಕುರಾಣ ಮತ್ತು ಹಾದೀ (ಎ) ಜಿಹಾದ.
೭. ಅರಬ ಜನರು ಇಸ್ಲಾಂ ಸಾಮ್ರಾಜ್ಯದ ವೈಭವವನ್ನು ಹೆಚ್ಚಿಸಿದರೆಂಬುದಕ್ಕೆ ಕೆಳಗಿನ ಸಂಗತಿಗಳ ಬಗ್ಗೆ ಒಂದೊಂದು ಉದಾಹರಣೆಯನ್ನು ಕೊಡಿರಿ.
(ಅ) ಶಿಲ್ಪಕಲೆ (ಆ) ಶಾಸ್ತ್ರೀಯ ಸುಧಾರಣೆ (ಇ) ವೈದ್ಯಕೀಯ ಶಾಸ್ತ್ರ.

| ಭಾರತದಲ್ಲಿ ] | ಕಾಲಪಟ | [ ಭಾರತದ ಹೊರಗೆ |
| --- | --- | --- |
| | ೫೦೦ | |
| | | ಮುಹಮ್ಮದ ಪೈಗಂಬರರ ಜನ್ಮ |
| ಹರ್ಷವರ್ಧನ | ೬೦೦ | |
| | | ಹಿಜರಿ ಕಾಲಗಣನೆ |
| ಯುಅನಶ್ವಾಂಗ | | |
| ಸಿಂಧದ ಮೇಲೆ ಅರಬರ ದಾಳಿ | ೭೦೦ | ಅರಬರು ಜಿಬ್ರಾಲ್ಟರವನ್ನು ತಕ್ಕೊಂಡದ್ದು |
| ಬಾಪ್ಪಾರಾವಳ (ಚಿತೋಡ) | | ಟೂರ್ಸದ ಯುದ್ಧ ಚಾರ್ಲ್ಸ್ ಮಾರ್ಟೆಲ್ |
| ಶಂಕರಾಚಾರ್ಯರ ಜನ್ಮ | | ಖಲೀಫಾ ಹರೂನ ಅಲ್ |
| ಅಮೋಘವರ್ಷ | ೮೦೦ | ರಶೀದ ಶಾರ್ಲಮೇನ ಸಮ್ರಾಟ |
| ರಾಷ್ಟ್ರಕೂಟ | | |
| ಮಿಹಿರಭೋಜ ಪ್ರತಿಹಾರ | | |
| | ೯೦೦ | ರಾಝೆಸ್, ಅಲಹಾವಿ ವೈದ್ಯಕ ಗ್ರಂಥಕರ್ತೃ |
| | | ಅವಿಸೆನ್ನಾ ಗಣಿತ ತತ್ವಜ್ಞ |
| ಭೋಜ ಪರಮಾರ | ೧೦೦೦ | ಫಿರ್ದೋಸಿ ( ಶಾಹಾನಾಮಾ ಕರ್ತೃ ) |
| | | ಮುಹಮ್ಮದ ಗಝ್ನಿಯ ಮರಣ |
| | | ಪಂಡಿತ ಅಲ್ಬೆರುನಿ |
| | ೧೧೦೦ | ಧರ್ಮಯುದ್ಧ (ಕ್ರುಸೇಡ) |

೧ ಇಂಚಿಗೆ ೧೦೦ ವರ್ಷಗಳು




ಸುಲ್ತಾನಶಾಹಿ ಕಾಲದ ಹಿಂದುಸ್ಥಾನ

## ೨ನೆಯ ಪಾಠ

# ಭಾರತದಲ್ಲಿ ಇಸ್ಲಾಮಿ ಪ್ರಭುತ್ವದ ವಿಕಾಸ

**ಪ್ರಾಸ್ತಾವಿಕ :—** ಅರಬ ಜನರು ಸ್ಪೇನದಲ್ಲಿ ಪ್ರವೇಶ ಮಾಡಿದ ಸುಮಾರಿಗೆ ಅವರು ಭಾರತದ ಮೇಲೆ ದಾಳಿ ಮಾಡಿ ಸಿಂಧಪ್ರಾಂತವನ್ನು ಗೆದ್ದರು (ಸ. ೭೧೨). ಅಲ್ಪಾವಧಿಯಲ್ಲಿಯೇ ಅವರು ಸಿಂಧ ಮತ್ತು ಮುಲ್ತಾನಗಳಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿದರು. ಮತ್ತು ಮುಂದಿನ ೧೬೦ ವರ್ಷಗಳ ವರೆಗೆ ಈ ಭಾಗದಲ್ಲಿ ಅವರ ಪ್ರಭುತ್ವವು ಸ್ಥಿರವಾಗಿದ್ದಿತು. ಸ. ೭೨೨ರಲ್ಲಿ ಟೂರ್ಸ ಎಂಬಲ್ಲಿ ಚಾರ್ಲಸ್ ಮಾರ್ಟೆಲನು ಮುಸಲ್ಮಾನರನ್ನು ಸೋಲಿಸಿದ್ದರಿಂದ ಪಶ್ಚಿಮ ಯುರೋಪದಲ್ಲಿ ಮುಸಲ್ಮಾನರ ಪ್ರಗತಿಯು ಶಾಶ್ವತವಾಗಿ ನಿಂತುಬಿಟ್ಟಿತು. ಈ ವಿಜಯದ ಮೂಲಕ ಕ್ರಿಸ್ತೀ ಧರ್ಮೀಯ ಯುರೋಪವು ಮುಸಲ್ಮಾನರಿಂದ ಸಂಭವಿಸಬಹುದಾಗಿದ್ದ ರಾಜಕೀಯ ವರ್ಚಸ್ಸಿನಿಂದ ಪಾರಾಯಿತು. ಆದರೂ ಅರಬ ಜನರು ಯುರೋಪಕ್ಕೆ ಒಂದು ಸರ್ವ ಶ್ರೇಷ್ಠ ಸಂಸ್ಕೃತಿಯ ಪರಿಚಯವನ್ನು ಮಾಡಿಕೊಟ್ಟರು. ಮತ್ತು ಅದರಿಂದ ಯುರೋಪದಲ್ಲಿ ಜ್ಞಾನದ ಪುನರುಜ್ಜೀವನವಾಗಲಿಕ್ಕೆ ಯಾವ ರೀತಿಯ ಚಾಲನೆಯು ದೊರಕಿತೆಂಬುದರ ಸವಿಸ್ತಾರ ವಿವರವು ಹಿಂದಿನ ಪಾಠದಲ್ಲಿ ಬಂದಿದೆ. ಸುಮಾರು ಏಳು ಶತಕಗಳ ವರೆಗೆ ಸ್ಪೇನದ ಮೇಲೆ ಅರಬರ ಸತ್ತೆಯು ಸ್ಥಿರವಾಗಿತ್ತು. ಆದರೆ ಭಾರತದ ಮೇಲಿನ ಅವರ ಸತ್ತೆಯು ೧೫೦ ವರ್ಷ ಮಾತ್ರ ಇತ್ತು. ಇಷ್ಟು ದೀರ್ಘ ಕಾಲದ ವರೆಗೆ ಅಧಿಕಾರವು ಕೈಯೊಳಗಿದ್ದರೂ ಪಿರಿನಿಜ ಪರ್ವತದ ಆಚೆಗೆ ಮುಸಲ್ಮಾನರ ವರ್ಚಸ್ಸು ಉಳಿಯಲಿಲ್ಲ. ಆದರೆ ಭಾರತದ ಮೇಲೆ ಇಸ್ಲಾಮಧರ್ಮೀಯರ ಸತ್ತೆಯು ಸುಮಾರು ಸಾವಿರ ವರ್ಷ ಉಳಿಯಿತು. ಅರಬರು ೮ನೆಯ ಶತಮಾನದಲ್ಲಿ ಸಿಂಧವನ್ನು ಗೆದ್ದುದು ಇದರ ಕಾರಣವಾಗಿರದೆ ೧೧ನೆಯ ಶತಮಾನದಲ್ಲಿ ತುರ್ಕರು ಪಂಜಾಬವನ್ನು ಗೆದ್ದರೆಂಬುದಾಗಿದೆ.

ಒಂದು ಶ್ರೇಷ್ಠ ಸಂಸ್ಕೃತಿಯ ದರ್ಶಕರೆಂದು ಯುರೋಪದಲ್ಲಿ ಅರಬರಿಗೆ ಸ್ಥಾನವಿತ್ತು. ಆದರೆ ಭಾರತಕ್ಕೆ ಬಂದ ಅರಬ ಮತ್ತು ತುರ್ಕರಿಗೆ ಅವರ ಸಂಸ್ಕೃತಿಗಿಂತಲೂ ಶ್ರೇಷ್ಠವಾದ ಸಂಸ್ಕೃತಿಯು ಗಂಟುಬಿತ್ತು. ಆದ್ದರಿಂದ ಭಾರತದ ಮೇಲೆ ಆದ ಮುಸಲ್ಮಾನರ ಆಗಮನ ಪರಿಣಾಮವು ಯುರೋಪದಲ್ಲಿ ಆದ ಪರಿಣಾಮಕ್ಕಿಂತ ಭಿನ್ನಸ್ವರೂಪದ್ದಾಗಿದೆ.

ರಾಜಕೀಯ ದೃಷ್ಟಿಯಿಂದ ಕ್ರಿಸ್ತೀ ಧರ್ಮೀಯ ಯುರೋಪವು ಭಾರತದ ಮಾನದಿಂದ ಹೆಚ್ಚು ಬಲಾಢ್ಯವಾಗಿತ್ತು. ಅದರಿಂದ ಮುಸಲ್ಮಾನರ ಆಕ್ರಮಣಕ್ಕೆ ಯುರೋಪದಲ್ಲಿ ಅಡ್ಡಿಯುಂಟಾಯಿತು. ಆದರೆ ದುರ್ಬಲ ಭಾರತವು ಇಸ್ಲಾಮೀ

ಆಕ್ರಮಣವನ್ನು ತಡೆಯಲಿಲ್ಲ. ಆದರೂ ಗುರ್ಜರ-ಪ್ರತಿಹಾರರು ಆರಬರನ್ನು ಸಿಂಧ ಮುಲ್ತಾನಗಳ ಆಚೆ ಹೋಗಲು ಬಿಡಲಿಲ್ಲ. ಆದರೆ ಇದೇ ಗುರ್ಜರ ಪ್ರತಿಹಾರರ ನಂತರದ ಆರಸರು, ಭಾರತದ ಮೇಲೆ ೧೧ ನಲ ಯಶಸ್ವೀ ದಾಳಿಯನ್ನು ಮಾಡಿದ ಗಝ್ನಿ ಮುಹಮ್ಮದನನ್ನು ತಡೆದು ನಿಲ್ಲಿಸಲು (೧೧ನೆಯ ಶತಕದಲ್ಲಿ) ಆಸಮರ್ಥ-ರಾದರು. ಏಕೆಂದರೆ ಅವರಲ್ಲಿ ಮುಂಚಿನ ಕಸುವು ಉಳಿದಿರಲಿಲ್ಲ. ತತ್ಪರಿಣಾಮ-ವಾಗಿ ತುರ್ಕರ ಅಧಿಕಾರವು ಪಂಜಾಬದ ಮೇಲೆ ಸ್ಥಾಪಿತವಾಗಿ ಅದು ೧೭೬ ವರ್ಷ (ಸ. ೧೦೦೧ರಿಂದ ೧೧೭೬) ಬಾಳಿತು. ಗಝ್ನೀ ಮಹಮ್ಮೂದನ ದಾಳಿಗಳ ಮೂಲಕ ಒಮ್ಮೆ ತೆಗೆದ ವಾಯವ್ಯಸರಹದ್ದಿನೊಳಗಿನ ಪ್ರವೇಶದ್ವಾರವು ತೆರೆದೇ ಉಳಿಯಿತು. ಆದರೊಳಗಿಂದ ಮುಂದೆ ಒಂದರ ಬೆನ್ನು ಹಿಂದೆ ಒಂದರಂತೆ ಆಕ್ರಮಣ ಕಾರರ ಗುಂಪು ಭಾರತಕ್ಕೆ ಬಂದು ನೇರಿದವು. ಈ ಘಟನೆಯ ಪರಿಣಾಮವು ಬಹಳ ದೂರಗಾಮಿಯಾಯಿತು.

**ಮೊದಲನೆಯ ಅವಸ್ಥೆ:—** ಅರಬ ಜನರು ಇಸ್ಲಾಮ ಧರ್ಮವನ್ನು ಸ್ವೀಕರಿಸುವ ಮುಂಚೆಯೇ ಭಾರತಕ್ಕೆ ಅವರ ಪರಿಚಯವಿದ್ದಿತು. ಅವರು ಏಶಿಯಾ ಮಾಯನರ, ಇರಾಣ, ಅಫಗಾನಿಸ್ತಾನ, ಉತ್ತರ ಆಫ್ರಿಕಾ ಮತ್ತು ಸ್ಪೇನ ಇವುಗಳಲ್ಲಿ ವ್ಯಾಪಿಸಿದಂತೆ, ಭಾರತದಲ್ಲಿ ವ್ಯಾಪಿಸಲಿಲ್ಲ. ಸಿಂಧದ ಮೇಲೆ ಅವರು ದಾಳಿ ಮಾಡಿದ್ದರು. ಸಿಂಧದ ರಾಜನಾದ ದಾಹೀರರನ್ನು ಶಿಕ್ಷಿಸಲೋಸುಗ ಅದರ ತಳದಲ್ಲಿ ಆಕ್ರಮಣದ ಯೋಜನಾಬದ್ಧ ಉದ್ದೇಶವಿದ್ದಿಲ್ಲ. ಸಿಂಧದ ದಂಡೆಯಗುಂಟ ಹೊರಟ ಕೆಲವು ಆರಬ ವ್ಯಾಪಾರಿಗಳನ್ನು ಅವನ ಜನರು ಲೂಟಿಮಾಡಿದರು. ಇದರ ಹೊಣೆಗಾರಿಕೆಯನ್ನು ದಾಹೀರನು ಒಪ್ಪಲಿಲ್ಲ ಆಗ ಸ. ೭೧೨ರಲ್ಲಿ ಮುಹಮ್ಮದ ಬಿನ್-ಕಾಸೀಮನು ದಾಹೀರನನ್ನು ಶಿಕ್ಷಿಸಲು ಸಿಂಧದ ಮೇಲೆ ದಾಳಿ ಮಾಡಿದನೆಂಬ ಸಂಗತಿಯನ್ನು ನೀವು ಹಿಂದೆ ಓದಿರುವಿರಿ.

ಮುಹಮ್ಮದ-ಬಿನ್-ಕಾಸೀಮನು ಇಸ್ಲಾಮ ಪ್ರಸಾರದ ಧಾರ್ಮಿಕ ದಿಗ್ವಿಜಯಕ್ಕಾಗಿ ಬಂದಿರಲಿಲ್ಲವೆಂಬುದನ್ನು ಲಕ್ಷ್ಯದಲ್ಲಿ ಇಡಬೇಕು.

ಆಂತರ್ಗತ ದೌರ್ಬಲ್ಯದ ಮೂಲಕ ಸಿಂಧ ಮತ್ತು ಮುಲ್ತಾನ ಪ್ರಾಂತಗಳು ಅತಿ ಸಹಜವಾಗಿ ಆರಬರ (ಬಗದಾದ ಖಲೀಫರ ಆಜ್ಞೆಯ ಮೇರೆಗೆ ಬಂದ) ಕೈವಶ-ವಾದವು. ಈ ಹೊಸ ರಾಜ್ಯಕರ್ತರು ಮತ್ತು ಅವರ ಪ್ರಜೆಗಳ ನಡುವಿನ ಸಂಬಂಧವು ಸುಖಕರವಾಗಿ ಉಳಿಯುವದು ಸಾಧ್ಯವಾಗಲಿಲ್ಲ. ಮೊದಲು ಕೆಲವು ದಿವಸ ಅರಬರು ಅನೇಕ ವಿಧ್ವಂಸಗಳನ್ನು ಮಾಡಿ ಹಿಂದುಗಳ ಪವಿತ್ರ ಸ್ಥಳಗಳನ್ನು ನೆಲಸಮ ಮಾಡಿದರು. ಆದರೆ ಇಲ್ಲಿಯ ಮೂರ್ತಿಪೂಜಕ ಜನರೊಡನೆ ಹೊಂದಿಕೊಂಡಿರದೆ ತಮ್ಮದು ಇಲ್ಲಿ ಏನೂ ನಡೆಯದೆಂದು ಅವರಿಗೆ ಸಾವಕಾಶವಾಗಿ ತಿಳಿಯಿತು.

"ಕ್ರಿಸ್ತೀ, ಯಹುದೀ, ಇತ್ಯಾದಿ ಜನರ ಪ್ರಾರ್ಥನಾಗೃಹಗಳಂತೆ ಹಿಂದೂ ದೇವಾಲಯಗಳ ಪಾವಿತ್ರ್ಯವನ್ನು ರಕ್ಷಿಸಬೇಕು. ಆದರೆ ಹಿಂದುಗಳಿಂದ ಜಿಜಿಯಾ ಕರವನ್ನು ತೆಗೆದುಕೊಳ್ಳಬೇಕು. ಎಂದು ಖಲೀಫನು ಸಿಂಧದ ಅರಬ ಅಧಿಕಾರಿಗಳಿಗೆ

ಆದೇಶವಿತ್ತನು. ಅನಂತರ ಅರಬರು ಮತ್ತು ಹಿಂದುಗಳು ಪರಸ್ಪರ ಕೂಡಿಕೊಂಡು ಒತ್ತಟ್ಟಿಗೆ ಇರಲಾರಂಭಿಸಿದರು. ರಾಜ್ಯಕಾರಭಾರದಲ್ಲಿ, ವಿಶೇಷತಃ ಭೂಕಂದಾಯ ವ್ಯವಸ್ಥೆಯಲ್ಲಿ, ಹಿಂದು ಜನರ ಸಹಾಯ ಪಡೆಯುವದು ಅತ್ಯವಶ್ಯವೆಂಬುದು ಅರಬ ರಾಜ್ಯಕರ್ತರಿಗೆ ತಿಳಿದುಹೋಗಿತ್ತು. ಅರಬರು ಸಂಸ್ಕೃತವನ್ನು ಕಲಿತರು. ಅಲ್ಲದೆ ಅವರು 'ಬ್ರಹ್ಮಸಿದ್ಧಾಂತ'ದಂತಹ ಅನೇಕ ಸಂಸ್ಕೃತ ಗ್ರಂಥಗಳನ್ನು ಅರಬೀ ಭಾಷೆ ಯಲ್ಲಿ ಭಾಷಾಂತರಿಸಿದರು. ತಬರೀ ಎಂಬ ಅರಬ ಇತಿಹಾಸಕಾರನು ಈ ರೀತಿ ವರ್ಣಿಸಿದ್ದಾನೆ— "ಬಗದಾದ ಖಲೀಫನಾದ ಹರೂನ-ಅಲ್-ರಶೀದನು ಒಮ್ಮೆ ಅಸಾಧ್ಯ ಬೇನೆಯಿಂದ ಬಳಲುತ್ತಿದ್ದನು. ಆಗ್ಗೆ ಒಬ್ಬ ಭಾರತೀಯ ವೈದ್ಯನನ್ನು ಬಗದಾದಕ್ಕೆ ಕರೆಯಿಸಲಾಯಿತು. ಅವನು ಖಲೀಫನನ್ನು ಗುಣಪಡಿಸಿದನು."

ಈ ಕಾಲದ ಇನ್ನೊಂದು ಘಟನೆಯು ಉಲ್ಲೇಖನೀಯವಿದೆ. ಗುರ್ಜರ ಪ್ರತೀಹಾರರು ಅರಬರ ರಾಜಕೀಯ ಸತ್ತೆಯ ಪ್ರಗತಿಯನ್ನು ಮೂರು ನೂರು ವರ್ಷ ತಡೆದು ಹಿಡಿದಿದ್ದರೂ ಅದೇ ಕಾಲದಲ್ಲಿ ರಾಷ್ಟ್ರಕೂಟ ರಾಜ್ಯದಲ್ಲಿ ಅನೇಕ ಅರಬ ವ್ಯಾಪಾರಿಗಳಿಗೂ ಮುಸಲ್ಮಾನ ಧರ್ಮಪ್ರಸಾರಕರಿಗೂ ನೆಲೆಯೂರಿ ನಿಲ್ಲಲು ಅನುಮತಿ ಕೊಡಲಾಗಿತ್ತು. ಅವರಿಗೆ ಇಸ್ಲಾಮ ಧರ್ಮದ ತತ್ವಗಳನ್ನು ಉಪ ದೇಶಿಸಲು, ಮಸೀದೆಗಳನ್ನು ಕಟ್ಟಲು ರಾಷ್ಟ್ರಕೂಟರು ಸಹಾಯವನ್ನು ಒದಗಿಸಿದರು. ಈ ಜನರಿಗೆ ತಮ್ಮ ಕಾಯಿದೆ ಮತ್ತು ನಡೆವಳಿಕೆಯಂತೆ ವರ್ತಿಸಲು ಸ್ವಾತಂತ್ರ್ಯ-ವಿತ್ತು. ಹಿಂದುಗಳು ಮುಸಲ್ಮಾನರಿಗೆ ಹಾನಿಯನ್ನು ಉಂಟುಮಾಡಿದರೆ ಅದನ್ನು ಹಿಂದುಗಳು ತುಂಬಿಕೊಟ್ಟ ಉದಾಹರಣೆಗಳಿವೆ.

**ಎರಡನೆಯ ಅವಸ್ಥೆ :—** ಅರಬರ ನಂತರ ಭಾರತದ ಮೇಲೆ ದಾಳಿಮಾಡಿದ ತುರ್ಕರು ಇಸ್ಲಾಮದ ಉತ್ಪಾದಕರಾಗಿರದೆ ಧರ್ಮಾಂತರ ಹೊಂದಿದ ಮುಸಲ್ಮಾನ-ರಾಗಿದ್ದರು. ಧರ್ಮಾಂಧತೆ ಮತ್ತು ಅತ್ಯಾಚಾರಗಳಲ್ಲಿ ಅವರು ಅರಬರನ್ನು ಹಿಂದೆ ಹಾಕಿದ್ದರು.

ರೋಮನ್ ಸಾಮ್ರಾಜ್ಯಕ್ಕೆ ಆಘಾತವನ್ನುಂಟುಮಾಡಿದ ಜರ್ಮನ್ ಗುಂಪು ಗಳಂತೆ ತುರ್ಕರು ಖಲೀಫರ ಸಾಮ್ರಾಜ್ಯವನ್ನು ದುರ್ಬಲಗೊಳಿಸಿದರು. ಸ್ವಲ್ಪ ಕಾಲದಲ್ಲಿಯೇ ಮಂಗೋಲ ಆಕ್ರಮಣಕಾರರು ಬಗದಾದದ ಖಲೀಫರನ್ನು ವಿಧ್ವಂಸ ಮಾಡಿದರು. ತುರ್ಕೀ ಸುಲ್ತಾನರಲ್ಲಿ ಗಝನೀ ಮಹಮೂದನು ದೊಡ್ಡ ಕ್ರಾಂತಿ ಕಾರನಾಗಿ ಹೋದನು. ಮೇಲೆ ಮೇಲೆ ಖಲೀಫರ ಮಾನವನ್ನುಳಿಸಿದಂತೆ ನಟಿಸಿ ಒಳ್ಳೇ ಧೂರ್ತತನದಿಂದ ಸಾವಕಾಶವಾಗಿ ತನ್ನ ಸ್ವತಂತ್ರ ಸಾಮ್ರಾಜ್ಯವನ್ನು ಕಟ್ಟಿದನು. ಸಾಮ್ರಾಜ್ಯವಿಸ್ತಾರಕಾರ್ಯವನ್ನು ಪೂರ್ತಿಗೊಳಿಸಲು ಬೇಕಾಗುವ ಹಣವನ್ನು ದೊರಕಿಸಲು ಅವನು ತನ್ನ ಲೋಭಿ ದೃಷ್ಟಿಯನ್ನು ಭಾರತದ ಕಡೆಗೆ ಹೊರಳಿಸಿದನು. ಅವನು ಮಾಡಿದ ೧೭ ದಾಳಿಗಳಲ್ಲಿ ಸ. ೧೦೨೬ರ ಸೋಮನಾಥ ದಾಳಿಯಲ್ಲಿ ಅವನು ಅಗಣಿತ ಲೂಟಿಯನ್ನು ಮಾಡಿ ಅದನ್ನೆಲ್ಲ ಸ್ವದೇಶಕ್ಕೆ ಒಯ್ದನು. ಈ ಸಂಪತ್ತಿಯೊಡನೆ ಅವನು ಭಾರತೀಯ ಶಿಲ್ಪಿಗಳನ್ನು ಒಯ್ದನು. ಭಾರತೀಯ

ಸಂಪತ್ತು ಮತ್ತು ಶಿಲ್ಪಿಗಳ ಸಹಾಯದಿಂದ ಅವನು ‘ ವೈಭವಶಾಲಿ ಗಝನಿಯನ್ನು’ ಕಟ್ಟಿದನು. ಭಾರತದೊಳಗಿನ ಪಂಜಾಬ ಪ್ರಾಂತವೊಂದನ್ನು ಮಾತ್ರ ತನ್ನ ಸಾಮ್ರಾಜ್ಯಕ್ಕೆ ಜೋಡಿಸಿದನು. ಸ. ೧೧೮೬ರ ವರೆಗೆ ಪಂಜಾಬದ ಮೇಲೆ ಮಹ-ಮೂದನ ವಂಶದ ಅಧಿಕಾರವು ನಡೆಯಿತು.

ಘೋರಿ ಎಂಬ ಹೆಸರಿನ ಇನ್ನೊಬ್ಬ ತುರ್ಕ ಮನುಷ್ಯನು ಗಝನಿಯ ಸತ್ತೆಯನ್ನು ಸ. ೧೧೫೫ರಲ್ಲಿ ನಾಶಮಾಡಿದನು. ಘೋರಿಯು ಪಂಜಾಬದ ವರೆಗೆ ಮಹಮೂದನ ವಂಶಜರನ್ನು ಬೆನ್ನಟ್ಟಿ ಅಲ್ಲಿ ೧೧೮೬ರಲ್ಲಿ ಅವರನ್ನು ಅಳಿದುಬಿಟ್ಟನು. ಆನಂತರದ ಹೋರಾಟವು ಸುಪರಿಚಿತವಿದೆ. ಶಿಹಾಬುದ್ದೀನ ಮುಹಮ್ಮದ ಘೋರಿಯು ಭಾರತದ ಮೇಲೆ ದಾಳಿ ಮಾಡಿ ಸ. ೧೧೯೨ರಲ್ಲಿ ತರಾಯಿಯ ಬೈಲಿನಲ್ಲಿ ಪೃಥ್ವೀರಾಜ ಚೌಹಾಣನನ್ನು ಸೋಲಿಸಿದನು. ಭಾರತದಲ್ಲಿ ಆದ ಕಟು ಪ್ರತೀ-ಕಾರವನ್ನು ಘೋರಿಯು ಎದುರಿಸಬೇಕಾಯಿತು. ಆದರೂ ಘೋರಿಯ ನಂತರ ಅವನ ಕೈಯೊಳಗಿನ ಮೂಲ ಗುಲಾಮನಾದ ಕುತುಬುದ್ದೀನ ಐಬಕನು ಸ. ೧೨೦೬ರಲ್ಲಿ ದಿಲ್ಲಿಯಲ್ಲಿ ಇಸ್ಲಾಮ ಸತ್ತೆಯನ್ನು ಸ್ಥಾಪಿಸಿದನು. ಮುಂದೆ ಸ. ೧೮೫೭ರಲ್ಲಿ ಇಂಗ್ಲಿಷರು ಅದನ್ನು ನಷ್ಟಗೊಳಿಸಿದರು.

ಸ. ೧೨೦೬ ರಲ್ಲಿ ದಿಲ್ಲಿಯಲ್ಲಿ ಸುಲ್ತಾನಶಾಹಿಯು ಸ್ಥಾಪನೆಯಾಯಿತು ; ಭಾರತದ ಇತಿಹಾಸದಲ್ಲಿ ಈ ಘಟನೆಯು ಕ್ರಾಂತಿಕಾರಕವಾಯಿತು. ಇಸ್ಲಾಮ ಸತ್ತೆಯ ನಿಜವಾದ ಉದಯವು ಈ ಘಟನೆಯಿಂದ ಆಯಿತು.

**ಮೂರನೆಯ ಅವಸ್ಥೆ :—** ಸ. ೧೨೦೬ರ ವರೆಗೆ ತುರ್ಕ ಆಕ್ರಮಣಕಾರರ ಮುಖ್ಯ ಸ್ಥಳಗಳು ಭಾರತದ ಹೊರಗೆ ಗಝನಿ ಅಥವಾ ಘೋರ ಇವುಗಳಾಗಿದ್ದವು. ಇದರ ನಂತರದ ಸುಲ್ತಾನರು ದಿಲ್ಲಿಯಿಂದ ರಾಜ್ಯ ಮಾಡಲಾರಂಭಿಸಿದರು. ಹೀಗಾಗಿ ಅವರು ಭಾರತವಾಸಿ ಸುಲ್ತಾನರಾದರು. ಕೆಲವು ಕಾಲದ ವರೆಗೆ ಅವರು ಖಲೀಫರ ಧಾರ್ಮಿಕ ಸತ್ತೆಯನ್ನು ತತ್ವತಃ ಮನ್ನಿಸಿದರು. ಆದರೆ ರಾಜಕೀಯ ವಿಷಯದಲ್ಲಿ ಸ್ವತಂತ್ರ ಅಧಿಕಾರವುಳ್ಳವರಾದರು. ಅಲ್ಲಾವುದ್ದೀನ ಖಿಲಜಿಯ ನಂತರ ಬಂದ ಮುಬಾರಕ ಅರಸನು ತಾನೇ ಖಲೀಫ ಪದವಿಯನ್ನು ಧಾರಣ ಮಾಡಿ ಹೆಸರಿಗೆ ಮಾತ್ರವಿದ್ದ ಹೊರಗಿನ ಖಲೀಫನ ಸತ್ತೆಯನ್ನು ತೊಡೆದುಬಿಟ್ಟನು. ಮುಹಮ್ಮದ ಬಿನ್ ತುಘಲಕನು ಒಳ್ಳೆಯ ಸಂಕಟದಲ್ಲಿದ್ದನು. ರಾಜ್ಯದೊಳಗಿನ ಪುರಾಣಮತ-ವಾದಿಗಳಾದ ಮುಸಲ್ಮಾನರು ಅಸಂತುಷ್ಟರಾಗಿದ್ದರು. ಅವರ ನೆರವು ತನಗೆ ಬೇಕಾಗಿದ್ದುದರಿಂದ ಅವನು ಕಾಯರೋದ ಖಲೀಫನ ವಿಷಯದಲ್ಲಿ ತೋರಿಕೆಯ ನಿಷ್ಠೆಯನ್ನು ವ್ಯಕ್ತಮಾಡಿ ಮುಹಮ್ಮದ ತುಘಲಕನು ( ಹಿಂದೀ ಸುಲ್ತಾನನು ) ಖಲೀಫನನ್ನು ಮನ್ನಿಸುತ್ತಾನೆಂದು ಅನಿಸುವಂತೆ ಮಾಡಿದನು. ಏಕೆಂದರೆ ಬಗದಾದದ ಖಲೀಫರನ್ನು ಮಂಗೋಲ ಜನರು ಸ. ೧೨೫೮ ರಲ್ಲಿ ನಾಮಶೇಷ ಮಾಡಿದ್ದರು. ಮುಹಮುದ-ಬಿನ್-ತುಘಲಕನು ಖಲೀಫರ ವಿಷಯದಲ್ಲಿ ನಿಷ್ಠೆಯನ್ನು ತೋರಿಸುವ ಕೇವಲ ನಟನೆ ನಡೆಸಿದನು. ಈ ವೇಳೆಯಲ್ಲಿ ದಿಲ್ಲಿಯ ತುರ್ಕ ಅರಸರು ಭಾರತೀಯ

ರಾಗಿದ್ದರು. ಆದರಂತೆ ಸಾರ್ವಭೌಮರೂ ಆದರು.

ಗುಲಾಮ, ಖಿಲಜೀ ಮತ್ತು ತುಘಲಕ ಈ ಎಲ್ಲ ಸುಲ್ತಾನರ ಮೊದಲನೆಯ ಉದ್ದೇಶವು ರಾಜ್ಯವಿಸ್ತಾರ ಮಾಡುವದಾಗಿತ್ತು. ದಕ್ಷಿಣದಲ್ಲಿ ವಿಂಧ್ಯಾದ್ರಿ, ಪೂರ್ವದಲ್ಲಿ ಆಸಾಮದವರೆಗಿನ ಭಾರತದ ಉತ್ತರ ಭಾಗವನ್ನು ಗುಲಾಮ ಸುಲ್ತಾನರು ಗೆದ್ದರು. ಅಲ್ಲಾವುದ್ದೀನ ಖಿಲಿಜಿಯ ಸರದಾರನಾದ ಮಲಿಕ ಕಾಫರನು ( ಈತನು ಮೂಲ ಹಿಂದುವಿದ್ದು ಧರ್ಮಾಂತರ ಹೊಂದಿದ ಮುಸಲ್ಮಾನನು ) ದಕ್ಷಿಣ ಭಾರತದೊಳಗಿನ



ಮುಹಮ್ಮದ ಬಿನ್ ತುಘಲಕನ ನಾಣ್ಯಗಳು

ದೇವಗಿರಿ ವರಂಗಲ್ ದ್ವಾರಸಮುದ್ರ ಮತ್ತು ಮದುರಾ ಇವುಗಳ ರಾಜರನ್ನು ಸೋಲಿಸಿ ಶರಣು ಬರುವಂತೆ ಮಾಡಿದನು ( ಸ. ೧೩೧೧ ). ಸ. ೧೩೨೩ರಲ್ಲಿ ಮುಹ-ಮ್ಮದ-ಬಿನ್-ತುಘಲಕನು ಜಾಜನಗರ ( ಓರಿಸಾ )ವನ್ನು ವಶಪಡಿಸಿಕೊಂಡನು. ಶಾಹಮೀರನು ಸ. ೧೩೩೯ರಲ್ಲಿ ಕಾಶ್ಮೀರವನ್ನು ತೆಗೆದುಕೊಂಡನು. ಸ. ೧೩೫೦ರಲ್ಲಿ ಮುಹಮ್ಮದ ಬಿನ್ ತುಘಲಕನು ಜುನಾಗಡವನ್ನು ತೆಗೆದುಕೊಂಡನು. ಈ ಪ್ರಕಾರವಾಗಿ ಸ. ೧೨೦೬ರಿಂದ ೧೩೭೦ರ ವರೆಗಿನ ಒಂದೂವರೆ ನೂರು ವರ್ಷಗಳ ಅವಧಿಯಲ್ಲಿ ದಿಲ್ಲಿಯ ಸುಲ್ತಾನನು ಹಿಂದುಸ್ತಾನದ ಬಾದಶಹನಾದನು. ಅಲ್ಲಾವುದ್ದೀನ ಖಿಲಜಿಯು ರಾಜಾಸ್ಥಾನವನ್ನು ವಶಪಡಿಸಿಕೊಂಡಿದ್ದನು. ಮಧ್ಯಭಾರತದೊಳಗಿನ ಗೊಂಡವನವಷ್ಟೇ ೧೬ನೆಯ ಶತಮಾನದಲ್ಲಿ ಅಕಬರನು ಅದನ್ನು ಗೆಲ್ಲುವವರೆಗೆ ಸ್ವತಂತ್ರವಾಗಿತ್ತು.

**ನಾಲ್ಕನೆಯ ಅವಸ್ಥೆ :—** ಸೈನಿಕ ದೃಷ್ಟಿಯಿಂದ ನೋಡಿದರೆ ಈ ವಿಜಯವು ನಿಜವಾಗಿಯೂ ಲೋಕವಿಲಕ್ಷಣವಾಗಿದೆ. ಆದರೆ ರಾಜಕೀಯ ದೃಷ್ಟಿಯಿಂದ ಅವರ ಯಶವು ನಮಗೆ ಎನಿಸುವಷ್ಟು ಗಹನವಾಗಿಲ್ಲ. ಸ. ೧೩೫೦ ರಲ್ಲಿ ಮುಹಮ್ಮದ ಬಿನ್ ತುಘಲಕನು ರಾಜ್ಯವಿಸ್ತಾರದ ಕೆಲಸವನ್ನು ಶಿಖರಕ್ಕೆ ಮುಟ್ಟಿಸಿದನು. ಇದಕ್ಕೆ ಮುಂಚೆಯೇ ಅವನ ಸಾಮ್ರಾಜ್ಯವು ಒಡೆದುಹೋಗಲು ಸುರುವಾಗಿತ್ತು! ಸ. ೧೩೩೫ ರಲ್ಲಿ ಪೂರ್ವದ ಗಡಿಯಲ್ಲಿಯ ಮಾಬರನು ದಿಲ್ಲಿಯ ಅಧಿಕಾರವನ್ನು ಕಡೆಗಣಿಸಿದ್ದನು. ಸ. ೧೩೩೬ ರಲ್ಲಿ ವಿಜಯನಗರದಲ್ಲಿ ಸ್ವತಂತ್ರವಾದ ಹಿಂದೂ ರಾಜ್ಯದ ಸ್ಥಾಪನೆಯಾಯಿತು. ಸ. ೧೩೪೭ ರಲ್ಲಿ ದಖ್ಖನ್‌ದಲ್ಲಿ ಮುಸಲ್ಮಾನರದೇ ಆದ ಬಾಹಮನೀ ರಾಜ್ಯದ ಸ್ಥಾಪನೆಯಾಯಿತು. ಸ. ೧೩೭೬ರಲ್ಲಿ ಗುಜರಾಥ ಮತ್ತು ಸ. ೧೩೮೮ರಲ್ಲಿ

ಖಾನದೇಶ ಇವು ಸ್ವತಂತ್ರವಾದವು. ಇದರಿಂದ ಸಂಪೂರ್ಣ ಹಿಂದುಸ್ತಾನದ ಮೇಲೆ ದಿಲ್ಲಿಯ ಸುಲ್ತಾನರ ಅಧಿಕಾರವು ಕಾಲುಶತಮಾನದ ವರೆಗೆಯೇ ಉಳಿಯಿತು ( ಸ. ೧೩೧೧–೧೩೩೫ ).

**ಸ್ವತಂತ್ರ ಸ್ಥಾನಿಕ ಸುಲತಾನರು :–** ಪೃಥ್ವೀರಾಜನ ಸೋಲು (ಸ. ೧೧೯೨) ಮತ್ತು ಬಾಬರನ ಪಾನೀಪತ್ತದ ವಿಜಯ (ಸ. ೧೫೨೬) ಇವುಗಳ ನಡುವಿನ ೩೩೩ ವರ್ಷದ ಅವಧಿಯಲ್ಲಿ ತುರ್ಕರ ಭಾಗ್ಯಚಂದ್ರನ ಹೊಯ್ದಾಟವು ಆರಂಭವಾಯ್ತು. ಆದರೆ ಸ. ೧೩೯೮ ರಲ್ಲಿ ತೈಮೂರನು ಹಿಂದುಸ್ತಾನದ ಮೇಲೆ ದಾಳಿ ಮಾಡಿದಾಗ ಸುಲ್ತಾನನು ತನ್ನ ದಿಲ್ಲಿಯ ರಾಜಧಾನಿಯಲ್ಲಿ ಕೂಡ ಸುರಕ್ಷಿತನಾಗಿದ್ದಿಲ್ಲೆಂದು ಕಂಡುಬಂತು. ಸ. ೧೪೧೪ ರಲ್ಲಿ ಸಯ್ಯದ ಮನೆತನದ ಸ್ಥಾಪಕನಾದ ಖಿಜ್ರಖಾನ ನಂತೂ 'ತೈಮೂರನ ಪ್ರತಿನಿಧಿ' ಎಂಬ ಅರ್ಥದ ಪದವಿಯನ್ನು ತೊಟ್ಟನು. ಹೊಯ್ದಾಡುತ್ತಿರುವ ಸಯ್ಯದನ ರಾಜ್ಯವನ್ನು ೧೪೫೧ರಲ್ಲಿ ಲೋದಿಯು ಹಸ್ತಗತ ಮಾಡಿಕೊಂಡನು. ಮತ್ತು ಸ. ೧೫೨೬ ರಲ್ಲಿ ಬಾಬರನು ಲೋದಿಯನ್ನು ಪದಚ್ಯುತ ಗೊಳಿಸಿ ಮೊಗಲ ರಾಜ್ಯದ ಸ್ಥಾಪನೆ ಮಾಡಿದನು.



ಗುಜರಾತ ಸುಲ್ತಾನನ ನಾಣ್ಯ

ಪಶ್ಚಿಮದ ದಂಡೆಯ ಮೇಲಿರುವ ಸಿಂಧಪ್ರಾಂತದ ಮೇಲೆ ತಮ್ಮ ಅಧಿಕಾರ ವನ್ನು ಪ್ರಸ್ಥಾಪಿಸಲು ದಿಲ್ಲಿಯ ಸುಲ್ತಾನರು ನಡುನಡುವೆ ಪ್ರಯತ್ನಿಸಿ ನೋಡಿದರು. ಸ. ೧೩೦೦ ರಲ್ಲಿ ಸಿಂಧದಲ್ಲಿಯ ಸುಮ್ರಾ ರಜಪೂತರು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿದರು. ಸ. ೧೪೫೧ ರಲ್ಲಿ ಬಲೂಚಿಯ ಲಂಗ ಜನರು ಅವರನ್ನು ಗೆದ್ದರು. ಕಂದಾಹಾರದ ಅಫಗಾಣ ಅರಘುನರು ಸ. ೧೫೨೨ರಲ್ಲಿ ಬಲೂಚಿಗಳನ್ನು ಸೋಲಿಸಿ ದರು. ಆದರೆ ಬಾಬರನು ಅಲ್ಪಾವಧಿಯಲ್ಲಿಯೆ ಈ ಅರಘುನರು ಶರಣುಬರುವಂತೆ ಮಾಡಿದನು.

ಮೇಲೆ ಹೇಳಿದಂತೆ ಸ. ೧೪೦೧ ರಲ್ಲಿ ಗುಜರಾಥವು ದಿಲ್ಲೀ ಸತ್ತೆಯನ್ನು ಹಾರಿಸಿ ಒಗೆಯಿತು. ದಿಲ್ಲಿಯ ಪರವಾಗಿ ಸ. ೧೩೯೧ ರಿಂದ ಆ ಪ್ರಾಂತದ ಕಾರಭಾರ-ವನ್ನು ನೋಡುತ್ತಿದ್ದ ಸುಭೇದಾರ ಝಾಫರಖಾನನೇ ಸ. ೧೪೦೧ ರಲ್ಲಿ ಸ್ವಾತಂತ್ರ್ಯ-ವನ್ನು ಘೋಷಿಸಿದನು. ಗುಜರಾಥದಲ್ಲಿ ರಾಜ್ಯವಾಳಿದ ಸ್ವತಂತ್ರ ಸುಲ್ತಾನರಲ್ಲಿ ಮಹ–

ಮ್ಮದ ಬೇಗಡಾ ಎಂಬವನು ( ಸ. ೧೪೫೯–೧೫೧೧ ) ವಿಶೇಷ ಕರ್ತೃತ್ವಶಾಲಿಯಾಗಿ ದ್ದನು. ಅವನ ಆಳಿಕೆಯು ಐವತ್ತು ವರ್ಷ ನಡೆಯಿತು. ಗುಜರಾಥದೊಡನೆ ನಿಕಟ ಸಂಬಂಧವುಳ್ಳ ಮಾಳವೆಯೂ ೧೪೦೧ ರಲ್ಲಿ ಸ್ವತಂತ್ರವಾಯಿತು. ಸುತ್ತಲೂ ಕೋಟೆ ಯುಳ್ಳ ಮಾಂಡು ಎಂಬ ಅದರ ರಾಜಧಾನಿಯು ಒಳ್ಳೇ ಸುಂದರ ನಗರವಾಗಿತ್ತು. ಮಾಳವೆಯ ಖಿಲ್ಜೀ ಅರಸರಲ್ಲಿ ಮುಹಮುದ ಖಾನನು ಒಳ್ಳೇ ಶ್ರೇಷ್ಠ ಅರಸನಾಗಿ ದ್ದನು; ಅವನು ೩೩ ವರ್ಷ (ಸ. ೧೪೩೬–೬೯) ರಾಜ್ಯವಾಳಿದನು.

ದಿಲ್ಲಿಯ ಪೂರ್ವಭಾಗದಲ್ಲಿರುವ ಗೋಮತೀ ನದಿಯ ದಂಡೆಯ ಮೇಲೆ ಇರುವ ಜಾನಪೂರವು, ಮುಸಲ್ಮಾನರು ಕಟ್ಟಿಸಿದ ನಗರಗಳಲ್ಲಿ ವಿಶೇಷ ಪ್ರಸಿದ್ಧವಾಗಿದೆ. ಮುಹಮುದಬಿನ್ ತುಘಲಕನ ಸ್ಮರಣಾರ್ಥವಾಗಿ ಈ ನಗರವನ್ನು ಫಿರೋಜ ತುಘಲ ಕನು ಕಟ್ಟಿಸಿದ್ದನು. ಅಲ್ಲಿಯ ಸುಭೇದಾರನಾದ ಮುಬಾರಕ ಶಾಹ ಶರ್ಕಿಯು ಫಿರೋಜ ತುಘಲಕನ ವಂಶಜನೇ ಆಗಿದ್ದನು. ತೈಮೂರನ ದಾಳಿಯಿಂದ ಉಂಟಾದ ಗೊಂದಲ ಪರಿಸ್ಥಿತಿಯ ಲಾಭ ತೆಗೆದುಕೊಂಡು ಶರ್ಕಿಯು ಸ. ೧೩೯೯ ರಲ್ಲಿ ಸ್ವಾತಂತ್ರ್ಯವನ್ನು ಸಾರಿದನು. ಅವನ ನಂತರ ಜಾನಪುರದ ಪಟ್ಟಕ್ಕೆ ಬಂದ ಇಬ್ರಾಹಿಮ ಶಾಹನು ಮೂವತ್ತೈದು ವರ್ಷಗಳ ವರೆಗೆ (ಸ. ೧೪೦೧–೩೬) ಯಶಸ್ವಿಯಾಗಿ ರಾಜ್ಯಮಾಡಿ ದನು. ಅವನು ಒಳ್ಳೆಯ ಕರ್ತೃತ್ವಶಾಲಿಯಾಗಿದ್ದನು. ಮಾಂಡುದಂತೆಯೇ ಜಾನ ಪುರವೂ ಕಲಾಕೌಶಲ್ಯಕ್ಕಾಗಿ ಪ್ರಸಿದ್ಧವಾಯಿತು. ಅಲ್ಲಿಯ ಸುಂದರ ಕಟ್ಟಡಗಳಲ್ಲಿ 'ಅಟಲಾದೇವಿ' ಯ ಸೌಂದರ್ಯವು ಅತಿಶಯವಾಗಿದ್ದು ಅದನ್ನು ನೋಡಲು ಇಂದಿಗೂ ಕಲಾಪ್ರೇಮಿಗಳು ಜಾನಪುರಕ್ಕೆ ಹೋಗುತ್ತಾರೆ.

ಬಂಗಾಲ ಪ್ರಾಂತವು ಸಾಕಷ್ಟು ದೂರವಿದ್ದುದರಿಂದ ಅದರ ಮೇಲೆ ದಿಲ್ಲಿಯ ಸತ್ತೆಯು ಯಾವಾಗಲೂ ಸರಿಯಾಗಿ ಉಳಿಯಲಿಲ್ಲ. ಬಂಗಾಲವು ಅನೇಕ ರಾಜ್ಯ-ಕ್ರಾಂತಿಗಳನ್ನು ಕಂಡಿತು. ಕೊನೆಯ ರಾಜ್ಯಕ್ರಾಂತಿಯನ್ನು ಮಾಡಿದ ಹುಸೇನ-ಶಾಹನು ಬಂಗಾಲದಲ್ಲಿ ಸ. ೧೪೯೩ ರಿಂದ ೧೫೧೮ರ ವರೆಗೆ ಯಶಸ್ವಿಯಾಗಿ ರಾಜ್ಯ ಮಾಡಿದನು. ಅವನ ೨೪ ವರ್ಷಗಳ ಆಳಿಕೆಯಲ್ಲಿ ಅವನ ಹಿಂದು ಮುಸಲ್ಮಾನ ಪ್ರಜೆಗಳು ಒಂದಾಗಿ ಬಾಳಿದರು. ಒಮ್ಮೆ ಕೂಡ ಬಂಡು ಏಳಲಿಲ್ಲ ಮುಹಮ್ಮದ ಪೈಗಂಬರನ ಜನರೊಳಗಿನ ಸಯ್ಯದನೆಂಬ ಅರಬನು ತಾನೆಂದು ಆ ಸುಲ್ತಾನನು ತಿಳಿದಿದ್ದನು.

ಹುಸೇನಶಾಹ ಮತ್ತು ಅವನ ನಂತರದ ನಸ್ರತಶಾಹ ಇವರಿಬ್ಬರು ಹಿಂದುಗಳ ವಿಷಯದಲ್ಲಿ ಸಹಿಷ್ಣುತೆಯಿಂದ ವರ್ತಿಸಿದರು. ಅವರಿಬ್ಬರೂ ಬಂಗಾಲಿ ವಾಙ್ಮಯದ ಆಶ್ರಯದಾತರಾಗಿದ್ದರು. ಬಂಗಾಲಿ ವಾಙ್ಮಯದಲ್ಲಿ ಅವರ ದಾತೃತ್ವದ ಪ್ರಶಸ್ತಿಯು ಕಂಡುಬರುತ್ತದೆ. ನಸ್ರತಶಾಹನ ಆಜ್ಞೆಯ ಪ್ರಕಾರ ಬಂಗಾಲಿಯಲ್ಲಿ ಮಹಾಭಾರತ ವನ್ನು ಭಾಷಾಂತರ ಮಾಡಲಾಯಿತು. ಸ. ೧೫೨೯ರಲ್ಲಿ ಬಕ್ಸಾರ ಎಂಬಲ್ಲಿ (ಗೋಗ್ರಾ ನದಿಯ ದಂಡೆಯಮೇಲೆ) ಬಾಬರನು ಈ ನಸ್ರತಶಾಹನನ್ನು ಸೋಲಿಸಿದನು.

ಶಾಹಮೀರನು ಸ. ೧೩೩೯ರಲ್ಲಿ ಕಾಶ್ಮೀರ ಪ್ರಾಂತವನ್ನು ಗೆದ್ದನು. ಅಲ್ಲಿಯ

ವರೆಗೆ ಅಲ್ಲಿ ಹಿಂದು ರಾಜ್ಯವೇ ಇತ್ತು. ೧೬ ನೆಯ ಶತಕದಲ್ಲಿ ಅಕಬರನು ಕಾಶ್ಮೀರ ವನ್ನು ವಶಪಡಿಸಿಕೊಂಡನು. ಅಲ್ಲಿಯ ವರೆಗೆ ಕಾಶ್ಮೀರದ ಸ್ವಾತಂತ್ರ್ಯವು ಅಬಾಧಿತ ವಾಗಿತ್ತು. ಝೈನ-ಉಲ್-ಆಬಿದಿನ ಎಂಬವನು ( ಸ. ೧೪೧೭-೬೭ ) ಕಾಶ್ಮೀರದ ಶ್ರೇಷ್ಠ ಸುಲ್ತಾನನಾಗಿದ್ದು, ಅಕಬರನ ಉದಾರ ಧಾರ್ಮಿಕ ಧೋರಣೆಯ ತಳಹದಿ ಯನ್ನು ಅಕಬರನಿಗಿಂತ ಮುಂಚೆ ನೂರು ವರ್ಷಗಳ ಹಿಂದೆ ಹಾಕಿದ್ದನೆಂಬುದು ವಿಶೇಷ ಲಕ್ಷ್ಯದಲ್ಲಿಡುವಂತೆ ಇರುವದು. ಅವನು ಜಿಜಿಯಾ ಪಟ್ಟಿಯನ್ನು ರದ್ದು ಮಾಡಿದನು. ಗೋಹತ್ಯೆಯನ್ನು ಪ್ರತಿಬಂಧಿಸಿದನು ; ಸಂಸ್ಕೃತ ಗ್ರಂಥಗಳನ್ನು ಅರಬಿ ಮತ್ತು ಫಾರಶೀ ಭಾಷೆಗಳಲ್ಲಿ ಭಾಷಾಂತರ ಮಾಡಲು ಪ್ರೋತ್ಸಾಹನೆಯನ್ನು ಕೊಟ್ಟನು. ಹಿಂದಿನ ಧರ್ಮಾಂಧ ರಾಜರು ಹದ್ದುಪಾರುಗೊಳಿಸಿದ ಬ್ರಾಹ್ಮಣರನ್ನು ತಿರುಗಿ ಕರೆಯಿಸಿದನು. ಏಕಪತ್ನೀ ವ್ರತವನ್ನು ಪಾಲಿಸಿದ ಈ ಸುಲ್ತಾನನು ಎಲ್ಲ ಸುಲ್ತಾನರೊಳಗೆ ಅಪೂರ್ವನೇ ಸರಿ.

**ಸಮಾರೋಪ :—** ಸ. ೭೧೨ ರಿಂದ ೧೫೨೬ ರ ವರೆಗೆ ಇಸ್ಲಾಮಿ ಸತ್ತೆಯು ಭಾರತದಲ್ಲಿ ಹೇಗೆ ಹೇಗೆ ವಿಕಾಸ ಹೊಂದುತ್ತ ಹೋಯಿತು ಎಂಬುದರ ಸಂಕ್ಷಿಪ್ತ ದೃಷ್ಟಾಂತವಿದು. ಹೊಲವನ್ನು ನೇಗಿಲ ಹೊಡೆದು ಅದರಲ್ಲಿ ಬೀಜವನ್ನು ಬಿತ್ತುವಂತೆ ಈ ವಿಕಾಸ ವೃತ್ತಾಂತವಿದೆ. ಈ ಹೊಲಕ್ಕೆ ಹಿಂದೂ ಮುಸಲ್ಮಾನರ ರಕ್ತದ ಗೊಬ್ಬರ ನೀರು ಸಿಕ್ಕಿತು. ಈ ಹದಗಾರಿಕೆಯಿಂದ ಬೆಳೆದ ಸಮೃದ್ಧ ಸಂಸ್ಕೃತಿಯು ಕೇವಲ ' ಹಿಂದು ' ಇಲ್ಲವೆ ಕೇವಲ ' ಇಸ್ಲಾಮಿ ' ಆಗಿರದೆ ' ಭಾರತೀಯ 'ವಾಗಿದೆ. ಈ ಭಾರ ತೀಯ ಸಂಸ್ಕೃತಿಯ ಪರಿಚಯವನ್ನು ಮುಂದಿನ ಪಾಠದಲ್ಲಿ ಮಾಡಿಕೊಡಲಾಗುವದು.

### ಅವತರಣಿಕೆ

ಬಾಬರನ ಆಗಮನ ಸಮಯದ ಭಾರದೊಳಗಿನ ರಾಜಕೀಯ ಪರಿಸ್ಥಿತಿಯ ಶಬ್ದಚಿತ್ರವನ್ನು ಕೆಳಗಿನ ಅವತರಣಿಕೆಯಲ್ಲಿ ಚಿತ್ರಿಸಲಾಗಿದೆ. ಅದು ಬಹಳೇ ಮನನೀಯವಾಗಿದೆ.

ರಾತ್ರಿಯ ಕತ್ತಲೆಯಿಂದ ಸೂರ್ಯೋದಯವು ಆಗುವಂತೆ ಅಂಧಕಾರಮಯ-ವಾದ ಮಧ್ಯಯುಗದಿಂದ ನವಯುಗದ ಬೆಳಕು ಯುರೋಪ ಮತ್ತು ಭಾರತಗಳಲ್ಲಿ ಏಕಕಾಲಕ್ಕೆ ಹೊರಹೊಮ್ಮಿತು. ಬಾಬರನ ಪ್ರಸಿದ್ಧ ಪೂರ್ವಜನಾದ ತೈಮೂರನು ಸ. ೧೩೯೮ರಲ್ಲಿ ಭಾರತದ ಮೇಲೆ ದಾಳಿ ಮಾಡಿದನು. ಆಮೇಲೆ ನೂರು ವರ್ಷಗಳ ಅವಧಿಯಲ್ಲಿ ಭಾರತದ ಇತಿಹಾಸದಲ್ಲಿ ಆದ ಘಟನೆಗಳು ನವಯುಗದ ಆಗಮನದ ಪೂರ್ವಸಿದ್ಧತೆಯನ್ನು ಮಾಡಿದವು. ಖಿಲ್ಜೀ ಮತ್ತು ತುಘಲಕ ಇವರು ಭಾರತದಲ್ಲಿ ಏಕಛತ್ರಾಧಿಪತ್ಯವನ್ನು ಸ್ಥಾಪಿಸಲು ಈ ಮುಂಚೆ ಮಾಡಿದ ಪ್ರಯತ್ನಗಳ ಪರಿಣಾಮ ಗಳು ವಿಫಲವಾದ್ದರಿಂದ ದೇಶದಲ್ಲಿ ಅರಾಜಕತೆಯು ತಲೆದೋರಿತು.೧೫ನೆಯ ಶತಮಾ ನದಲ್ಲಿ ಭಾರತವು ಅನೇಕ ಸಣ್ಣಸಣ್ಣ ರಾಜ್ಯಗಳಾಗಿ ವಿಭಾಗಿಸಲ್ಪಟ್ಟಿತು. ದಕ್ಷಿಣದ ಮೇಲೆ ದಿಲ್ಲಿಯಿಂದ ರಾಜ್ಯಮಾಡುವದು ಅಶಕ್ಯವೆಂಬುದು ತುಘಲಕರಿಗೆ ಕೇವಲ ಹತ್ತು

ವರ್ಷದ ಆಳಿಕೆಯಲ್ಲಿಯೇ ತಿಳಿದು ಹೋಯಿತು. ಸ. ೧೩೩೬ ರಲ್ಲಿ ವಿಜಯನಗರದ ಹಿಂದೂ ರಾಜ್ಯ ಮತ್ತು ಸ. ೧೩೪೭ರಲ್ಲಿ ಬಾಹಮನಿಯ ಮುಸಲ್ಮಾನ ರಾಜ್ಯ ಇವುಗಳ ಸ್ಥಾಪನೆಯಾಗಿ ದಕ್ಷಿಣದಲ್ಲಿಯ ದಿಲ್ಲಿಯ ಅರಸನ ಪ್ರಭುತ್ವವು ಕೊನೆಗೊಂಡಿತು. ಈ ಶತಕದಲ್ಲಿ ಸ್ವತಂತ್ರರಾಗಬೇಕೆಂಬ ಪ್ರವೃತ್ತಿಗೆ ಭೌಗೋಲಿಕ ಪರಿಸ್ಥಿತಿಯೂ ಸಹಾಯಕವಾಯಿತೆಂದು ಈ ಘಟನೆಯಿಂದ ಕಂಡುಬರುತ್ತದೆ. ಉತ್ತರದಲ್ಲಿ ಕೂಡ ದಿಲ್ಲಿಯ ಸುಲ್ತಾನೀ ಪ್ರಭುತ್ವದ ಇಳಿಕೆಯ ಕಾಲವು ಬರಲು, ದೂರದಲ್ಲಿಯ ಬಂಗಾಲ, ಸಿಂಧ, ಕಾಶ್ಮೀರ ಮತ್ತು ರಜಪುತಾನಾ ಇವುಗಳಲ್ಲಿಯ ಅಧೀಶರು ಸ್ವತಂತ್ರರಾದರು. ಆ ಮೇಲೆ ಮಾಳವಾ, ಗುಜರಾಥ, ಓರಿಸಾ ಈ ಭಾಗಗಳೂ ಸಿಡಿದು ಹೋದವು. ಇದರಿಂದ ಬಾಬರನಿಗೆ ಇಂಥ ಅನೇಕ ಸಣ್ಣ ಮಾಂಡಲಿಕರನ್ನು ಎದುರಿಸಬೇಕಾಯಿತು

'ಬಲಾಢ್ಯ ಪ್ರಭುತ್ವದ ಅಭಾವದ ಮೂಲಕ ಹಿಂದುಸ್ಥಾನ ದೇಶವನ್ನು ಗೆಲ್ಲುವದು ಅತ್ಯಂತ ಸರಳವಾದುದೆಂದು ತೈಮೂರನ ದಾಳಿಯಿಂದ ಸ್ಪಷ್ಟವಾಗಿ ಕಂಡು ಬರುತ್ತದೆ. ಸಾಮರ್ಥ್ಯಶಾಲಿಯಾದ ಪ್ರಭುತ್ವದಕೊರತೆಯನ್ನು ಹಿಂಗಿಸಿಕೊಳ್ಳುವ ಶಕ್ತಿಯು ಹಿಂದುಗಳಲ್ಲಾಗಲಿ ಮುಸಲ್ಮಾನರಲ್ಲಾಗಲಿ ಉಳಿದಿರಲಿಲ್ಲ ಈ ಎರಡೂ ಸಮಾಜಗಳಲ್ಲಿ ಅನೇಕ ಉಲ್ಲೇಖನೀಯ ವ್ಯಕ್ತಿಗಳು ಆಗಿಹೋದರೆಂಬುದು ನಿಜ. ಆದರೂ ಬಲ್ಬನ ಮತ್ತು ಅಲ್ಲಾಉದ್ದೀನ ಖಿಲ್ಜಿ ಇವರಷ್ಟು ಸಾಹಸವುಳ್ಳ ವ್ಯಕ್ತಿಗಳು ಮುಸಲ್ಮಾನರಲ್ಲಿ ಹುಟ್ಟಿದಿದ್ದಂತೆ ಹಿಂದು ಸಮಾಜದಲ್ಲಿಯೂ ಚಂದ್ರಗುಪ್ತ ಮೌರ್ಯ, ವಿಕ್ರಮಾದಿತ್ಯ ಇವರನ್ನು ಸರಿಗಟ್ಟುವ ವ್ಯಕ್ತಿಗಳು ನಿರ್ಮಾಣವಾಗಲಿಲ್ಲ. ಇದಕ್ಕೆ ಅಪವಾದವೆಂದರೆ ವಿಜಯನಗರದ ಕೃಷ್ಣದೇವರಾಯನೇ ಸರಿ.'

**ಎಸ್. ಆರ್. ಶರ್ಮಾ**

('ದಿ ಮೇಕಿಂಗ ಅಫ್ ಮಾಡರ್ನ ಇಂಡಿಯಾ' ಎಂಬ ಪುಸ್ತಕದಿಂದ)

## ಅಭ್ಯಾಸ

೧. ಭಾರತದ ಮೇಲೆ ಆದ ಮುಸಲ್ಮಾನರ ಆಗಮನದ ಪರಿಣಾಮವು ಯುರೋಪದಲ್ಲಿ ಆದ ಪರಿಣಾಮಕ್ಕಿಂತ ತೀರ ಭಿನ್ನ ಸ್ವರೂಪದ್ದು. ಹೀಗೇಕೆ ಎಂಬುದನ್ನು ಹೇಳಿರಿ.

೨. ಸಿಂಧದೊಳಗಿನ ಹಿಂದುಗಳ ವಿಷಯವಾಗಿ ಅರಬರು ಮುಂದೆ ಯಾವ ಧೋರಣೆವನ್ನು ಸ್ವೀಕರಿಸಿದರು? ಅದು ಏಕೆ?

೩. 'ಗಝ್ನೀ ಮುಹಮ್ಮೂದನು ಅತ್ಯಂತ ಕ್ರಾಂತಿಕಾರಕನಾಗಿ ಹೋದನು' ಎಂದು ಏಕೆ ಎಂದಿದ್ದಾರೆ?

೪. ಮುಹಮ್ಮದ-ಬಿನ್-ತುಘಲಕನು ಕಾಯರೋದ ಖಲೀಫನ ವಿಷಯವಾಗಿ ನಿಷ್ಠೆಯನ್ನು ಏಕೆ ವ್ಯಕ್ತಮಾಡಿದನು?

೫. 'ಸುಲ್ತಾನರು ದೊರಕಿಸಿದ ಸೈನಿಕ ವಿಜಯವು ರಾಜಕೀಯ ದೃಷ್ಟಿಯಿಂದ ಅಷ್ಟು ಗಹನವಿದ್ದಿಲ್ಲ', ಈ ಮಾತಿನ ಸ್ಪಷ್ಟೀಕರಣ ಮಾಡಿರಿ.

೬. ಮುಂದೆ ಕೊಟ್ಟ ವಿಷಯಗಳ ಬಗ್ಗೆ ಎರಡೆರಡು ವಾಕ್ಯಗಳಲ್ಲಿ ಗೊತ್ತಿದ್ದುದನ್ನು

ಕೊಡಿರಿ :— ಮಾಂಡೂ, ಜಾನಪುರ, ಮಹಮ್ಮದ ಬೇಗಡಾ, ಹುಸೇನಶಾಹ, ಝೈನ-ಅಲ್-ಆಬಿದಿನ.

೭. ಬಾಬರನ ಆಗಮನದ ಸಮಯಕ್ಕೆ ಭಾರತದ ರಾಜಕೀಯ ಪರಿಸ್ಥಿತಿಯು ಯಾವ ಪ್ರಕಾರದ್ದಿತ್ತು ?

## ೩ನೆಯ ಪಾಠ

## ಭಾರತದಲ್ಲಿಯ ಇಸ್ಲಾಮಿ ಪ್ರಭುತ್ವದ ಸ್ವರೂಪ

**ಪ್ರಾಸ್ತಾವಿಕ :—** ಇ. ಸ. ೭೧೨ ರಿಂದ ೧೫೨೬ ರ ವರೆಗಿನ ದೀರ್ಘ ಕಾಲ-ಖಂಡವನ್ನು ಹಿಂದಿನ ಪಾಠದಲ್ಲಿ ನಮ್ಮ ನಿರೀಕ್ಷಣೆಗೊಳಪಡಿಸಿದೆವು. ಈ ಎಂಟು ಶತಕಗಳಲ್ಲಿ ಇಸ್ಲಾಮ ಧರ್ಮೀಯರಲ್ಲಿ ಮುಖ್ಯತಃ ಆರಬ, ತುರ್ಕ ಮತ್ತು ಅಫಗಾಣರ ಕೂಡ ನಮ್ಮ ಸಂಬಂಧವು ಬಂದಿತು. ಅವರ ಹೊರತಾಗಿ ಮಲಬಾರದಲ್ಲಿಯ ಮಾಪಿಳ್ಳೆ, ಕಾರವಾರ ಕಡೆಗಿನ ನವಾಯತ, ಕೊಂಕಣದಲ್ಲಿಯ ಹಬಸಿ ( ಅಬಿಸೀನಿ-ಯನ್ ) ಇವರ ಪೂರ್ವಜರು ಬಹಳ ಹಳೆಯ ಕಾಲದಿಂದ ಪಶ್ಚಿಮ ಕರಾವಳಿಯ ಪ್ರದೇಶದಲ್ಲಿ ವಾಸಿಸುತ್ತ ಬಂದಿರುವರು. ಮಲಿಕ ಕಾಫರನು ಕನ್ಯಾಕುಮಾರಿಯ ವರೆಗೆ ತನ್ನ ಅಭಿಯೋಗಸತ್ರವನ್ನು ಆರಂಭಿಸಿದಾಗ ಈ ಹಳೆಯ ಸ್ಥಾನಿಕ ಮುಸ-ಲ್ಮಾನರ ಕೂಡ ಆತನ ಸಂಬಂಧವು ಬಂದಿರಬಹುದೆಂಬ ಉಲ್ಲೇಖವು ದೊರೆಯು-ತ್ತದೆ. ಈ ಕಾಲದಲ್ಲಿಯೆ ಹಿಂದುಸ್ಥಾನದಲ್ಲಿ ತಮ್ಮ ದೈವವನ್ನು ತೆರೆದುಕೊಳ್ಳಬೇಕೆಂದು ಬಂದ ಇರಾಣದ ನಿವಾಸಿಗಳಾದರೂ ಕಡಿಮೆಯಿದ್ದಿಲ್ಲ ಅವರಲ್ಲಿ ಮಹಮ್ಮದ ಗಾವಾನ ನೆಂಬವನು ಬಲು ದೊಡ್ಡ ಯೋಗ್ಯತೆಯ ವ್ಯಕ್ತಿಯಾಗಿದ್ದನು. ಭಾರತದಲ್ಲಿಯ ಇಸ್ಲಾಮೀ ಪ್ರಭುತ್ವದ ಸ್ವರೂಪವನ್ನು ಸಂಘಟಿಸುವಲ್ಲಿ ಈ ಎಲ್ಲ ಬೇರೆ ಬೇರೆ ಮುಸ-ಲ್ಮಾನ ಗುಂಪುಗಳ ಪಾಲು ಒಂದಿಲ್ಲೊಂದು ರೀತಿಯಿಂದ ಉಂಟೆಂಬುದನ್ನು ನಾವು ಚೆನ್ನಾಗಿ ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ಮೂಲತಃ ಹಿಂದುಗಳಾಗಿದ್ದವರು ಕುಲಗೆಟ್ಟು ಮುಸಲ್ಮಾನರಾದವರ ಸಂಖ್ಯೆಯು ಬೆಳೆಯಿತು. ಅವರಲ್ಲಿಯ ಕೆಲ ಉದಾಹರಣೆಗಳು ಹೀಗಿವೆ :– ಮಲಿಕ ಕಾಫರನು ಖಂಬಾಯತದಲ್ಲಿಯ ಓರ್ವ ಹೊಲೆಯ ಜಾತಿಯವ-ನಾಗಿದ್ದನು. ಖುಶ್ರು ಗುಜರಾಥದಲ್ಲಿಯ ಪಟವಾರಿ ಜಾತಿಯವನಾಗಿದ್ದನು. (ಇವನು ಖಿಲಜಿ ಆಳಿಕೆಯಲ್ಲಿಯ ದಿಲ್ಲಿಯ ಕೊನೆಯ ಸುಲ್ತಾನನು ) ಫಿರೋಜ ತುಘಲಕನ ಬಲಗೈಯೆಂದು ಬಗೆಯಲ್ಪಟ್ಟ ಖಾನಜಹಾನ ಮಕಬುಲನು ಮೂಲತಃ ತೆಲಗು ಬ್ರಾಹ್ಮಣನಾಗಿದ್ದು ಧರ್ಮಾಂತರ ಹೊಂದಿದ ಮುಸಲ್ಮಾನನಾಗಿದ್ದನು. ಧರ್ಮ ತ್ಯಾಗಮಾಡದೆ ಉಚ್ಚ ಪದವಿಗಳಿಗೆ ಏರಿದ ಕೆಲ ಹಿಂದುಗಳ ಉದಾಹರಣೆಗಳೂ ಇವೆ. ಗಝನವಿ ಆಳಿಕೆಯಲ್ಲಿ ಅತ್ಯುಚ್ಚ ಪದವಿಗೇರಿದ ಸೇನಾಪತಿ ತಿಲಕ ( ಇವನು ನಾವಲಿಗ ಸಮಾಜದವನಾಗಿದ್ದನು ) ಇವನು ನಿಯಾಲತಗಿನರಂತಹ ತುರ್ಕ ಸರದಾರರ ಬಂಡಾಯವನ್ನು ಮುರಿದುಬಿಟ್ಟನು.

ಸುಲ್ತಾನಶಾಹಿಯಲ್ಲಿ (ಹಾಗೆಯೆ ಮುಂದೆ ಮೊಗಲ ಬಾದಶಾಹಿಯಲ್ಲಿ) ಇನ್ನೊಂದು ಗಮನಿಸತಕ್ಕ ಸಂಗತಿಯಿದೆ. ಭಾರತದಲ್ಲಿಯ ಇಸ್ಲಾಮಿ ಪ್ರಭುತ್ವದ ಸ್ವರೂಪವು ಒಂದು ನಿಶ್ಚಿತವಾದ ಮುದ್ರೆಯದಾಗಿಲ್ಲ. ಅದರಲ್ಲಿ ಅನೇಕ ಸ್ಥಾನಿಕ ಭೇದಗಳುಂಟು. ಎಲ್ಲ ಸುಲತಾನರಾದರೂ ಒಂದೇಬಗೆಯವರೆಲ್ಲಿದ್ದರು? ಕೆಲವರು ಸುಸ್ವಭಾವಿಗಳೂ, ಉದಾರರೂ ಆಗಿದ್ದರೆ ಬೇರೆ ಕೆಲವರು ದುಷ್ಟರೂ, ಧರ್ಮಾಂಧರೂ ಆಗಿದ್ದರು. ಕೆಲವರು ಕರ್ತೃತ್ವಶಾಲಿಗಳಿದ್ದರೆ ಇನ್ನೂ ಕೆಲವರು ಕರ್ತವ್ಯಶೂನ್ಯ ರಾಗಿದ್ದರು. ಖಲೀಫರಂತೆ ಸುಲತಾನರಲ್ಲಿಯೂ ವಂಶಪರಂಪರಾಗತವಾದ ರಾಜ ಮನೆತನಗಳು ಆಗಿಹೋದವು. ಕರ್ತೃತ್ವಶಾಲಿ ಮನೆತನಗಳ ಪರಂಪರೆಯು ಹರಿದು ಬಂಡುಗಳೆದ್ದು ಎರಡನೆಯ ಸಾಮರ್ಥ್ಯವಂತ ಮನೆತನಗಳು ಉದಯಹೊಂದಿದವು. ಉದಾಹರಣಾರ್ಥ ಖಿಲ್ಜಿಗಳನ್ನು ಹಿಮ್ಮೆಟ್ಟಿಸಿ ತುಘಲಕ ಮನೆತನವು ಮುಂದೆ ಬಂತು. ದಕ್ಷಿಣದಲ್ಲಿಯ ಬಾಹಮನಿ ಮನೆತನದಂತಹ ಅನೇಕ ರಾಜಮನೆತನಗಳನ್ನು ಬಂಡಾಯಗಾರರಾಗಿದ್ದ ಸರದಾರರು ಪ್ರಾಂತಪ್ರಾಂತಗಳಲ್ಲಿ ಸ್ಥಾಪಿಸಿದರು. ಈ ಬಂಡುಗಾರರನ್ನು ವಶದಲ್ಲಿಟ್ಟುಕೊಳ್ಳುವದು ದಿಲ್ಲಿಯ ಸುಲ್ತಾನರಿಗೆ ಅಶಕ್ಯವಾಗಿತ್ತು.

**ರಾಜ್ಯಕಾರಭಾರ:—** ದಿಲ್ಲಿಯ ಸುಲ್ತಾನರ ರಾಜ್ಯವಿಸ್ತಾರವು ಪರಮಾವಧಿಯಾದ ಕಾಲಕ್ಕೆ ಅದರಲ್ಲಿ ೨೩ ಸುಭೆ (ಭಾಗ)ಗಳಿದ್ದವು. ತತ್ವತಃ ದಿಲ್ಲಿಯ ಸುಲ್ತಾನನೇ ಸಾರ್ವಭೌಮ ಸತ್ತಾಧೀಶನಾಗಿದ್ದನು. ಆದರೆ ಪ್ರತ್ಯಕ್ಷ ವ್ಯವಹಾರದಲ್ಲಿ ಪ್ರಾಂತ ಪ್ರಾಂತಗಳಲ್ಲಿಯ ಸುಭೇದಾರರೇ ನಿಜವಾದ ಸತ್ತಾಧೀಶರಾಗಿದ್ದರಲ್ಲದೆ ಸ್ಥಾನಿಕ ಸುಲ್ತಾನರೇ ಅವರಾಗಿದ್ದರೆಂದು ಸಹ ಅನಿಸುತ್ತಿತ್ತು. ಮಧ್ಯವರ್ತಿ ಮತ್ತು ಸ್ಥಾನಿಕ ಸುಲ್ತಾನ ಅಥವಾ ಸುಭೇದಾರನು ಸೈನಿಕ ಹಾಗು ಮುಲಕೀ ಹೀಗೆ ಎರಡೂ ವ್ಯವಸ್ಥೆಗಳ ಪ್ರಮುಖನಾಗಿರುತ್ತಿದ್ದನು. ಈ ಪ್ರಮುಖನು ದಾಳಿಗಳನ್ನು ಮಾಡುತ್ತ ಹೊರಗೆ ಹೋದಾಗ ಸ್ಥಾನಿಕ ರಾಜ್ಯಕಾರಭಾರವನ್ನು ನೋಡಿಕೊಳ್ಳಲು 'ನಾಯಬ'ರು ಇರುತ್ತಿದ್ದರು. ಅವರಿಗೆ ಅವರ ಪ್ರಮುಖರ ಅಧಿಕಾರಗಳೆಲ್ಲವೂ ಇರುತ್ತಿದ್ದವು. ಖಿಲಜಿ ಮತ್ತು ತುಘಲಕ ಇವರ ನಾಯಬರಲ್ಲಿ ಅನುಕ್ರಮವಾಗಿ ಮಲಿಕ ಕಾಫರ ಮತ್ತು ಖಾನ ಜಹಾನ ಇವರು ಪ್ರಸಿದ್ಧರಾಗಿದ್ದರು. ಶಾಂತತಾ ರಕ್ಷಣೆಗಾಗಿ ನಗರಗಳಲ್ಲಿ ಹಾಗು ಜಿಲ್ಹೆಗಳಿಗೆ ಫೌಜದಾರರಿರುತ್ತಿದ್ದರು. ನ್ಯಾಯದಾನದ ಕಾರ್ಯವನ್ನು ಕ್ವಾಜಿಗಳು ನೋಡಿಕೊಳ್ಳುತ್ತಿದ್ದರು. ರಾಜಧಾನಿಯಲ್ಲಿ ಇರುತ್ತಿದ್ದ ಪ್ರಮುಖರಿಗೆ "ಕಾಝೀ-ಉಲ್-ಕುಝಾತ್" ಅಥವಾ "ಸದರ-ಈ-ಜಹಾಂ" ಎಂದೆನ್ನುತ್ತಿದ್ದರು. ಫೌಜದಾರೀ ವ್ಯಾಜ್ಯದಲ್ಲಿ ಇಸ್ಲಾಮ ಕಾಯದೆಯ ಮೇರೆಗೆ ವಿಚಾರಣೆಯ ಕೆಲಸವು ನಡೆಯುತ್ತಿತ್ತು. ಭೂಕಂದಾಯದ ವ್ಯವಸ್ಥೆಯು 'ದಿವಾಣ' ಎಂಬ ಅಧಿಕಾರಿಯ ಕಡೆಗೆ ಇರುತ್ತಿತ್ತು. ದೇಶದಲ್ಲಿಯ ಘಟನೆಗಳ ಸುದ್ದಿಯನ್ನು ತರುವ ಗುಪ್ತಚಾರರ ಜಾಳಿಗೆಯು ದೇಶದ ತುಂಬ ಪಸರಿಸಿತ್ತು. ಪತ್ರಗಳನ್ನೂ, ವಸ್ತುಗಳನ್ನೂ ಮುಟ್ಟಿಸಲು ಟಪಾಲಿನ ವ್ಯವಸ್ಥೆಯೂ ಇತ್ತು. ಅಶೋಕನ ಧರ್ಮಮಹಾಮಾತ್ರರಂತೆ ಸಾರ್ವಜನಿಕ ನೀತಿಮತ್ತೆಯ ಮೇಲೆ

ಕಣ್ಣಿಡುವದಕ್ಕೆ "ಮುಹತಸಿಬ" ಎಂಬ ಹೆಸರುಳ್ಳ ಅಧಿಕಾರಿಗಳಿದ್ದರು. ಹಳ್ಳಿಪಳ್ಳಿಗಳಲ್ಲಿ ಪ್ರಾಚೀನ ಪರಂಪರೆಯನ್ನನುಸರಿಸಿ ಗ್ರಾಮಪಂಚಾಯತಿಯ ಮುಖಾಂತರ ಸ್ಥಾನಿಕ ಆಡಳಿತೆಯನ್ನು ಸಾಗಿಸಲು ಹಿಂದುಗಳಿಗೆ ಮುಕ್ತದ್ವಾರವಿತ್ತು. ನಗರಗಳಲ್ಲಿ ಬಂದೋಬಸ್ತನ್ನು ಇಡುತ್ತಿದ್ದ 'ಕೊತವಾಲ'ನು 'ಕಾಝಿ'ಯಂತೆ ಮಹತ್ವದ ಅಧಿಕಾರಿಯಾಗಿದ್ದನು ಕೊತವಾಲನು ದೈನಂದಿನ ಜೀವನ ವಿಷಯಕ ಬಾಬುಗಳ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದನು. ಮುಸಲ್ಮಾನೇತರರು 'ಜಿಝಿಯಾ' ಎಂಬ ತಲೆಪಟ್ಟಿಯನ್ನು ತುಂಬಬೇಕಾಗುತ್ತಿತ್ತು. ಈ ಅಪಮಾನಕರವಾದ ಕರವನ್ನು ರದ್ದುಗೊಳಿಸುವ ಔದಾರ್ಯವನ್ನು ಝೈನ-ಉಲ್-ಅಬಿದೀನ ಮತ್ತು ಅಕಬರ ಇವರು ತೋರಿಸಿದರು.

**ಉದಾರಮತವಾದದತ್ತ :—** ಭಾರತದ ಹೊರಗಿನ ಇಸ್ಲಾಮೀ ರಾಜ್ಯ-ಗಳೊಡನೆ ಹೋಲಿಸಿದರೆ ಭಾರತದಲ್ಲಿಯ ಇಸ್ಲಾಮೀ ಪ್ರಭುತ್ವದ ಒಟ್ಟಿನ ಸ್ವರೂಪವು ಬೇರೆಯಾಗಿತ್ತೆಂದು ಗೊತ್ತಾಗುವದು. ಅದಕ್ಕೆ ಎರಡು ಮುಖ್ಯ ಕಾರಣಗಳಿದ್ದವು. ಇರಾಣ ಮತ್ತು ಅಫಗಾಣಿಸ್ತಾನದ ನಿವಾಸಿಗಳಂತೆ ಭಾರತದಲ್ಲಿಯ ಹಿಂದೂ ಬಹುಜನ ಸಮಾಜವು ಇಸ್ಲಾಮ ಧರ್ಮವನ್ನು ಅಂಗೀಕರಿಸದೆ ತಮ್ಮ ವಂಶಪರಂಪರಾಗತ ಧರ್ಮಕ್ಕೆ ಅಂಟಿಕೊಂಡಿತ್ತು. ಅತಿ ಪ್ರಾಚೀನವಾದ ಹಾಗು ಆಳವಾಗಿ ಬೇರುಬಿಟ್ಟ ಸ್ವತಃದ ಸಂಸ್ಕೃತಿಯು ಭಾರತಕ್ಕೆ ಇತ್ತು.

ದಿಲ್ಲಿಯ ಸುಲ್ತಾನರು ಖಲೀಫೆರ ಪ್ರಭುತ್ವವನ್ನು ಹಾರಹೊಡೆದುದರಿಂದ ಇಲ್ಲಿ ಅವರು ತಮ್ಮ ಮನಸ್ಸಿಗೆ ಬಂದಂತೆ ನಡೆದುಕೊಳ್ಳಲು ಶಕ್ತರಾದರು. ಭಾರತದ ಹೊರಗಿನ ಇಸ್ಲಾಮೀ ಪರಂಪರೆಯಿಂದ ಅವರಿಗೆ ಆತಂಕವುಂಟಾಗಲಿಲ್ಲ. ಹಿಂದುಗಳ ವಿಷಯದಲ್ಲಿ ಅಲ್ಲಾವುದ್ದೀನ ಖಿಲಜಿಯು ಬಹಳ ಅನುದಾರತೆಯಿಂದ ನಡೆದುಕೊಂಡನು; ಆದರೆ ಈ ಖಿಲಜಿಯೇ ಪುರಾಣಮತವಾದಿಗಳಾದ ಕಾಝಿಗಳ ಉಪ-ದೇಶವನ್ನು ಒರೆಸಿ ಒಗೆದನು. ಮುಹಮ್ಮದ ಬಿನ್ ತುಘಲಕನು ಬುದ್ಧಿ ಪ್ರಾಧಾನ್ಯವಾದಿಯಾಗಿದ್ದನು. ಅವನು ಉಲೇಮಾಗಳ ಹಳೆಯ ಪುರಾಣಮತಗಳನ್ನು ಧಿಕ್ಕರಿಸಿಬಿಟ್ಟನು. ಝೈನ-ಉಲ್-ಅಬಿದೀನ ಇವನು ಅಕಬರನಂತೆ ಅತ್ಯಂತ ಉದಾರನಾಗಿದ್ದನು. ಈ ಔದಾರ್ಯದ ಧೋರಣವು ಕೇವಲ ದಿಲ್ಲಿ ಅಥವಾ ಕಾಶ್ಮೀರಿನ ಮಟ್ಟಿಗೆ ಮರ್ಯಾದಿತವಾಗಿರದೆ ಭಾರತದಲ್ಲಿ ಎಲ್ಲ ಕಡೆಗಳಲ್ಲಿಯೂ ಅದು ಹಬ್ಬಿತ್ತೆಂಬ ಸಂಗತಿಯು ಬಂಗಾಲದ ಹುಸೇನಶಾಹಾ ಮತ್ತು ನಸ್ರತಶಾಹಾ ಇವರ ಉದಾರ ಧೋರಣದಿಂದ ಕಂಡುಬರುತ್ತದೆ. ಭಾರತದಲ್ಲಿಯ ಇಸ್ಲಾಮೀ ರಾಜ್ಯಕರ್ತರ ಮೇಲೆ ಮೆಲ್ಲಮೆಲ್ಲನೆ ಭಾರತದ ಪ್ರಾಚೀನ ಸಂಸ್ಕೃತಿಯ ಪ್ರಭಾವವು ಬೀಳತೊಡಗಿತ್ತು.

**ಹಿಂದುಗಳ ಪ್ರತಿಕ್ರಿಯೆ :—** ಮುಸಲ್ಮಾನ ಆಕ್ರಮಕರಲ್ಲಿ ಬೇರೆ ಬೇರೆ ಪ್ರಕಾರಗಳಿದ್ದಂತೆ ಹಿಂದುಗಳಲ್ಲಿಯೂ ಇದ್ದವು. ಚಾರಿತ್ರ್ಯ ಮತ್ತು ಕರ್ತೃತ್ವಗಳ ವಿಷಯದಲ್ಲಿ ಎಲ್ಲ ಸುಲ್ತಾನರೂ ಒಂದೇ ತೆರನಾಗಿದ್ದಿಲ್ಲ. ಹಿಂದೂ ಮುಂದಾಳುಗಳ

ಪರಿಸ್ಥಿತಿಯೂ ಹೀಗೆಯೇ ಇತ್ತು. ಸಿಂಧದ ರಾಣೀಬಾಯಿ, ಪಂಜಾಬಿನ ಜಯ-ಪಾಲ, ಸ್ಥಾನೇಶ್ವರದ ಪೃಥ್ವೀರಾಜ, ದೇವಗಿರಿಯ ಹರಪಾಲದೇವ ಮತ್ತು ಕೊಂಡ-ಣದ (ಸಿಂಹಗಡ) ನಾಗನಾಯಕ ಕೋಳೀ, ಇವರಂತಹ ವೀರಪುರುಷರು ಆಕ್ರಮಕ-ರನ್ನು ಕಟುತರವಾಗಿ ವಿರೋಧಿಸಿ ಮಾತೃಭೂಮಿಯ ಸ್ವಾತಂತ್ರ್ಯಕ್ಕೋಸುಗ ತಮ್ಮ ಪ್ರಾಣವನ್ನು ಅರ್ಪಿಸಿದರು. ತದ್ವಿರುದ್ಧ ಆನಂದಪಾಲ, ರಾಜ್ಯಪಾಲ, ರಾಮದೇವ ರಾವ, ಇವರಿಗೆ ಆಕ್ರಮಕರಿಗೆ ಶರಣಾಗತರಾಗುವದೇ ಜಾಣತನವೆಂದೆನಿಸಿತು. ರಾಜ ನಿಷ್ಠೆ ಅಥವಾ ದಾಕ್ಷಿಣ್ಯ ಇವುಗಳ ತಪ್ಪು ಕಲ್ಪನೆಗಳಿಗೆ ತುತ್ತಾಗಿ ಈ ವ್ಯಕ್ತಿಗಳು ಮುಸಲ್ಮಾನ ವಿಜೇತರಿಗೆ ಸಹಾಯ ಮಾಡಿ ತಮ್ಮ ದೇಶಬಾಂಧವರನ್ನು ಸೋಲಿಸಲು ಕೈನೆರವನ್ನು ನೀಡಿದರು. ಕಟ್ಟಕಡೆಗೆ ಮಲಿಕಕಾಫರ, ಖುಸ್ರು, ಮತ್ತು ಖಾನಜಹಾನ ಮಕಬುಲ್‌ರಂತಹ ಸಂಧಿಸಾಧಕರು ಪರಿಸ್ಥಿತಿಯ ಲಾಭವನ್ನು ಪಡೆದುಕೊಂಡು ತಮ್ಮ ಉತ್ಕರ್ಷವನ್ನು ಸಾಧಿಸಿಕೊಂಡರು, ಆದರೆ ಸ್ವಧರ್ಮವನ್ನು ಬಿಡದೆ ಪರಧರ್ಮೀಯ ಒಡೆಯರ ಸೇವೆಯಲ್ಲಿ ಅತ್ಯುಚ್ಚ ಪದವಿಗೇರಿದ ತಿಲಕರಂತಹ ವ್ಯಕ್ತಿಗಳು ದುರ್ಲಭ.

ಯುದ್ಧದಲ್ಲಿ ಸೆರೆ ಸಿಕ್ಕವರಿಗೆ ಮಾತ್ರ ಇಸ್ಲಾಮ ಧರ್ಮವನ್ನು ಅಂಗೀಕರಿಸದೆ ಗತ್ಯಂತರವಿದ್ದಿಲ್ಲ. ಆದರೂ ಸ್ವಧರ್ಮದ ಮೇಲಿನ ಕೆಲ ಜನರ ನಿಷ್ಠೆಯು ಅತ್ಯಂತ ಉಜ್ವಲವಾಗಿತ್ತು. ಆದಕ್ಕಾಗಿ ಅವರು ಜೀವದ ಬೆಲೆಯನ್ನು ತೆರಲು ಕೂಡ ಹಿಂಜರಿ-ಯಲಿಲ್ಲ. ಸಿಕಂದರ ಲೋದಿಯ ಮುಂದೆ ಒಬ್ಬ ಬ್ರಾಹ್ಮಣನು "ಎಲ್ಲ ಧರ್ಮಗಳು ಮೂಲತಃ ಒಂದೇ ಆಗಿವೆ" ಎಂದು ಪ್ರತಿಪಾದಿಸಿದನು. ಆಗ ಆ ಸುಲ್ತಾನನು "ಹಾಗಿದ್ದರೆ ಹಿಂದೂ ಧರ್ಮವನ್ನು ಬಿಟ್ಟು ನೀನು ತತ್ಸಮಾನವಾದ ಇಸ್ಲಾಮ ಧರ್ಮವನ್ನು ಯಾಕೆ ಅಂಗೀಕರಿಸುವದಿಲ್ಲ?" ಎಂದು ಕೇಳಿದನು. ಆ ಬ್ರಾಹ್ಮಣನು ಸ್ವಧರ್ಮವನ್ನು ಬಿಟ್ಟುಬಿಡಲು ಒಪ್ಪದೆ ಸುಲಾನನಿತ್ತ ದೇಹಾಂತ ಪ್ರಾಯಶ್ಚಿತ್ತದ ಅಪ್ಪಣೆಯನ್ನು ಶಿರಸಾವಮಾನ್ಯ ಮಾಡಿದನು.

ಹಿಂದುಗಳು ಧರ್ಮಾಂತರ ಹೊಂದಲಿ ಇಲ್ಲವೆ ಬಿಡಲಿ, ಅವರನ್ನು ಕಡೆಗಣಿಸಿ, ರಾಜ್ಯಕಾರಭಾರವನ್ನು ನಡೆಸುವದು ಮುಸಲ್ಮಾನ ರಾಜ್ಯಕರ್ತರಿಗೆ ಶಕ್ಯವಿದ್ದಿಲ್ಲ. ತುರ್ಕರು ಸಿಪಾಯಿ ಬಹಾದ್ದೂರರಾಗಿದ್ದರು. ಕಾರಕೂನಿಕೆ ಹಾಗು ಕಾರಭಾರ ಇವು ಅವರಿಗೆ ಒಗ್ಗುತ್ತಿದ್ದಿಲ್ಲ. ಆದುದರಿಂದ ಕಾರಕೂನರನ್ನೂ ಶಿಲ್ಪಿಗಳನ್ನೂ ಹಿಂದೂಗಳ ಲ್ಲಿಂದಲೇ ಆರಿಸಿಕೊಂಡು ತುಂಬಿಕೊಳ್ಳಬೇಕಾಯಿತು.

ಹಿಂದು ಸ್ತ್ರೀಯರೊಡನೆ ಮದುವೆ ಮಾಡಿಕೊಳ್ಳಬೇಕೆಂಬ ಮೋಹವನ್ನು ನಿಗ್ರಹಿಸುವದು ಈ ಪರಕೀಯ ಆಕ್ರಮಕರಿಂದಾಗಲಿಲ್ಲ. ಅವರಲ್ಲಿ ಕೆಲವರನ್ನು ಈ ಹಿಂದೂ ಸ್ತ್ರೀಯರು ತಮ್ಮ ದಾಸಾನುದಾಸರನ್ನಾಗಿ ಮಾಡಿಬಿಟ್ಟರು. ಕೆಲ ಸುಲ್ತಾನರು ಇಂತಹ ಸ್ತ್ರೀಯರ ಹೊಟ್ಟೆಯಲ್ಲಿ ಹುಟ್ಟಿದರು. ಆದರಿಂದ ಅವರ ರಕ್ತದಲ್ಲಿ ಹಿಂದೂ ರಕ್ತದ ಮಿಶ್ರಣವಾಗಿ ಕಟ್ಟಾ ತುರ್ಕರ ಬಿಗುವು ಅವರಲ್ಲಿ ಉಳಿಯಲಿಲ್ಲ. ಇಂತಹ ಸಮ್ಮಿಲನದಿಂದಲೇ ಕಾಲಾಂತರದಲ್ಲಿ ಹಿಂದೂ ಮುಸಲ್ಮಾನ ಸಂಸ್ಕೃತಿಗಳ ಸಮನ್ವಯವು ಉಂಟಾಯಿತು. ಈ ಸಾಂಸ್ಕೃತಿಕ ಸಮನ್ವಯದ ಪರಿಣಾಮವು

ಮುಸಲ್ಮಾನರ ಮೇಲಾದಂತೆ ಹಿಂದುಗಳ ಮೇಲೂ ಆಯಿತು.

**ಸಂಸ್ಕೃತಿ ಸಂಗಮ :—** ನಾವು ವಿಚಾರಿಸುತ್ತಿರುವ ಈ ಕಾಲಖಂಡದಲ್ಲಿ ಕೊನೆಯವರೆಗೆ ಹಿಂದೂ ಮುಸಲ್ಮಾನರಲ್ಲಿಯ ಈ ಸಂಸ್ಕೃತಿ ಸಂಗಮವು ಸ್ಪಷ್ಟವಾಗಿ ಗೋಚರವಾಗುತ್ತದೆ. ಡಾ ತಾರಾಚಂದರು ಹೇಳಿದಂತೆ " ಹಿಂದುಗಳ ಧರ್ಮ, ಕಲೆ, ವಾಙ್ಮಯ, ಮತ್ತು ಶಾಸ್ತ್ರ ಇವೆಲ್ಲವುಗಳ ಮೇಲೆ ಇಸ್ಲಾಮೀ ತತ್ವದ ಪ್ರಭಾವವು ಬಿದ್ದಿತು. ಹಿಂದೂ ಸಂಸ್ಕೃತಿಯ ಅಂತರಂಗ ಮತ್ತು ಹಿಂದೂ ಮನ ಇವುಗಳ ಮೇಲೂ ಅದರ ಪರಿಣಾಮವಾಯಿತು. ಪ್ರತಿಯಾಗಿ ಇಸ್ಲಾಮ ಧರ್ಮೀಯರ ಜೀವನದ ಪ್ರತ್ಯೇಕ ಕ್ಷೇತ್ರದಲ್ಲಿಯೂ ಹಿಂದೂ ಸಂಸ್ಕೃತಿಯ ಮುದ್ರೆಯು ಎದ್ದು ಕಾಣ-ತೊಡಗಿತು. "

ಖಲೀಫಾ ಹರೂನ ಅಲ್‌ರಶೀದನನ್ನು ಒಬ್ಬ ಹಿಂದು ವೈದ್ಯನು ಗುಣಪಡಿ-ಸಿದನು. ಹಾಗು 'ಬ್ರಹ್ಮ ಸಿದ್ಧಾಂತ'ದಂತಹ ಗ್ರಥವು ಅರಬೀ ಭಾಷೆಯಲ್ಲಿ ಭಾಷಾಂ-ತರಿಸಲ್ಪಟ್ಟಿತು, ಎಂಬ ಸಂಗತಿಯ ಉಲ್ಲೇಖವು ಹಿಂದೆ ಬಂದಿದೆ. ವಿಧ್ವಂಸಕ ಗಝನವಿ ಮಹಮೂದನೊಡನೆ ಬಂದಿದ್ದ ಅರಬೀ ಪಂಡಿತ ಅಲ್ಬೆರುನಿಯು ವಿಶೇಷ ಸಂಸ್ಮರಣೀಯನಾಗಿರುವನು. ಆತನ ಬುದ್ಧಿಮತ್ತೆಯು ಸರ್ವಂಕಷವಾಗಿದ್ದಿತಲ್ಲದೆ ಅವನು ಬಹಳ ಬಿಚ್ಚುಬಗೆಯವನಾಗಿದ್ದನು. ಹಿಂದೂಗಳ ಪ್ರಾಚೀನ ಸಂಸ್ಕೃತಿಯ ಯಥಾರ್ಥ ಜ್ಞಾನವನ್ನು ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ ಸಂಸ್ಕೃತ ಭಾಷೆ-ಯಲ್ಲಿಯ ಭಗವದ್ಗೀತೆಯೇ ಮೊದಲಾದ ಗ್ರಂಥಗಳ ಅಭ್ಯಾಸವನ್ನು ಆಳವಾಗಿ ಮಾಡಿದನು. ಬಲ್ಬನನಿಂದ ಫಿರೋಜ ತುಘಲಕನವರೆಗೆ ಆಗಿಹೋದ ಸುಲ್ತಾನರ ಆಶ್ರಯದಲ್ಲಿ ಅಮೀರ ಖುಸ್ರುನಂತಹರಾದ ಕವಿಗಳಿದ್ದರು. ಈ ಕವಿಗಳು ಉರ್ದು ವಾಙ್ಮಯದ ಅಭಿವೃದ್ಧಿಗೆ ಅಮೌಲ್ಯ ಕಾಣಿಕೆಯನ್ನು ತಿತ್ತರು. ಭಾರತದೊಡನೆ ಇಸ್ಲಾಮದ ಸಂಬಂಧವುಂಟಾದುದರ ಫಲವಾಗಿಯೆ ಉರ್ದು ಭಾಷೆಯು ನಿರ್ಮಾಣ-ವಾಯಿತು.

ಹಿಂದೂ ಜನರಲ್ಲಿ ಐತಿಹಾಸಿಕ ದೃಷ್ಟಿಕೋನವಿಲ್ಲೆಂದು ಅಲ್ಬೆರುನಿಯು ತನ್ನ ಅಭಿಪ್ರಾಯವನ್ನು ವ್ಯಕ್ತಮಾಡಿ " ನಾವು ಇತಿಹಾಸವನ್ನು ಬಯಸಿದರೆ ಇವರು ಅಖ್ಯಾಯಿಕೆಗಳನ್ನು ಹೇಳತೊಡಗುವರು, " ಎಂದು ಅಂದಿರುವನು. ಆದರೆ ಮುಸ-ಲ್ಮಾನರ ಸಹವಾಸದಿಂದ ಹಿಂದೂಗಳಲ್ಲಿಯೂ ಇತಿಹಾಸಲೇಖನವು ಆರಂಭ-ವಾಯಿತು. ಚಾಂದ ಬಾರ್ದೋಯಿಯ 'ಪೃಥ್ವೀರಾಜ ರಾಸೋ' ಎಂಬುದನ್ನು ಒಂದು ಉದಾಹರಣೆಯೆಂದು ಕೊಡಬಹುದು ಕಲ್ಹಣ ಕವಿಯು ಸಂಸ್ಕೃತದಲ್ಲಿ ರಚಿಸಿದ 'ರಾಜತರಂಗಿಣಿ' ಎಂಬ ಐತಿಹಾಸಿಕ ಕಾವ್ಯವು ಬಹಳ ಪ್ರಸಿದ್ಧವಾಗಿದೆ. ಆದರೆ ಆ ಕಾಲದಲ್ಲಿ ನಿಜವಾದ ಸಮ್ಮಿಲನದ ಪೂರ್ವಚಿಹ್ನಗಳು ಕಂಡುಬಂದವು. ಅರಬಿ ಭಾಷೆಯ ಅಕ್ಷರಗಳಲ್ಲಿ ಲಕ್ಷ್ಮೀ ಮತ್ತು ನಂದಿ ಚಿತ್ರಗಳುಳ್ಳ ಘೋರಿಯ ಕಾಲದಲ್ಲಿಯ ನಾಣ್ಯಗಳು ದೊರೆತಿವೆ. 'ದೇಹಲೀವಾಲಾ' ಎಂಬ ಹೆಸರಿನ ನಾಣ್ಯಗಳ ಮೇಲಂತೂ ಸುಲ್ತಾನನ ಹೆಸರನ್ನು ದೇವನಾಗರಿ ಲಿಪಿಯಲ್ಲಿ ಕೊರೆಯಲಾಗಿದೆ. ಜಾನಪುರ-

ದಲ್ಲಿಯ ಅಟಲಾದೇವಿ ಮಸೀದೆ ಮತ್ತು ಮಾಂಡುದಲ್ಲಿಯ ಹಿಂದೋಳಾ ಮಹಾಲು ಮುಂತಾದವುಗಳ ಕಲಾಕೌಶಲ್ಯದಲ್ಲಿ ಹಿಂದೂ ಮತ್ತು ಇಸ್ಲಾಮಿ ಕಲೆಗಳ ಸುಂದರ ಸಮನ್ವಯವಾಗಿದೆ. ಸಾತಾರಾ ಜಿಲ್ಲೆಯಲ್ಲಿಯ ಫಲಟಣದಲ್ಲಿ ಮಸೀದೆಗಳಂತೆ ತೋರುವ ಮಹಾನುಭಾವ ಪಂಥದ ಮಂದಿರಗಳಲ್ಲಿ ಶ್ರೀದತ್ತನಂತಹ ದೇವತೆಗಳ ಮೂರ್ತಿಗಳುಂಟು.

ತತ್ವಜ್ಞಾನದ ವಿಷಯದಲ್ಲಿ ಇಸ್ಲಾಮ ಧರ್ಮದಲ್ಲಿ ಸುಫಿ ಪಂಥ ಮತ್ತು ಹಿಂದುಗಳ ವೇದಾಂತ ಮತ್ತು ಭಕ್ತಿಮಾರ್ಗ ಇವುಗಳಲ್ಲಿ ಸಾಧರ್ಮ್ಯವಿದೆ. ವಿದ್ಯಾ-ಪತಿ, ಕತ್ತಿವಾಸ ಮತ್ತು ಕವೀಂದ್ರ ಪರಮೇಶ್ವರ ಇವರು ರಾಮಾಯಣ, ಮಹಾ-ಭಾರತ, ಭಾಗವತ ಮೊದಲಾದ ಗ್ರಂಥಗಳನ್ನು ಬಂಗಾಲಿಯಲ್ಲಿ ಭಾಷಾಂತರಿಸಿ ಆ ಗ್ರಂಥಗಳ ಪ್ರಸಾರವು ಬಹುಜನಸಮಾಜದಲ್ಲಿ ಆಗಲು ಉತ್ತೇಜನವಿತ್ತರು. ಬಂಗಾಲಿಯಲ್ಲಿಯ ಈ ಗ್ರಂಥಗಳ ಪಾರಾಯಣವನ್ನು ಹಿಂದೂ ಮುಸಲ್ಮಾನರಿಬ್ಬರೂ ಮಾಡುತ್ತಿದ್ದರು. ಚೈತನ್ಯನೆಂಬ ಬಂಗಾಲಿ ಸಂತನಿಗೆ ( ಸ. ೧೪೮೫—೧೫೩೩ ) ಹಿಂದೂ ಶಿಷ್ಯರೂ ಮುಸಲ್ಮಾನ ಶಿಷ್ಯರೂ ಇದ್ದರು. ಕಬೀರ ( ಸ. ೧೪೪೦-೧೫೧೮ ) ಮತ್ತು ನಾನಕ ( ಸ. ೧೪೬೯-೧೫೩೮ ) ಇವರೀರ್ವರೂ ಈ ಧಾರ್ಮಿಕ ಸಮನ್ವಯದ ಮೂರ್ತಿಮಂತ ಪ್ರತೀಕರಾಗಿದ್ದರು. "ಧರ್ಮವೆಂಬುದು ಕೇವಲ ಶಬ್ದದಲ್ಲಿಲ್ಲ; ಎಲ್ಲರನ್ನು ಸಮವಾಗಿ ಕಾಣುವವನೇ ಧರ್ಮನಿಷ್ಠನು" ಎಂಬ ನಾನಕನ ಉಪದೇಶವು ಭಾರತೀಯ ಜನತೆಗೆ ಮನವರಿಕೆಯಾಯಿತು.

ಚೈತನ್ಯನ ರೂಪಕವನ್ನೇ ಕಡ ತೆಗೆದುಕೊಂಡು ಹೀಗೆ ಹೇಳಬಹುದು: "ಇಸ್ಲಾಮೀ ಪ್ರಭುತ್ವದಲ್ಲಿಯ ಭಾರತವು ಒಂದು ಸುಫಲಿತ ವೃಕ್ಷದಂತಿತ್ತು. ಅದರ ಟೊಂಗೆಗಳು ಕಾಲಕಾಲಕ್ಕೆ ಕತ್ತರಿಸಲ್ಪಟ್ಟರೂ ಆ ಗಿಡದ ಕಸುವು ಕಡಿಮೆಯಾಗ-ಲಿಲ್ಲ. ತದ್ವಿರುದ್ಧ ಅದು ಹೊಸತಾಗಿ ಪಲ್ಲವಿಸಿ ಹೂ-ಹಣ್ಣುಗಳನ್ನು ಬಿಟ್ಟಿತು." ಈ ಗಿಡದ ಬೇರುಗಳು ಭಾರತದ ಭೂಮಿಯಲ್ಲಿ ಬಹಳ ಆಳವಾಗಿ ಇಳಿದುದರಿಂದ ಈ ಸಂಸ್ಕೃತಿವೃಕ್ಷವು ಸದಾ ಬೆಳೆಯುತ್ತಲೇ ಇತ್ತು. ತಮ್ಮ ಪ್ರೇಮಲ ನೆರಳಿನಲ್ಲಿ ಅವು ತಮ್ಮ ಶತ್ರುಗಳಿಗೂ ಆಶ್ರಯವನ್ನಿತ್ತವು. ಆದರಿಂದ ಈ ಪವಿತ್ರ ಪ್ರಾಚೀನ ಭೂಮಿಯೊಡನೆ ಸಮರಸವಾಗಬೇಕೆಂಬ ವೃತ್ತಿಯು ಪರಕೀಯರಲ್ಲಿಯೂ ಉಂಟಾಗಲು ಶಕ್ಯವಾಯಿತು".

## ಅವತರಣಿಕೆ

(೧) 'ಸುಲ್ತಾನ ಇಬ್ರಾಹಿಮ ಲೋದಿಯ ಆಳಿಕೆಯಲ್ಲಿಯ ವಿಶೇಷ ಉಲ್ಲೇಖನೀಯ ಸಂಗತಿಯೆಂದರೆ ದೇಶದಲ್ಲಿಯ ಆರ್ಥಿಕ ಸಮೃದ್ಧಿ. ಮೊದಲಿನ ಯಾವ ಸುಲ್ತಾನನ ಕಾಲದಲ್ಲಿಯೂ ಇಲ್ಲದಷ್ಟು ಕಾಳುಕಡಿ, ಬಟ್ಟೆಬರೆ ಮತ್ತು ಬೇರೆ ಎಲ್ಲ ವಸ್ತುಗಳ ಅಗ್ಗಳತೆಯು ಇತ್ತು.'

'ಒಂದು "ಬಹಲೋಲಿ" ನಾಣ್ಯಕ್ಕೆ ಹತ್ತು ಮಣ ಧಾನ್ಯವು ದೊರೆಯು-ತ್ತಿತ್ತು. ಹಾಗೆಯೆ ಐದು ಸೇರು ಶುದ್ಧ ಬೆಣ್ಣೆ ಹಾಗು ಹತ್ತು ಗಜ ಬಟ್ಟೆ ಅಷ್ಟೇ

ಬೆಲೆಗೆ ದೊರೆಯುತ್ತಿದ್ದವು. ಪ್ರತಿಯೊಂದು ವಸ್ತುವೂ ಸಮೃದ್ಧವಾಗಿತ್ತು. ಬೇಡಿದಷ್ಟು ಮಳೆಯಾಗುತ್ತಿದ್ದುದೇ ಇದರ ಕಾರಣವು. ಆದರಿಂದ ವಾಡಿಕೆಗಿಂತ ಹತ್ತು ಪಟ್ಟು ಹೆಚ್ಚು ಬೆಳೆಯು ಬರುತ್ತಿತ್ತು. ತಿಂಗಳಿಗೆ ಐದು ಟಂಕ ಸಂಬಳವು ದೊರೆಯುತ್ತಿದ್ದವನಿಗೆ ಸನ್ಮಾನ್ಯ ರೀತಿಯಲ್ಲಿ ಕುಟುಂಬದ ಚರಿತಾರ್ಥವನ್ನು ಸಾಗಿಸಲು ಬರುತ್ತಿತ್ತು.'

—ತಾರೀಖ ಈ–ದಾಊದೀ

( ಎಂಬ ಆ ಕಾಲದ ಇತಿಹಾಸದಿಂದ )

(೨) ಸಂತ ಕಬೀರನ ಕೆಲ ಪದ್ಯಗಳ ಆಶಯವನ್ನು ಇದರಡಿಯಲ್ಲಿ ಕೊಡಲಾಗಿದೆ. ಆದರಿಂದ ಹಿಂದೂ ಮುಸಲ್ಮಾನರಲ್ಲಿಯ ಸಮನ್ವಯದ ವಿಚಾರಸರಣಿಯ ಬೀಜಾರೋಪಣವನ್ನು ಕಬೀರನು ಹೇಗೆ ಕೈಕೊಂಡಿದ್ದನೆಂಬ ಸಂಗತಿಯು ಲಕ್ಷ್ಯದಲ್ಲಿ ಬರಬಹುದು.

"ದೇವರು ಮಸೀದೆಯಲ್ಲಿದ್ದರೆ ಈ ಜಗತ್ತಿನ ಒಡೆಯನಾರು? ರಾಮನು ಮೂರ್ತಿಯಲ್ಲಿ ಹೋಗಿ ಕುಳಿತಿದ್ದರೆ ಬಾಹ್ಯ ಜಗತ್ತಿನಲ್ಲಿ ಏನು ನಡೆದಿರುವದೆಂಬುದನ್ನು ನೋಡುವವರಾರು? ಹರಿಯು ಪೂರ್ವ ದಿಕ್ಕಿನಲ್ಲಿರುತ್ತಿದ್ದರೆ ಅಲ್ಲಾನು ಪಶ್ಚಿಮದಿಕ್ಕಿನಲ್ಲಿರುವನು. ನಿಮ್ಮ ಅಂತಃಕರಣದಲ್ಲಿಯೇ ತುಸು ನೋಡಿರಿ. ರಾಮ ರಹೀಮರಿಬ್ಬರೂ ಅಲ್ಲಿಯೇ ಇರುವರು. ಈ ಪ್ರಪಂಚದಲ್ಲಿಯ ಸ್ತ್ರೀಪುರುಷರೆಲ್ಲರೂ ಪರಮೇಶ್ವರನ ನಡೆದಾಡುವ ರೂಪಗಳು. ಕಬೀರನು ಅಲ್ಲಾ ಮತ್ತು ರಾಮ ಇವರೀರ್ವರ ಮಗನು. ಅವನೇ ನನ್ನ ಗುರು. ಅವನೇ ನನ್ನ ಪೀರ. ಜಾತಿನಿರ್ಬಂಧಗಳಲ್ಲಿ ಹುರುಳಿಲ್ಲ ಬಣ್ಣದ ಘಟಗಳು ವಿವಿಧವಾಗಿದ್ದರೂ ಮೂಲ ಬಣ್ಣವು ಒಂದೇ ಇರುತ್ತದೆ. ಮಾನವ ಸ್ವಭಾವದಲ್ಲಿ ಭಿನ್ನತೆಯು ಎಷ್ಟೇ ತೋರಿದರೂ ಮಾನವತೆಯೆಂಬುದೊಂದೇ. ಪರಮೇಶ್ವರ ಪ್ರಾಪ್ತಿಯು ಬ್ರಾಹ್ಮಣರಿಗೇ ಮೀಸಲಾಗಿಲ್ಲ. ನಿಜವಾದ ಭಕ್ತಿಯು ಯಾರ ಹೃದಯದಲ್ಲಿದೆಯೋ ಅವರೆಲ್ಲರಿಗೂ ಅವನು ದೊರೆಯುವನು".

—ಕಬೀರ

## ಅಭ್ಯಾಸ

೧. ಭಾರತದಲ್ಲಿ ಪ್ರವೇಶಿಸಿದ ಬೇರೆ ಬೇರೆ ಮುಸಲ್ಮಾನ ಜನರ ಬಗೆಗೆ ಗೊತ್ತಿದ್ದುದನ್ನು ಹೇಳಿರಿ.

೨. ಮಲೀಕ ಕಾಫರ, ಖಾನಜಹಾನ ಮುಕಬುಲ್, ತಿಲಕ ಈ ವ್ಯಕ್ತಿಗಳ ಉದಯದ ವೈಶಿಷ್ಟ್ಯವನ್ನು ಹೇಳಿರಿ.

೩. 'ನಾಯಬ' 'ಕಾಝಿ' 'ಮುಹತಾಸಿಬ' ಮತ್ತು 'ಕೊತವಾಲ' ಇವರ ಕೆಲಸದ ಬಗೆಗೆ ಒಂದೊಂದು ವಾಕ್ಯವನ್ನು ಬರೆಯಿರಿ.

೪. ಮುಸಲ್ಮಾನ ಆಕ್ರಮಕರಿಗೆ ಎಂತಹ ಬೇರೆ ಬೇರೆ ಬಗೆಯ ಹಿಂದೂ ಮುಂದಾಳುಗಳು ಗಂಟುಬಿದ್ದರು?

ಮುಸಲ್ಮಾನ ವಿಜೇತರು ಮುಂದೆ ಮುಂದೆ ಹಿಂದೂ ಜನರೊಡನೆ ಸಹಾನುಭೂತಿ-ಯಿಂದ ಏಕೆ ವರ್ತಿಸತೊಡಗಿದರು?

ಹಿಂದೂ-ಇಸ್ಲಾಮಿ ಸಂಸ್ಕೃತಿ ಸಂಗಮದ ಬಗೆಗೆ ನಿಮಗೆ ರುಚಿಸಿದ ಎರಡು ಉದಾ-ಹರಣೆಗಳನ್ನು ಕೊಡಿರಿ.

ಸುಲ್ತಾನಶಾಹಿಯ ಕೊನೆಯ ಅವಧಿಯಲ್ಲಿಯ ಆರ್ಥಿಕ ಉನ್ನತಿಯ ವಿಷಯವಾಗಿ 'ತಾರೀಖ—ಈ—ದಾಊದೀ' ಎಂಬ ಆ ಕಾಲದ ಇತಿಹಾಸದಿಂದ ನಿಮಗೆ ಯಾವ ಸಂಗತಿಯು ಗೊತ್ತಾಗುತ್ತದೆ?

## ೪ನೆಯ ಪಾಠ

## ವೈಭವಶಾಲಿಯಾದ ವಿಜಯನಗರ

**ಸ್ವಾತಂತ್ರ್ಯ ಪ್ರೇಮದ ಜ್ಯೋತಿಯು :—** ನೀವು ಭಾರತದ ಪ್ರಾಚೀನ ಇತಿಹಾಸದಲ್ಲಿ ಯವನರು, ಶಕರು, ಕುಶಾನರು ಮೊದಲಾದ ಪರಕೀಯರು ಭಾರತಕ್ಕೆ ಬಂದುದನ್ನು ಓದಿರುವಿರಿ. ಈ ಪರಕೀಯರನ್ನು ಭಾರತವು ತನ್ನಲ್ಲಿ ಸಮಾವೇಶ ಮಾಡಿಕೊಂಡಿತು. ಅವರೂ ಪರಕೀಯರಾಗಿ ಉಳಿಯದೆ ಭಾರತೀಯರೇ ಆದರು. ಆದರೆ ಎಂಟನೆಯ ಶತಮಾನದಿಂದ ಭಾರತಕ್ಕೆ ಬಂದ ಮುಸಲ್ಮಾನ ಆಕ್ರಮಕರ ಸ್ವಭಾವವು ಬೇರೆ ತರಹದ್ದಾಗಿತ್ತು. ಅವರು ವಿಚಿತ್ರ ಜನರಾಗಿದ್ದರು. ಅವರು ಮೂರ್ತಿಪೂಜಕ ಹಿಂದುಗಳ ವಿರುದ್ಧ 'ಜಿಹಾದ' ವನ್ನು ಸಾರಿ ಭಾರತದ ಮೇಲೆ ಏರಿ ಬಂದರು. ಈ ರೀತಿ ದಂಡೆತ್ತಿ ಬಂದವರಲ್ಲಿ ಅರಬ ಮತ್ತು ಅನಂತರದ ತುರ್ಕ ಆಕ್ರಮಕರಿಗೆ ಸಹಜವಾಗಿ ಯಶಸ್ಸು ಸಿಕ್ಕಲಿಲ್ಲ, ತಮ್ಮ ಮಾತೃಭೂಮಿ, ತಮ್ಮ ಸಂಸ್ಕೃತಿ ಮತ್ತು ತಮ್ಮ ಧರ್ಮವನ್ನು ಪ್ರಾಣಕ್ಕಿಂತ ಹೆಚ್ಚು ಪ್ರಿಯವೆಂದು ಭಾವಿಸುತ್ತಿದ್ದ ಭಾರತೀಯ ವೀರಪುರುಷರು ಆ ಕಾಲದಲ್ಲಿಯೂ ಇದ್ದರು. ಅವರ ಪರಂಪರೆಯು ಅತ್ಯಂತ ಪ್ರಾಚೀನ ಮತ್ತು ಅತ್ಯಂತ ಉಜ್ವಲವಾಗಿರುವುದು. ಗುರ್ಜರ ಪ್ರತೀಹಾರರು ಸುಮಾರು ಮೂರು ನೂರು ವರುಷ (೮ ರಿಂದ ೧೧ನೇ ಶತಕದ ವರೆಗೆ) ಅರಬ ಆಕ್ರಮಕರನ್ನು ತಡೆದು ನಿಲ್ಲಿಸಿದರು. ೮ನೆಯ-೯ನೆಯ ಶತಮಾನಗಳಲ್ಲಿ ಕನೋಜದ ೨ನೆಯ ನಾಗಭಟ್ಟ ಮತ್ತು ಮಿಹಿರಭೋಜ (ಸ. ೮೪೦ ರಿಂದ ೮೯೦)ರು ಅರಬ ಆಕ್ರಮಕರಿಗೆ ಪ್ರತೀಕಾರ ಮಾಡಿದ ವೀರಪುರುಷರಾಗಿದ್ದರು. ಅನಂತರದ ರಾಣಾ ಕುಂಭ, ರಾಣಾ ಸಿಂಗ, ರಾಣಾ ಪ್ರತಾಪ, ಕೃಷ್ಣದೇವರಾಯ ಮತ್ತು ಶಿವಾಜಿ ಮೊದಲಾದವರಿಗೆ ಚಿತ್ತೂರಿನ ಬಾಪ್ಪಾ ರಾವಳನು ಸ್ಫೂರ್ತಿಸ್ಥಾನವಾಗಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ. ೧೫ನೇ ಶತಮಾನದ ಮಧ್ಯದಲ್ಲಿ ಪರಕೀಯ ಆಕ್ರಮಕರನ್ನು ಸೋಲಿಸಿದ ವಿಜಯದ ಸ್ಮರಣಾರ್ಥವಾಗಿ ರಾಣಾ ಕುಂಭನು ಚಿತ್ತೂರಿನಲ್ಲಿ ನಿಲ್ಲಿಸಿದ ಜಯಸ್ತಂಭವು ಈ ಉಜ್ವಲ ಪರಂಪರೆಯ ಕೀರ್ತಿಯನ್ನು ಇಂದಿಗೂ ಮೆರೆಸುತ್ತಿ-ರುವದು. ಈ ಅರಬ ಮತ್ತು ತುರ್ಕ ಆಕ್ರಮಕರ ವಿರುದ್ಧವಾಗಿ ಪ್ರಾಣವನ್ನು ಪಣ-

ವಾಗಿಟ್ಟು ಹೋರಾಡಿದ ಸಿಂಧದ ರಾಣೀಬಾಯಿ, ಪಂಜಾಬದ ಜಯಪಾಲರು ಮತ್ತು ಘೋರೀ ಮುಹಮ್ಮದನಿಗೆ ಕೈಯಲ್ಲಿ ಹುಲ್ಲುಹಿಡಿಯ ಹಚ್ಚಿದ ಪೃಥ್ವೀರಾಜ ಮೊದಲಾದ ಸ್ವಾತಂತ್ರ್ಯವೀರರು ಹಿಂದಿನ ಪರಂಪರೆಯನ್ನೇ ಮುನ್ನಡೆಸಿಕೊಂಡು ಬಂದರು. ಆದುದರಿಂದ ಸ್ವಾತಂತ್ರ್ಯಪ್ರೇಮದ ಜ್ಯೋತಿಯೂ ಅಖಂಡವಾಗಿ ಬೆಳಗುತ್ತ ಬಂದಿತು. ಅನಂತರ ಸ. ೧೫೨೭ರಲ್ಲಿ ಕಾನವ್ಹಾ ಸಮರಭೂಮಿಯಲ್ಲಿ ಬಾಬರನೊಡನೆ ಹೋರಾಡಿದ ರಾಣಾ ಸಂಗ್ರಾಮಸಿಂಹ (ಉರ್ಫ ರಾಣಾ ಸಂಗ)ನು ಅಸಾಮಾನ್ಯವ್ಯಕ್ತಿಯಾಗಿದ್ದನು. ರಜಪೂತರ ಶಕ್ತಿಸರ್ವಸ್ವವನ್ನು ಸಂಘಟಿಸಿ ಅವನು ಮೊಗಲರ ಆಕ್ರಮಣವನ್ನು ಬಲವಾಗಿ ಎದುರಿಸಿದನು. ಅವನ ಕರ್ತೃತ್ವದ ಮತ್ತು ದೊಡ್ಡತನದ ಪ್ರಶಂಸೆಯನ್ನು ಅವನ ಶತ್ರುವಾದ ಬಾಬರನು ತನ್ನ ಆತ್ಮಚರಿತ್ರೆಯಲ್ಲಿ ಮಾಡಿರುವನು. ಅವನು ಹೀಗೆ ಬರೆಯುತ್ತಾನೆ: " ರಾಜ್ಯವಿಸ್ತಾರ ಮತ್ತು ಸೈನಿಕ ಶಕ್ತಿ ಇವೆರಡೂ ವಿಷಯಗಳಲ್ಲಿ ಸಮರ್ಥರಾದ ಇಬ್ಬರು ಅರಸರು ಹಿಂದುಸ್ಥಾನದಲ್ಲಿರುವರು, ಒಬ್ಬನು ವಿಜಯನಗರದ ಕೃಷ್ಣರಾಯನು, ಇನ್ನೊಬ್ಬನು ರಾಣಾ ಸಂಗನು. "

ಉತ್ತರದಲ್ಲಿ ಭಾರತೀಯ ಸಂಸ್ಕೃತಿಯನ್ನು ರಾಣಾ ಸಂಗನು ರಕ್ಷಿಸಿದರೆ, ದಕ್ಷಿಣ-ದಲ್ಲಿ ಅದೇ ಕಾರ್ಯವನ್ನು ಸಮಕಾಲೀನನಾದ ಕೃಷ್ಣದೇವರಾಯನು ಮಾಡಿದನು. ಈ ಯೋಗಾಯೋಗವನ್ನು ಲಕ್ಷ್ಯದಲ್ಲಿಡಬೇಕಾಗಿದೆ. ಭಾರತೀಯ ಧರ್ಮ ಮತ್ತು ಸಂಸ್ಕೃತಿಗಳನ್ನು ರಕ್ಷಿಸುವ ಕಂಕಣವನ್ನು ಕಟ್ಟಿಕೊಂಡ ವಿಜಯನಗರದ ಉದಯವು ಯಾವ ಪರಿಸ್ಥಿತಿಯಲ್ಲಿ ಆಯಿತೆಂಬುದನ್ನು ಈಗ ನೋಡುವಾ.

**ಹಿನ್ನೆಲೆ:**— ೧೩ನೆಯ ಶತಮಾನದಲ್ಲಿ ಉತ್ತರ ಹಿಂದುಸ್ಥಾನವೆಲ್ಲ ಮುಸ-ಲ್ಮಾನರ ಆಡಳಿತಕ್ಕೊಳಪಟ್ಟಿದ್ದಿತು. ಅಲ್ಲಾವುದ್ದೀನ ಖಿಲಜಿ ಮತ್ತು ಅವನ ಪರಾ-ಕ್ರಮಶಾಲಿಯಾದ ಸೇನಾಪತಿ ಕಾಫೂರನು ಕನ್ಯಾಕುಮಾರಿಯವರೆಗೆ ತನ್ನ ವರ್ಚಸ್ಸನ್ನು ಕೂಡ್ರಿಸಿದನು. ದಕ್ಷಿಣದಲ್ಲಿಯ ಧನಸಂಪನ್ನರಾಗಿದ್ದ ದೇವಗಿರಿಯ ಯಾದವರು, ತೆಲಂಗಾಣದ ಕಾಕತೀಯರು, ದ್ವಾರಸಮುದ್ರದ ಹೊಯಿಸಳರು, ಮದುರೆಯ ಪಾಂಡ್ಯರು ಮೊದಲಾದವರ ರಾಜ್ಯದಿಂದ ಹೇರಳವಾದ ಸಂಪತ್ತಿಯನ್ನು ಲೂಟುಮಾಡಿಕೊಂಡು ಬಂದಬಳಿಕ ಅಲ್ಲಾಉದ್ದೀನನಿಗೆ ಸಮಾಧಾನವೆನಿಸಿತು. ಈ ರಾಜ್ಯಗಳನ್ನು ' ಖಾಲಸಾ ' ಮಾಡುವ ಗೋಜಿಗೆ ಅವನು ಹೋಗಲಿಲ್ಲ. ಅನಂತರ ಬಂದ ಸುಲ್ತಾನ ಮುಹಮ್ಮದ ಬಿನ್ ತುಘಲಕನು ದಕ್ಷಿಣ ಹಿಂದುಸ್ಥಾನವನ್ನು ಗೆದ್ದು ತನ್ನ ಸಾಮ್ರಾಜ್ಯದಲ್ಲಿ ಸೇರಿಸಿಕೊಳ್ಳುವ ಮಹತ್ವಾಕಾಂಕ್ಷೆಯನ್ನು ತಾಳಿದನು. ರಾಜ್ಯಗಳನ್ನು ಒಂದರಹಿಂದೊಂದರಂತೆ ಖಾಲಸಾ ಮಾಡುವ ಧೋರಣವನ್ನು ನಿರ್ವ-ಹಿಸಿದನು. ವರಂಗಲ್ಲಿನ ಕಾಕತೀಯರನ್ನು ಮುರಿದು ಅವನು ಮದುರೆಯ ಮೇಲೆ ದಾಳಿ ಮಾಡಿದನು. ದೇವಗಿರಿಯಿಂದ ಮದುರೆಯವರೆಗೆ ಮಾರ್ಗದಲ್ಲೆಲ್ಲ ಮಹತ್ವದ ಸ್ಥಳಗಳಲ್ಲೆಲ್ಲ ಅವನು ಮುಸಲ್ಮಾನ ಸೈನ್ಯವನ್ನಿಟ್ಟನು. ದೇವಗಿರಿ, ಮದುರೆ ಮೊದಲಾದ ಸ್ಥಳಗಳಲ್ಲಿ ಮುಸಲ್ಮಾನ ಅಮಲದಾರರನ್ನು ನೇಮಿಸಿದನು. ದೇವಗಿರಿ ಮತ್ತು ಕಂಪಲಿ ಯಲ್ಲಿಯ ಹಿಂದೂ ರಾಜರು ಕೊಂಡಾಣಾ (ಸಿಂಹಗಡ)ದಲ್ಲಿ ನಾಗನಾಯಕ ಮೊದಲಾ-

ಲಾದವರು ತುಘಲಕನ ಆಡಳಿತೆಯ ವಿರುದ್ಧ ಬಂಡೆದ್ದರು. ಆದರೆ ಅವರ ಆಟವೇನೂ ಸಾಗಲಿಲ್ಲ. ಯಾದವ, ಕಾಕತೀಯ, ಹೊಯ್ಸಳ, ಪಾಂಡ್ಯ ಮೊದಲಾದ ದೊಡ್ಡ ದೊಡ್ಡ ಹಿಂದೂ ರಾಜ್ಯಗಳು ಮುಸಲ್ಮಾನರ ಆಕ್ರಮಣವನ್ನು ಸಹಿಸದೆ ಇಸ್ಪೀಟಿನ ಬಂಗಲೆಗಳಂತೆ ಮುರಿದುಬಿದ್ದವು. ಕೇರಳವೊಂದೇ ಅಜಿಂಕ್ಯವಾಗುಳಿಯಿತೆಂದು ಹೇಳಬಹುದು. ಮುಸಲ್ಮಾನರ ಆಕ್ರಮಣದಿಂದ ದಕ್ಷಿಣ ಭಾರತದಲ್ಲಿ ಹಿಂದೂ ಸಂಸ್ಕೃತಿಗೆ ಬಲವಾದ ಪೆಟ್ಟು ಬಿದ್ದಿತು. ತತ್ಕಾಲೀನ ಲೇಖವೊಂದರಲ್ಲಿ ಹೀಗೆ ಬರೆದಿದೆ: "ಯಾವನೊಬ್ಬ ರಕ್ಷಕನೂ ಈಗ ದೇಶದಲ್ಲಿ ಉಳಿಯಲಿಲ್ಲ. ಸರ್ವನಾಶಕ ವಡವಾಗ್ನಿಯು ಹಬ್ಬಿದಾಗ ಅರಣ್ಯದ ಸ್ಥಿತಿಯೆಂತಾಗಬೇಕು ಅಂತಹ ಪರಿಸ್ಥಿತಿ ಮುಸಲ್ಮಾನರ ಆಕ್ರಮಣದಿಂದ (ದಕ್ಷಿಣದಲ್ಲಿ) ಪ್ರಾಪ್ತವಾಗಿದೆ." ಆಗಿನ ಕವಯಿತ್ರಿ ರಾಣೀ ಗಂಗಾದೇವಿಯು 'ಮದುರಾ ವಿಜಯಮ್' ಎಂಬ ತನ್ನ ಕಾವ್ಯದಲ್ಲಿ ದಕ್ಷಿಣ ದಲ್ಲಿ ಧರ್ಮಕ್ಕೆ ಬಂದ ಸಂಕಟವನ್ನು ಇಂತು ವರ್ಣಿಸಿದ್ದಾಳೆ. "ಯಾವ ಮಂದಿರ ದಿಂದ ಯಜ್ಞಯಾಗಗಳ ಪವಿತ್ರ ಧೂಮವು ಹೊರಡುತ್ತಿದ್ದಿತೋ, ಎಲ್ಲಿಂದ ವೇದ ಮಂತ್ರಗಳ ಮಂಗಳಘೋಷಗಳು ಕಿವಿಗೆ ಬೀಳುತ್ತಿದ್ದವೋ ಅಂಥ ಪವಿತ್ರ ಸ್ಥಳಗಳ ನ್ನೆಲ್ಲ ಮುಸಲ್ಮಾನ ಆಕ್ರಮಕರು ಗೆದ್ದುದರಿಂದ ಅಲ್ಲಿ ಮಾಂಸವನ್ನು ಕುದಿಸುತ್ತಿರುವ ದುರ್ಗಂಧವಾಸನೆ ಹೊರಡುತ್ತಿದೆ. ಆ ದಾಳಿಗಾರರ ಕರ್ಣಕರ್ಕಶ ಕೂಗು ಅಲ್ಲಿಂದ ಕೇಳಿಸುತ್ತದೆ."

ಇತಿಹಾಸಕಾರನಾದ ಸಿವೆಲ್ಲನು ತನ್ನ ಇತಿಹಾಸದಲ್ಲಿ "ಹಿಂದೂ ರಾಜ್ಯಗಳ ನಾಶ, ಆ ಪ್ರಾಚೀನ ಮನೆತನಗಳ ನಿರ್ಮೂಲನ, ಹಿಂದೂ ಧರ್ಮ ಮಂದಿರಗಳ ಮತ್ತು ನಗರಗಳ ವಿಧ್ವಂಸ ಇವೆಲ್ಲವನ್ನು ನೋಡಿದಾಕ್ಷಣ ಭಾರತೀಯರಿಗೆ ತಮಗೆ ಪ್ರಿಯ-ವಾದುದೆಲ್ಲ ಬೇಗನೆ ಸಂಪೂರ್ಣವಾಗಿ ನಾಶವಾಗುವ ಕಾಲ ಬಂದಿದೆ ಎಂದೆನಿಸಿದ್ದಿತು" ಎಂದು ಬರೆದಿರುವನು.

ದಕ್ಷಿಣ ಹಿಂದುಸ್ಥಾನವನ್ನಾದರೂ ಈ ನಾಶದಿಂದ ರಕ್ಷಿಸಬೇಕು ಎಂದು ಅವ ರೆಲ್ಲ ಪ್ರಯತ್ನಿಸಹತ್ತಿದರು. ೧೩೩೬ನೇ ಇಸ್ವಿಯು ಈ ದೃಷ್ಟಿಯಿಂದ ಬಹಳ ಅನುಕೂಲ ಕಾಲವೆನಿಸಿತು ಆ ಸಮಯದಲ್ಲಿ ತುಘಲಕ ಸುಲ್ತಾನನ ವಿರುದ್ಧ ಅವನ ಅಧಿಕಾರಿ-ಗಳು ಬಂಡು ಹೂಡಿದ್ದರು. ೧೩೩೬ರಲ್ಲಿ ಮಾಬರ ಮತ್ತು ಮದುರೆಯಲ್ಲಿಯ ಮುಸ-ಲ್ಮಾನ ಸುಭೇದಾರರು ದಿಲ್ಲಿಯ ವಿರುದ್ಧ ಬಂಡು ಹೂಡಲು ದಕ್ಷಿಣದಲ್ಲಿ ಮುಂದಾಳು-ಗಳಾದರು. ಸಿಂಧ; ಕಚ್ಛ, ಬಂಗಾಲಗಳಲ್ಲಿಯೂ ಇದೇ ಸಮಯಕ್ಕೆ ಬಂಡೆದ್ದಿತು. ಅದನ್ನು ಮುರಿಯಲು ಸುಲ್ತಾನನು ಮಗ್ನನಾಗಿದ್ದನು. ಆದರಿಂದ ದಕ್ಷಿಣದಲ್ಲಿ ಲಕ್ಷ್ಯ ಹಾಕಲು ಅವನಿಗೆ ಅಶಕ್ಯವಾಗಿತ್ತು. ಪರಕೀಯ ಆಡಳಿತೆಯಿಂದ ದಕ್ಷಿಣ ಭಾರತ-ವನ್ನು ಮುಕ್ತಮಾಡುವ ಸುವರ್ಣ ಸಂಧಿಯು ಹಿಂದುಗಳಿಗೆ ದೊರೆಯಿತು. ವರಂಗಲ್ಲಿನ ಪ್ರತಾಪ ರುದ್ರದೇವನ ಮಗ ಕೃಷ್ಣನಾಯಕ ಮತ್ತು ದ್ವಾರಸಮುದ್ರದ ಹೊಯ್ಸಳ ಅರಸನಾದ ೩ನೇ ವೀರಬಲ್ಲಾಳನು ಈ ಸ್ವಾತಂತ್ರ್ಯ ಸಂಗ್ರಾಮದ ಧುರೀಣರಾದರು. ಮುಂದೆ ಸ. ೧೩೪೨ರಲ್ಲಿ ಈ ಸ್ವಾತಂತ್ರ್ಯ ಸಂಗ್ರಾಮದಲ್ಲಿ ವೀರಬಲ್ಲಾಳನು

ಮಾಡಿದನು. ಸ. ೧೩೪೭ ರಲ್ಲಿ ಬಹಮನಿ ರಾಜ್ಯದ ಸ್ಥಾಪನೆಯಾಗಿ ದಕ್ಷಿಣದಲ್ಲಿ ದಿಲ್ಲಿ ಸುಲ್ತಾನರ ಆಳಿಕೆಯು ಸಂಪುಷ್ಟದಲ್ಲಿ ಬಂತು.

**ಸ್ಥಾಪನೆ:**— ಸ. ೧೩೩೬ರಲ್ಲಿ ತುಂಗಭದ್ರೆಯ ದಂಡೆಯಲ್ಲಿ ವಿಶಾಲವಾದ ಸ್ಥಳವನ್ನು ನೋಡಿ ಕೃಷ್ಣನಾಯಕ ಮತ್ತು ವೀರಬಲ್ಲಾಳರು ಅಭೇದ್ಯವಾದ ಕಿಲ್ಲೆಯೊಂದನ್ನು ಕಟ್ಟಿಸಿದ್ದರು. ಈ ಕಿಲ್ಲೆಯ ಅಡಿಗಲ್ಲನ್ನಿಡುವಾಗ ಆಗ ಶೃಂಗೇರಿ ಪೀಠದ (ಶಂಕರಾಚಾರ್ಯ ಪೀಠದ) ಶ್ರೀವಿದ್ಯಾರಣ್ಯ ಸ್ವಾಮಿಗಳು ಆಶೀರ್ವಾದ ಮಾಡಿದ್ದರು. ಇದನ್ನು ನೋಡಿದರೆ ವಿಜಯನಗರದ ಸಂಸ್ಥಾಪಕರ ಧಾರ್ಮಿಕ ದೃಷ್ಟಿಯು ಗೊತ್ತಾಗುವದು. ಹೊಯಸಳರ ಸಂಗಮನೆಂಬ ಅರಸನಿಗೆ ಪಂಚ ಪಾಂಡವರಂತಿದ್ದ ಐದು ಜನ ವೀರಪುತ್ರರಿದ್ದರು. ಅವರಲ್ಲಿ ಹರಿಹರ, ಬುಕ್ಕ ಮತ್ತು ಕಂಪಣರು ವಿಶೇಷ ಪ್ರಸಿದ್ಧಿಗೆ ಬಂದರು. ಹರಿಹರ ಬಂಧುಗಳು ಹೊಯಸಳರ ದರ-ಬಾರದಲ್ಲಿದ್ದರು. ಸ್ವಾತಂತ್ರ್ಯಸಂಗ್ರಾಮದಲ್ಲಿ ಅವರು ಮೊದಲಿನಿಂದ ಅಗ್ರಣಿಗಳಾಗಿದ್ದರು. ವೀರಬಲ್ಲಾಳನ ಮರಣದ ನಂತರ ಹೊಯಸಳರ ಅಸ್ತವಾಯಿತು; ಆಗ ಹರಿಹರ ಬಂಧುಗಳು ಮುಂದೆ ಬಂದು ನಡೆದಿದ್ದ ಸ್ವಾತಂತ್ರ್ಯಸಂಗ್ರಾಮವನ್ನು ಮುಂದೆ ಸಾಗಿಸಿದರು.

ನೆಲ್ಲೂರಿನಿಂದ ಪಶ್ಚಿಮಕ್ಕೆ ಬೆಳಗಾಂವಿವರೆಗಿನ ಇದ್ದ ಗಡಿಯನ್ನೆಲ್ಲ ರಕ್ಷಿಸಲು ಈ ಮೂವರು ಬಂಧುಗಳು ಮುಂದಾದರು. ವಿಜಯನಗರವನ್ನು ಮಧ್ಯಪ್ರದೇಶವನ್ನಾ-ಗಿಟ್ಟುಕೊಂಡು, ಪೂರ್ವ ಪಶ್ಚಿಮ ಸಮುದ್ರ ದಂಡೆಯ ಮಧ್ಯಪ್ರದೇಶವನ್ನೆಲ್ಲ ತಮ್ಮ ಆಡಳಿತೆಯಲ್ಲಿ ತಂದುಕೊಂಡರು. ಬುಕ್ಕರಾಯನ ಮಗನಾದ ಕಂಪರಾಯನು ಮುಸಲ್ಮಾನರ ವಶದಲ್ಲಿದ್ದ ಮದುರೆಯ ರಾಜ್ಯವನ್ನು ಪುನಃ ಗೆದ್ದು ವಶಪಡಿಸಿ-ಕೊಂಡನು. ಮದುರೆ ಮತ್ತು ಶ್ರೀರಂಗಪಟ್ಟಣದ ಮುಸಲ್ಮಾನರು ಉಧ್ವಸ್ತಗೊಳಿ-ಸಿದ ಮಂದಿರಗಳನ್ನು ಮತ್ತೆ ಕಟ್ಟಿಸಿದನು. ಮುಸಲ್ಮಾನರ ವಶಕ್ಕೆ ಹೋಗಿದ್ದ ಹಿಂದೂ ಧರ್ಮದ ಧ್ವಜವನ್ನು ಪುನಃ ಮುಕ್ತಗೊಳಿಸಿ ಅದು ವೈಭವದಿಂದ ಹಾರುವಂತೆ ಮಾಡಿ-ದನು. ಕಂಪರಾಯನ ಈ ಪರಾಕ್ರಮದ ರಸಭರಿತ ವರ್ಣನೆಯನ್ನು ಅವನ ರಾಣಿ ಗಂಗಾದೇವಿಯು ತನ್ನ 'ಮದುರಾ ವಿಜಯಮ್' ಸಂಸ್ಕೃತ ಕಾವ್ಯದಲ್ಲಿ ಮಾಡಿರುವಳು.

**ರಾಜ್ಯವಿಸ್ತಾರ:**— ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ಸಂರಕ್ಷಿಸ ಬೇಕಾದರೆ ಸಮರ್ಥ ರಾಜಕೀಯ ಮತ್ತು ಸೈನಿಕ ಸಂಘಟನೆಯನ್ನು ನಿರ್ಮಿಸಬೇಕಾ ದುದು ಅವಶ್ಯವೆಂಬುದು ವಿಜಯನಗರಸಾಮ್ರಾಜ್ಯದ ಸಂಸ್ಥಾಪಕರಿಗೆ ಮನದಟ್ಟಾ ಗಿತ್ತು. ದಕ್ಷಿಣದಲ್ಲಿ ದಿಲ್ಲಿ ಸುಲ್ತಾನರ ಆಳಿಕೆಯಿಲ್ಲದಂತಾಗಿದ್ದರೂ ನೆರೆಯಲ್ಲಿಯೇ ಸ್ಥಾಪಿತವಾಗಿದ್ದ ಬಹಮನಿರಾಜ್ಯದಿಂದ ವಿಜಯನಗರ ರಾಜ್ಯಕ್ಕೆ ಧಕ್ಕೆಯಿತ್ತು. ಈ ದೃಷ್ಟಿಯಿಂದ ವಿಜಯನಗರದ ಅರಸರು ಯಾವ ಉಪಾಯವನ್ನು ಯೋಚಿಸಿದ ರೆಂಬುದನ್ನು ನೋಡಬೇಕಾಗಿದೆ.

**ಸಂಗಮ ಮನೆತನ** (ಸ. ೧೩೩೬ರಿಂದ ೧೪೮೭):— ವಿಜಯನಗರದ ವೈಭವವು ೧೩೩೬ ರಿಂದ ೧೫೬೫ರ ವರೆಗೆ ಮೆರೆಯಿತು. ಈ ಇನ್ನೂರಾ ಇಪ್ಪತ್ತೈದು ವರ್ಷಗಳ

ಅವಧಿಯಲ್ಲಿ ವಿಜಯನಗರದ ಅರಸೊತ್ತಿಗೆಯನ್ನು ಮೂರು ಮನೆತನಗಳು ನಡೆಸಿದವು. ಮೊದಲನೆಯದಾದ ಸಂಗಮ ಮನೆತನವು ಸುಮಾರು ೧೫೦ ವರ್ಷ ಆಳಿತು. ಅವರಲ್ಲಿ ಮೂಲಪುರುಷರಾಗಿದ್ದ ಹರಿಹರದೇವ ಮತ್ತು ಬುಕ್ಕರಾಯರು ಬಹಳ ಎಚ್ಚರಿಕೆಯಿಂದ ಆಳಿದರು. ಅವರು ರಾಜ್ಯ ಚಿಹ್ನಗಳನ್ನು ಧರಿಸದೆ ರಾಜ್ಯ ಸ್ಥಾಪನೆಯನ್ನು ಮಾಡಿದರು. ೨ನೇ ಹರಿಹರ ( ಕಂಪರಾಯ ) ( ಸ. ೧೩೭೭ ರಿಂದ ೧೪೦೪ )ನು ಮಾತ್ರ ' ಮಹಾ-ರಾಜಾಧಿರಾಜ ' ಎಂಬ ಪದವಿಯನ್ನು ಧರಿಸಿದ ವಿಜಯನಗರದ ಹಿಂದೂ ಸಾಮ್ರಾಜ್ಯ ಸ್ಥಾಪನೆಯನ್ನು ಜಗಜ್ಜಾಹೀರ ಮಾಡಿದನು. ವಿಜಯನಗರದ ಸಂಘಟನೆಯ ಕಾರ್ಯವನ್ನೂ ಅವನು ಉತ್ತಮ ರೀತಿಯಿಂದ ಸಾಧಿಸಿದನು. ಮೂಲರಾಜ್ಯವು ಬಹಳ ಸಣ್ಣದಾಗಿತ್ತು. ಅಲ್ಲಲ್ಲಿ ವಶಪಡಿಸಿಕೊಂಡ ಪ್ರದೇಶವನ್ನೆಲ್ಲ ಒಗ್ಗೂಡಿಸಿ ಅದನ್ನು ಸಂಘಟನೆ ಮಾಡಿದನು. ಇ. ಸ. ೧೩೭೨ರ ಸುಮಾರಿಗೆ ವಿಜಯನಗರದ ಸೈನ್ಯವು ದಕ್ಷಿಣ ಸಮುದ್ರದವರೆಗಿನ ಪ್ರದೇಶವನ್ನು ಗೆದ್ದಿತು. ಈ ವಿಜಯದ ಸ್ಮರ-ಣಾರ್ಥ ಮೊದಲು ' ವಿದ್ಯಾನಗರ 'ವಾಗಿದ್ದ ರಾಜಧಾನಿಯು ' ವಿಜಯನಗರ 'ವೆಂಬ ನಾಮಕರಣ ಹೊಂದಿ ಮೆರೆಯಿತು.

೨ ನೇ ಹರಿಹರನು ನೆರೆಯ ಬಹಮನಿ ರಾಜ್ಯದ ಆಕ್ರಮಣವನ್ನು ಯಶಸ್ವಿ-ಯಾಗಿ ಎದುರಿಸಿದನು. ವಿಜಯನಗರ ಮತ್ತು ಬಹಮನಿ ರಾಜ್ಯಗಳಲ್ಲಿಯ ಕಲಹಕ್ಕೆ ಧರ್ಮದ್ವೇಷಕ್ಕಿಂತ ರಾಜಕೀಯ ಮಹತ್ವಾಕಾಂಕ್ಷೆ ಮತ್ತು ಆರ್ಥಿಕ ಲಾಭವೇ ಬಲ-ವತ್ತರ ಕಾರಣಗಳಾಗಿದ್ದವು. ಇದು ಕೇವಲ ಧಾರ್ಮಿಕ ಸಂಗ್ರಾಮವಾಗಿದ್ದರೆ ಹಿಂದು ರಾಜರ ಪರವಾಗಿ ಮುಸಲ್ಮಾನ ಸೈನಿಕರು ಮುಸಲ್ಮಾನರ ಪರವಾಗಿ ಹಿಂದುಗಳು ಹೋರಾಡುತ್ತಿರಲಿಲ್ಲ. ದಕ್ಷಿಣ ಹಿಂದುಸ್ಥಾನವು ತಮ್ಮ ವರ್ಚಸ್ಸಿನಲ್ಲಿ ಉಳಿಯಬೇಕೆಂದು ವಿಜಯನಗರದ ಮತ್ತು ಬಹಮನಿ ಅರಸರಿಗೆ ಎನಿಸುತ್ತಿತ್ತು. ಆದುದರಿಂದ ಅವರು ಪರಸ್ಪರರ ನಾಶಕ್ಕೆ ಹೊಂಚುಹಾಕಿಕೊಂಡು ಕುಳಿತಿದ್ದರು. ಈ ಎರಡೂ ರಾಜ್ಯಗಳ ಮಧ್ಯದಲ್ಲಿಯ 'ರಾಯಚೂರ-ದುಆಬ'ವು ಅತ್ಯಂತ ಬೆಳೆಯುಳ್ಳದ್ದು ಮತ್ತು ಸಮೃದ್ಧ-ವಾಗಿದ್ದಿತು; ಅಂತೆಯೇ ಈ ಪ್ರದೇಶವು ತಮ್ಮ ರಾಜ್ಯದಲ್ಲಿರಬೇಕೆಂಬ ಇಚ್ಛೆ ಇಬ್ಬರಿಗೂ ಇತ್ತು. 'ರಾಯಚೂರ-ದುಆಬ' ಯಾರ ವಶದಲ್ಲಿ ಉಳಿಯಬೇಕೆಂಬುದೇ ಅವರ ಹೋರಾಟದ ಮುಖ್ಯ ಕಾರಣವಾಗಿತ್ತೆಂದು ಹೇಳಬಹುದಾಗಿದೆ.

ವಿಜಯನಗರ ಮತ್ತು ಬಹಮನಿ ರಾಜರಲ್ಲಿ ಅನೇಕ ಯುದ್ಧಗಳಾದವು. ಅವುಗಳಲ್ಲಿ ಕೇವಲ ಎರಡುಮೂರು ಸಲ ಮಾತ್ರ ವಿಜಯನಗರದವರು ಹಿಂದೆ ಸರಿಯ-ಬೇಕಾಯಿತು. ಆಗ ವಿಜಯನಗರದವರು ತಮ್ಮ ಸೈನ್ಯದಲ್ಲಿ ಮುಸಲ್ಮಾನ ಸೈನಿಕರನ್ನು ಸೇರಿಸಿಕೊಂಡು ಅದಕ್ಕೆ ಅಶ್ವಬಲದ ಬೆಂಬಲ ಕೊಟ್ಟು ತಮ್ಮ ಸೈನ್ಯವನ್ನು ಸುಧಾರಿಸಿ ಕೊಂಡರು. ಸೈನ್ಯವನ್ನು ಹೀಗೆ ಪುನರ್ಘಟಿಸಿದ್ದರಿಂದ ವಿಜಯನಗರದ ಸೈನಿಕ ಸಾಮರ್ಥ್ಯವು ಹೆಚ್ಚಿತು. ಸಾಮ್ರಾಜ್ಯದ ವಿಸ್ತಾರವೂ ಹೆಚ್ಚುತ್ತ ಹೆಚ್ಚುತ್ತ ದಕ್ಷಿಣ ದ್ವೀಪಕಲ್ಪವೆಲ್ಲ ವಿಜಯನಗರದ ಆಳಿಕೆಗೊಳಪಟ್ಟಿತು. ಮುಸಲ್ಮಾನ ಆಳಿಕೆಯಲ್ಲಿಯ ಅಶಾಂತತೆ ಮತ್ತು ಅವ್ಯವಸ್ಥೆಯನ್ನು ಕೊನೆಗೊಳಿಸಿದ್ದರಿಂದ ಈ ಪ್ರದೇಶದಲ್ಲಿಯ

ಜನರಿಗೆ ಶಾಂತಿ ಮತ್ತು ಸುವ್ಯವಸ್ಥೆಯ ಲಾಭವು ದೊರೆಯಿತು. ವಿಜಯನಗರದ ರಾಜ್ಯವ್ಯವಸ್ಥೆಯು ಬಹಳ ವ್ಯವಸ್ಥಿತ ಮತ್ತು ಕಾರ್ಯಕ್ಷಮವಾಗಿತ್ತು.

ಸಂಗಮ ಮನೆತನದ ಕೊನೆಯ ಅರಸನಾದ ೨ನೇ ವಿರುಪಾಕ್ಷನು ಇ.ಸ. ೧೪೮೭ ರಲ್ಲಿ ಪದಚ್ಯುತನಾದನು. ಸಾಳ್ವ ಮನೆತನದವರು ಪಟ್ಟಕ್ಕೆ ಬಂದರು.

**ಸಾಳ್ವ ಮನೆತನ** (೧೪೮೭ರಿಂದ ೧೫೦೫):—೨ನೇ ವಿರೂಪಾಕ್ಷನು ದುರ್ಬಲನಾದ್ದರಿಂದ ಬಹಮನಿ ಸುಲ್ತಾನರು ಕೃಷ್ಣಾ ಮತ್ತು ತುಂಗಭದ್ರಾ ಮಧ್ಯಪ್ರದೇಶವನ್ನು ಗೆದ್ದರು. ಆಗ ರಾಜಮನೆತನದಲ್ಲಿಯ ನರಸ ಉರ್ಫ ನರಸಿಂಹನು ವಿರೂಪಾಕ್ಷನನ್ನು ಪದಚ್ಯುತಗೊಳಿಸಿ ಅರಸೊತ್ತಿಗೆಯನ್ನು ಆಕ್ರಮಿಸಿದನು. ಸುದೈವದಿಂದ ಇದೇ ಕಾಲಕ್ಕೆ ಬಹಮನಿ ರಾಜ್ಯದಲ್ಲಿಯೂ ಶೈಥಿಲ್ಯವುಂಟಾಗಿದ್ದುದರಿಂದ ವಿಜಯನಗರದಲ್ಲಿಯ ಈ ಇಬ್ಬಣದ ಲಾಭವನ್ನು ಅವರಿಗೆ ತೆಗೆದುಕೊಳ್ಳುವದಾಗಲಿಲ್ಲ. ಕಲಿಂಗದ ಅರಸನಾದ ಕಪಿಲೇಶ್ವರನು ಮಧ್ಯಂತರ ಕಾಲದಲ್ಲಿ ವಶಪಡಿಸಿಕೊಂಡಿದ್ದ ಪ್ರದೇಶವನ್ನು ನರಸಿಂಹನು ತಿರುಗಿ ಬಿಡಿಸಿಕೊಂಡನು. ಆದರೆ ಬಹಮನಿ ಸುಲ್ತಾನನು ವಶಪಡಿಸಿಕೊಂಡಿದ್ದ ಪ್ರದೇಶವನ್ನು ಬಿಡಿಸಿಕೊಳ್ಳುವ ಮೊದಲು ನರಸಿಂಹನು ಮರಣ ಹೊಂದಿದನು. ಅವನ ಮಗನಲ್ಲಿ ಕರ್ತೃತ್ವಶಕ್ತಿಯಿಲ್ಲದ್ದರಿಂದ ಅವನನ್ನು ಕಿತ್ತೊಗೆದು ತುಳುವ ಮನೆತನದ ಸೇನಾಪತಿ ನರಸನಾಯಕನು ಪಟ್ಟವನ್ನೇರಿದನು.

**ತುಳುವ ಮನೆತನ** ( ಸ. ೧೫೦೫ ರಿಂದ ೧೫೬೮ ).— ಈ ಮನೆತನದಲ್ಲಿಯ ಎರಡನೇ ಸಮ್ರಾಟ ಕೃಷ್ಣದೇವರಾಯನು ಅತ್ಯಂತ ಪರಾಕ್ರಮಿಯಾಗಿದ್ದನು. ಅವನ ಆಳಿಕೆಯಲ್ಲಿ ವಿಜಯನಗರ ಸಾಮ್ರಾಜ್ಯವು ಶಿಖರಕ್ಕೇರಿತು. ಬಹಮನಿ ರಾಜ್ಯವು ಐದು ತುಂಡುಗಳಾಗಿ ಅವರಲ್ಲಿ ಹಬ್ಬಿದ ಯಾದವಿಯ ಲಾಭವನ್ನು ಅವನು ಪೂರ್ಣವಾಗಿ ಪಡೆದನು. ಹಿಂದೆ ಕಳೆದುಹೋಗಿದ್ದ ಕೃಷ್ಣಾ ಮತ್ತು ತುಂಗಭದ್ರಾ ನಡುವಿನ ಪ್ರದೇಶವನ್ನು ತಿರುಗಿ ವಶಪಡಿಸಿಕೊಂಡನು. ರಾಯಚೂರದ ದುಅಬ ಪ್ರದೇಶವನ್ನು ಅವನು ವಶಪಡಿಸಿಕೊಂಡು ತನ್ನ ಸಾಮ್ರಾಜ್ಯದ ಉತ್ತರಗಡಿಯನ್ನು ಬಲಿಷ್ಠಗೊಳಿಸಿಕೊಂಡನು ಇದಲ್ಲದೆ ಮೈಸೂರು, ಕಲಿಂಗ ಮತ್ತು ಕಟಕದಲ್ಲಿಯ ಅರಸರನ್ನು ಸೋಲಿಸಿ ಅವನು ತನ್ನ ಸಾಮ್ರಾಜ್ಯದ ಗಡಿಯನ್ನು ಕೃಷ್ಣಾ ನದಿಯ ದಂಡೆಗೊಯ್ದು ಮುಟ್ಟಿಸಿದನು. ಕೃಷ್ಣಾ ಮತ್ತು ತುಂಗಭದ್ರಾ ನದಿಗಳ ದಕ್ಷಿಣಕ್ಕಿರುವ ಎಲ್ಲ ಪ್ರದೇಶವನ್ನು ಗೆದ್ದು ವಿಜಯನಗರದ ಬಲಿಷ್ಠ ಮತ್ತು ಏಕೀಕೃತ ಸಾಮ್ರಾಜ್ಯವನ್ನು ಅವನು ಪ್ರಸ್ಥಾಪಿಸಿದನು. ವಿಜಯನಗರ ಸಾಮ್ರಾಜ್ಯದ ಇತಿಹಾಸದಲ್ಲಿ ಅತ್ಯಂತ ವಿಸ್ತಾರವಾಗಿ ರಾಜ್ಯವು ಹಬ್ಬಿದ್ದುದು ಇದೇ ಕಾಲಕ್ಕೆ.

**ಅವನತಿಯ ಪೂರ್ವ ಚಿಹ್ನಗಳು**:— ಕೃಷ್ಣದೇವರಾಯನ ಕಾಲಕ್ಕೆ ಮಧ್ಯಾಹ್ನಕ್ಕೆ ಬಂದಿದ್ದ ವಿಜಯನಗರದ ವೈಭವಸೂರ್ಯನು ಅವನ ತರುವಾಯ ಇಳಿಯುತ್ತ ನಡೆದು ಸೂರ್ಯಾಸ್ತಛಾಯೆ ಕಾಣಹತ್ತಿತು. ಹಳೆಯ ಮತ್ತು ವಿಶ್ವಾಸಿಕ ಇಬ್ಬರು ಸರದಾರರು ಸಮ್ರಾಟನ ವಿರುದ್ಧ ಬಂಡೆದ್ದರು. **ಭಾವೀ ಅನರ್ಥದ ಬೀಜಾರೋಪಣವು ಈ ಪ್ರವೃತ್ತಿಯಲ್ಲಿಯೇ ಆಯಿತು ಕೃಷ್ಣದೇವರಾಯ**

ನೇನೋ ಈ ಬಂಡನ್ನು ನಾಶಗೊಳಿಸಿದನು. ನಿಜ. ಅವನ ತರುವಾಯದಲ್ಲಿ ಅವನ ಮಲತಮ್ಮ ಅಚ್ಯುತರಾಯ ( ಇ. ಸ. ೧೫೩೦-೪೨) ನು ಪಟ್ಟವನ್ನೇರಿದನು. ಅವನಿಗಾದರೂ ಸ್ವಕೀಯ ಸರದಾರನೊಬ್ಬನ ಬಂಡನ್ನೆದುರಿಸಬೇಕಾಗಿ ಬಂತು. ರಾಜ್ಯಾಡಳಿತೆಯಲ್ಲಿ ಅಚ್ಯುತರಾಯನು ಸ್ವತಃ ಲಕ್ಷ್ಯ ಹಾಕದೆ ತನ್ನ ಇಬ್ಬರು ಬಾಲಕರಿಗೆ ಅದನ್ನೊಪ್ಪಿಸಿಕೊಟ್ಟನು. ಅಲ್ಲಲ್ಲಿಯ ಅಮಲದಾರರಿಗೆ ಇವರ ಆಳಿಕೆಯು ಮನಸ್ಸಿಗೆ ಬಾರದೆ ಅವರು ಅಸಂತುಷ್ಟರಾದರು. ತಮ್ಮ ಸರಿಸಮಾನರಾದವರು ಇಂದು ತಮ್ಮ ಮೇಲೆ ಅಧಿಕಾರ ನಡೆಸಬೇಕೆಂಬುದು ಅವರಿಗೆ ಅಪಮಾನಕರವಾಗಿದ್ದಿತು. ಇಂಥವರ ವಿರೋಧೀ ಪಕ್ಷವು ಸಿದ್ಧವಾಗಹತ್ತಿತು. ಈ ಸಮಯಕ್ಕೆ ಉಂಟಾದ ಅಂತಃಸ್ಥ ಭೇದವನ್ನು ಮುಂದೆಂದೂ ಸರಿಪಡಿಸಲಾಗಲಿಲ್ಲ. ಅಚ್ಯುತರಾಯನು ಮರಣ ಹೊಂದಿದ ಕೂಡಲೆ ದರಬಾರದಲ್ಲಿಯ ವಿರೋಧಿ ಪಕ್ಷದವರು ಅವನ ಮಗನನ್ನು ಪದಚ್ಯುತಗೊಳಿಸಿ ಅವನ ತಮ್ಮನ ಮಗನಾದ ಸದಾಶಿವರಾಯನನ್ನು ಪಟ್ಟದ ಮೇಲೆ ಕೂಡ್ರಿಸಿದರು. ವಿರೋಧಿ ಪಕ್ಷದ ಪ್ರಮುಖನಾದ ರಾಮರಾಯನು ಕಾರಭಾರ ನಡೆಸಹತ್ತಿದನು. ಉತ್ತರಪೇಶ್ವೆಯರ ಕಾಲದ ಛತ್ರಪತಿಗಳಂತೆ ಸಮ್ರಾಟನು ನಾಮಧಾರಿಯಾಗಿ ಅವನ ಕಾರಭಾರಿಗಳೇ ನಿಜವಾಗಿ ಸತ್ತಾಧೀಶರಾದರು.

**ತಾಳೀಕೋಟೆಯ ಕಾಳಗ** :— ಬಹಮನಿ ರಾಜ್ಯವು ಒಡೆದು ಐದು ತುಣುಕುಗಳಾಗಿದ್ದವಷ್ಟೆ. ಅವುಗಳಲ್ಲಿ ವಿಜಾಪುರ ಮತ್ತು ಅಹಮದನಗರ ರಾಜ್ಯಗಳು ವಿಜಯನಗರದ ಉತ್ತರ ಸೀಮೆಗೆ ಹೊಂದಿಕೊಂಡಿದ್ದವು. ಆದುದರಿಂದ ಅವರಲ್ಲಿ ಮತ್ತು ವಿಜಯನಗರದ ಅರಸರಲ್ಲಿ ಮೇಲಿಂದ ಮೇಲೆ ಶಿಕ್ಕಾಟವುಂಟಾಗಿದ್ದಿತು. ಹೀಗಿದ್ದರೂ ರಾಜ್ಯವಿಸ್ತಾರಕ್ಕಾಗಿ ಬಹಮನಿ ಅರಸರಲ್ಲಿ ಪರಸ್ಪರ ಬಡಿದಾಟಗಳಾಗುತ್ತಿದ್ದವು. ಅದರಲ್ಲಿಯೂ ವಿಜಾಪುರ ಮತ್ತು ಅಹಮದನಗರ ರಾಜ್ಯಗಳಲ್ಲಿ ವಿಶೇಷ ತುರುಸು ಇತ್ತು. ವಿಜಯನಗರದ ರಾಮರಾಯನು ಪ್ರಸಂಗವನ್ನು ಸಾಧಿಸಿ ಅವರಲ್ಲಿ ಒಮ್ಮೆ ಒಬ್ಬನಿಗೆ, ಮತ್ತೊಮ್ಮೆ ಮತ್ತೊಬ್ಬನಿಗೆ ಸಹಾಯಮಾಡುತ್ತಿದ್ದನು. ರಾಮ-ರಾಯನಿಗೆ ತನ್ನ ಸಾಮರ್ಥ್ಯದ ದುರಭಿಮಾನವುಂಟಾಗಿದ್ದಿತು. ಆದುದರಿಂದ ಅವನು ಮುಸಲ್ಮಾನ ಅರಸರೊಡನೆ ಉದ್ದಾಮತನದಿಂದ ವರ್ತಿಸಹತ್ತಿದನು. ತಮ್ಮ ತಮ್ಮೊಳಗಿನ ತುರಸಿನಿಂದ ವಿಜಯನಗರವು ಬಲಿಷ್ಠವಾಗಹತ್ತಿದೆಂಬ ಮಾತು ರಾಮರಾಯನ ಈ ಉದ್ದಾಮತನದಿಂದ ಮುಸಲ್ಮಾನರ ಲಕ್ಷ್ಯಕ್ಕೆ ಬಂತು. ಆಗ ಮುಸಲ್ಮಾನ ರಾಷ್ಟ್ರಗಳೆಲ್ಲ ಒಂದುಗೂಡಿ ರಾಮರಾಯನ ಪಾರುಪತ್ಯ ಮಾಡಬೇಕೆಂದು ವಿಜಯನಗರದ ಮೇಲೆ ದಾಳಿ ಮಾಡಿದರು. ಸ್ವಸಂರಕ್ಷಣೆಗಾಗಿ ವಿಜಯನಗರದ ಸೈನ್ಯವು ಹೊರಬಿತ್ತು. ಉಭಯ ಸೈನ್ಯಗಳು ರಕ್ಕಸತಂಗಡಗಿ (ವಿಜಯನಗರದಿಂದ ನೂರಾರು ಮೈಲು ಅಂತರದಲ್ಲಿ) ಯ ಹತ್ತರ ತಾಳೀಕೋಟೆ ಮೈದಾನದಲ್ಲಿ ಕೂಡಿ ಘೋರ ಸಂಗ್ರಾಮವಾಯಿತು. ( ಇ. ಸ. ೨೨-೧-೧೫೬೫). ಯಾರಿಗೆ ಜಯಶ್ರೀ ಮಾಲೆ ಹಾಕುವಳೆಂಬದು ತಿಳಿಯದಷ್ಟು ಉಗ್ರವಾಗಿ ಸಂಗ್ರಾಮ ನಡೆಯಿತು. ಆದರೆ

ದುರ್ದೈವದಿಂದ ರಾಮರಾಯನು ಶತ್ರುಗಳ ವಶದಲ್ಲಿ ಸಿಕ್ಕನು. ಆಗ ನಿಜಾಮು ಶಹಾನು ಅವನ ಶಿರಚ್ಛೇದ ಮಾಡಿದನು. ರಾಮರಾಯನ ಕಿರಿಯ ತಮ್ಮನೂ ರಣಾಂಗಣದಲ್ಲಿ ಮಡಿದನು. ಕೂಡಲೆ ವಿಜಯನಗರದ ಸೈನ್ಯವು ಧೈರ್ಯಗೆಟ್ಟು ಓಡಹತ್ತಿತು. ಆ ಕಾಲಕ್ಕೆ ಸೈನ್ಯದಲ್ಲಿ ಶಿಸ್ತುಗೇಡಿತನವುಂಟಾಗಿ ಬಹಳ ಹಾನಿಗೆ ಕಾರಣವಾಯಿತು. ರಾಮರಾಯನ ನಡುವಿನ ತಮ್ಮ ತಿರುಮಲನು ರಣಾಂಗಣ ದಿಂದ ಓಡಿಹೋಗಿ ಪೆನುಕೊಂಡಾ ಕಿಲ್ಲೆಯನ್ನು ಸೇರಿದನು. ವಿಜಯ ಹೊಂದಿದ ಬಹಮನಿ ಸೈನ್ಯವು ಅಳಿದುಳಿದ ವಿಜಯನಗರದ ಸೈನ್ಯವನ್ನು ಕೊಂದು, ವಿಜಯ-ನಗರ ರಾಜಧಾನಿಯಲ್ಲಿ ಸತತವಾಗಿ ಐದು ತಿಂಗಳ ಸುಲಿಗೆ, ಕೊಳ್ಳೆ, ಕೊಲೆ ಮೊದ ಲಾದ ಅನನ್ವಿತ ಕೃತ್ಯಗಳನ್ನು ನಡೆಸಿತು. ಈ ಆಘಾತದಿಂದ ವಿಜಯನಗರದ ವೈಭವ ವೆಲ್ಲ ಹಾಳಾಗಿಹೋಯಿತು. ವಿಜಯನಗರದ ಸರ್ವಸ್ವನಾಶವಾಯಿತು. ಆದರೂ ಮುಂದೆ ಸುಮಾರು ನೂರುವರ್ಷ ಈ ರಾಜ್ಯ ಬಾಳಿತು. ಈ ಸಮಯದಲ್ಲಿ ಅದರ ಪರಿಸ್ಥಿತಿ ಚನ್ನಾಗಿದ್ದಿರಲಿಲ್ಲ. ತಾಳೀಕೋಟೆಯ ಕಾಳಗದಲ್ಲಿ ಉಂಟಾದ ಸೋಲಿನಿಂದ ಮೊದಲಿನ ಸಾಮರ್ಥ್ಯ ಮತ್ತು ವೈಭವಗಳಿಗೆ ಇಳಿಕೆಯ ಕಾಲವು ಬಂದದ್ದು ಮುಂದೆಂದೂ ಅದು ಏರಲಿಲ್ಲ. ವಿಜಯನಗರದ ಅಂತವಾದ ಕಾಲಕ್ಕೆ ಮಹಾರಾಷ್ಟ್ರ ದಲ್ಲಿ ಮರಾಠರ ಉದಯವಾಗಹತ್ತಿದ್ದಿತು. ಹಿಂದು ಧರ್ಮ ಮತ್ತು ಸಂಸ್ಕೃತಿ ರಕ್ಷಣೆಯ ಕಾರ್ಯವನ್ನು ವಿಜಯನಗರದ ಅರಸರು ಪ್ರಾರಂಭಿಸಿದ್ದುದನ್ನು ಮರಾಠರು ಮುಂದುವರಿಸಿದರು. ವಿಜಯನಗರದ ಈ ಉಜ್ವಲ ಪರಂಪರೆಯನ್ನು ಉತ್ತರದಲ್ಲಿ ರಾಣಾ ಪ್ರತಾಪನು ಮತ್ತು ದಕ್ಷಿಣದಲ್ಲಿ ಶಿವಾಜಿಯು ನಿರಂತರವಾಗಿ ಇಟ್ಟರು. ಒಟ್ಟಾರೆ ವಿಜಯನಗರದ ಸಾಮ್ರಾಜ್ಯವು ೧೩೩೬ ರಿಂದ ೧೫೬೫ರ ವರೆಗೆ ಪೂರ್ಣ ವೈಭವದಿಂದ ಮುಂದೆ ೧೬೧೬ರ ವರೆಗೆ ಕೃಷ್ಣ ಪಕ್ಷದ ಚಂದ್ರಮನಂತೆ ಇದ್ದಿತು. ಈ ೩೩೦ ವರುಷಗಳಲ್ಲಿ ವಿಜಯನಗರವು ಹಿಂದೂ ಸಂಸ್ಕೃತಿಯನ್ನು ಉಳಿಸುವ ಕಾರ್ಯಮಾಡಿ ಯವನಮಯವಾಗುವ ಆಪತ್ತಿಯಿಂದ ದಕ್ಷಿಣ ಭಾರತವನ್ನು ರಕ್ಷಿಸಿತು.

**ವಿಜಯನಗರದ ವೈಶಿಷ್ಟ್ಯ: (೧) ಉದಾರಧಾರ್ಮಿಕ ಧೋರಣ :—** ಹಿಂದೂಧರ್ಮ ಮತ್ತು ಸಂಸ್ಕೃತಿಯ ರಕ್ಷಣೆಯ ಕಂಕಣಕಟ್ಟಿಕೊಂಡು ಈ ರಾಜ್ಯವು ಸ್ಥಾಪಿತವಾಯಿತು. ಪಂಥಭೇದವನ್ನು ಲಕ್ಷಿಸದೆ ಕೇವಲ ಧರ್ಮ ರಕ್ಷಣಾರ್ಥ ಸ್ಥಾಪಿತ ವಾಗಿದ್ದ ಈ ರಾಜ್ಯವು ದಕ್ಷಿಣದಲ್ಲಿ ಅದ್ವಿತೀಯವಾಗಿದ್ದಿತು. ಈ ರಾಜ್ಯಸ್ಥಾಪಕರಲ್ಲಿ ಮೊದಲನೆಯವನಾದ ಹರಿಹರನ ತಮ್ಮ ಮಾರಪ್ಪನು ಒಂದು ದಾನಪತ್ರದಲ್ಲಿ "ಧರ್ಮವು ಅಸಹಾಯ ಸ್ಥಿತಿಗೆ ಬಂದದ್ದರಿಂದ ಅದರ ರಕ್ಷಣೆಗಾಗಿ ಪರಮೇಶ್ವರನು ಸಂಗಮ ಅರಸನನ್ನು ಹುಟ್ಟಿಸಿದನು." ಎಂದು ಬರೆದಿರುವನು. ಇದರಲ್ಲಿ ಧರ್ಮ ಶಬ್ದದ ಅರ್ಥವು ಬಹಳ ವ್ಯಾಪಕವಾಗಿದೆ. ರಾಜ್ಯದಲ್ಲಿಯ ಎಲ್ಲ ಧರ್ಮಪಂಥಗಳ ರಕ್ಷಣೆ ಮಾಡುವದು ವಿಜಯನಗರದ ಹೊಣೆಯಾಗಿದ್ದಿತು. ಹಿಂದುಗಳಲ್ಲಿಯ ಶೈವ, ವೈಷ್ಣವಾದಿ ಪಂಥಗಳು, ಜೈನ ಮತ್ತು ಬೌದ್ಧರು ಇಷ್ಟೇ ಅಲ್ಲ, ಮುಸಲ್ಮಾನರು

ಮತ್ತು ಕ್ರಿಸ್ತರು ಸಹ ತಮ್ಮ ತಮ್ಮ ಮತಗಳಂತೆ ಧರ್ಮಾಚರಣೆ ಮಾಡಲು ಸ್ವಾತಂತ್ರ್ಯವಿತ್ತು. ಬಾರ್ಬೋಝಾ ಎಂಬ ಪೋರ್ತುಗೀಜ ಪ್ರವಾಸಿಯೂ ಇದಕ್ಕೆ ಸಾಕ್ಷಿಯಿತ್ತಿರುವನು. "ಪ್ರತಿಯೊಬ್ಬನಿಗೆ ತನ್ನ ಧರ್ಮದಂತೆ ನಡೆಯುವ ಸ್ವಾತಂತ್ರ್ಯವನ್ನು ಅರಸನು ಕೊಟ್ಟಿರುವನು. ಅವನು ಕ್ರಿಸ್ತನಿರಲಿ, ಯಹೂದಿಯಾಗಿರಲಿ, ಮುಸಲ್ಮಾನನಾಗಿರಲಿ ಯಾರೇ ಇದ್ದರೂ ತನ್ನ ಧರ್ಮದಂತೆ ನಡೆಯಬಲ್ಲನು. ಅಧಿಕಾರಿಗಳೆಲ್ಲ ಸಮತೆಯಿಂದ ನ್ಯಾಯವಾಗಿ ವರ್ತಿಸುತ್ತಾರೆ" ಎಂದು ಆ ಪ್ರವಾಸಿಯು ಬರೆದಿರುವನು. ಈ ಬಗೆಯ ಉದಾರ ಧೋರಣಕ್ಕಾಗಿಯೆ ಪ್ರಜೆಗಳೆಲ್ಲರ ಬೆಂಬಲವು ಈ ರಾಜ್ಯಕ್ಕೆ ದೊರೆಯಿತು. ಇದರಲ್ಲಿ ಆಶ್ಚರ್ಯವೇನೂ ಇಲ್ಲ.




ವಿಜಯನಗರದ ನಾಣ್ಯಗಳು

**(೨) ಪ್ರಜಾನುರಂಜನ:—** ಪ್ರಜೆಗಳ ಸಂತೋಷವೇ ತಮ್ಮ ಸುಖವೆಂಬುದು ವಿಜಯನಗರದ ಅರಸರ ಧ್ಯೇಯವಾಗಿತ್ತು. ಪುತ್ರವತ್ ಪ್ರಜೆಗಳನ್ನು ಪಾಲಿಸಬೇಕೆಂಬ ಅಶೋಕ, ಹರ್ಷ, ಮೊದಲಾದವರ ಆದರ್ಶವನ್ನು ಅವರು ಇಟ್ಟುಕೊಂಡಿದ್ದರು. ಪ್ರಜೆಗಳಿಗೆ ಭಾರವೆನಿಸಿದ್ದ ಕರವನ್ನು ಕಡಿಮೆ ಮಾಡಿದರು. ದೇಶವು ಬೆಳೆಯುಳ್ಳದ್ದಾಗಬೇಕು ಮತ್ತು ಧನ-ಧಾನ್ಯ, ದನಕರುಗಳು, ಮನೆಮಾರು, ಹೂ-ಹಣ್ಣು-ಕಾಯಿ ಮೊದಲಾದವೆಲ್ಲ ಸಮೃದ್ಧವಾಗಬೇಕೆಂದು ಅವರು ಅಲ್ಲಲ್ಲಿ ಕಾಲುವೆಗಳನ್ನು, ಒಡ್ಡುಗಳನ್ನು, ಅಣೆಕಟ್ಟುಗಳನ್ನು, ಕೆರೆಗಳನ್ನು ಕಟ್ಟಿಸಿದರು. ತುಂಗ-ಭದ್ರೆಗೆ ಅಣೆಕಟ್ಟು ಹಾಕಿದ ಬಳಿಕ 'ಬಸವಣ್ಣ' ಕಾಲುವೆಯಿಂದ ವಿಜಯನಗರದ ಸುತ್ತಲಿನ ಪ್ರದೇಶದಲ್ಲಿ ಬಂಗಾರವೇ ಬೆಳೆಯುವಂತಾಯಿತು. ವಿಜಯನಗರಕ್ಕೆ ಬಂದಿದ್ದ ಪರಕೀಯ ಪ್ರವಾಸಿಕರು ಇದನ್ನು ನೋಡಿ ಪ್ರಶಂಸೋದ್ಗಾರ ತೆಗೆದಿರುವರು.

**(೩) ಪ್ರಾಚೀನ ಪರಂಪರೆಯ ಅಭಿಮಾನ:—** ಹಿಂದುಗಳ ಪರಂಪರಾಗತ ಧರ್ಮ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಈ ಅರಸರು ಪುರಸ್ಕರಿಸಿದರು. ವರ್ಣಾಶ್ರಮ ವ್ಯವಸ್ಥೆಯನ್ನು ನಡೆಸಿಕೊಂಡು ಹೋಗುವ ಧೋರಣವನ್ನು ಎರಡನೇ ಹರಿಹರನು ಘೋಷಿಸಿದನು. "ವರ್ಣಾಶ್ರಮ ಧರ್ಮಗಳನ್ನು ಪ್ರತಿಪಾಲಿಸುವನು" ಎಂದು ಈ ರಾಜನ ಧ್ಯೇಯವನ್ನು ವರ್ಣಿಸಿದ್ದಾಗಿದೆ. ಇದರಿಂದ ಆ ಅರಸನು

ವರ್ಣಾಶ್ರಮಧರ್ಮ ಪ್ರಜಾಪಾಲಕನಾಗಿದ್ದನೆಂದು ಗೊತ್ತಾಗುವದು. ಪರಂಪರಾಗತ ಗ್ರಾಮಸಭೆ (ಗ್ರಾಮಪಂಚಾಯತಿ) ಜಾತಿಸಭೆಗಳ ವ್ಯವಸ್ಥೆಯಲ್ಲಿ ಕೈಹಾಕದೆ ಈ ಅರಸನು ಅವುಗಳ ಅಧಿಕಾರವನ್ನೇ ಸ್ಥಿರಗೊಳಿಸಿದನು.



ಕೃಷ್ಣದೇವರಾಯ

**(ಳ) ವಾಙ್ಮಯ ಪ್ರಗತಿ:-** ಸಂಸ್ಕೃತ, ತೆಲಗು, ತಮಿಳು ಮತ್ತು ಕನ್ನಡ ಈ ನಾಲ್ಕೂ ಭಾಷೆಗಳಿಗ ಮಾನ ರಾಜಾಶ್ರಯವು ದೊರೆ-ಯಿತು. ಆದುದರಿಂದ ನಾಲ್ಕೂ ಭಾಷೆಗಳಲ್ಲಿ ಉಜ್ವಲ ಸಾಹಿತ್ಯವು ಹೊರಹೊಮ್ಮಿತು. ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ 'ಅಷ್ಟದಿಗ್ಗಜ' ಸಾಹಿತ್ಯಕರು, ವಿಕ್ರಮಾದಿತ್ಯನ 'ನವರತ್ನ'ಗಳಿಗೆ ಸರಿಸಮಾನರಾಗಿದ್ದರು. ಭಾಷ್ಯಕಾರ ಸಾಯಣಾಚಾರ್ಯ, ರಾಜಕವಿ ಪೆದ್ದಣ್ಣ, ನಾಟ್ಯಾಚಾರ್ಯ ಲಕ್ಷ್ಮೀನಾರಾಯಣ ಮತ್ತು ತೆಲಗು ರಾಮಾಯಣಕರ್ತ್ರಿ ಮಲ್ಲಮ್ಮ, ಬೀರಬಲ್ಲನಂತೆ ವಿನೋದದ ಮತ್ತು ಚತುರ ಭಾಷಣಕಾರನಾಗಿದ್ದ ತೆನ್ನಾಲ ರಾಮಕೃಷ್ಣ, ಕನ್ನಡದಲ್ಲಿಯ ಮಹಾಭಾರತವನ್ನು ಪೂರ್ಣಗೊಳಿಸಿದ ಕವಿ ತಿಮ್ಮಣ್ಣ ಈ ಹೆಸರುಗಳನ್ನು ಕೇವಲ ಮಾದರಿಗಾಗಿ ಕೊಡಲಾಗಿದೆ. ಇಂಥ ಎಷ್ಟೋ ಸಾಹಿತ್ಯಕರು ಈ ನಾಲ್ಕೂ ಭಾಷೆಗಳಲ್ಲಿ ಆಗಿಹೋದರು. ಇದಲ್ಲದೆ ಪುರಂದರದಾಸ, ಕನಕದಾಸರ ಭಕ್ತಿರಸಪ್ರಧಾನವಾದ ಕನ್ನಡ ಪದಗಳ ಗಾಯನವು ಸರ್ವತೋಮುಖಿಯಾಗಿದೆ. ಸ್ವತಃ ಕೃಷ್ಣದೇವರಾಯನು ಸಾಹಿತ್ಯಕನಾಗಿದ್ದನು. ಆವನು ಎಂಟು ಗ್ರಂಥಗಳನ್ನು ಸಂಸ್ಕೃತ ಮತ್ತು ತೆಲುಗು ಭಾಷೆಗಳಲ್ಲಿ ಬರೆದಿದ್ದನು. ಅವುಗಳಲ್ಲಿ 'ಆಮುಕ್ತಮಾಲ್ಯದಾ' ಎಂಬ ತೆಲಗು ಗ್ರಂಥವು ವಿಶೇಷ ಪ್ರಸಿದ್ಧವಿದೆ. ಗಾಯನ, ನರ್ತನ, ನಾಟ್ಯ, ವ್ಯಾಕರಣ, ತರ್ಕ ಮತ್ತು ತತ್ವಜ್ಞಾನ ಮೊದಲಾದ ವಿವಿಧ ವಿಷಯಗಳ ಮೇಲೆ ಗ್ರಂಥಗಳು ರಚಿತವಾಗಿವೆ.

(೫) **ಕಲಾಕೌಶಲ್ಯ ಪ್ರಗತಿ :—** ಕೃಷ್ಣದೇವರಾಯನ ಕಾಲದಲ್ಲಿ ಕಲಾ-ಕೌಶಲ್ಯಗಳೂ ವೈಭವಶಿಖರವನ್ನು ಮುಟ್ಟಿದವು. ಭವ್ಯ ಮತ್ತು ಸುಂದರ ಮಂದಿರಗಳನ್ನು ಕಟ್ಟುವ ಉತ್ಸಾಹವು ಅವನಿಗಿತ್ತು. ಅದಕ್ಕಾಗಿ ಅವನು ಹಣವನ್ನು




ವಿಜಯನಗರದ ನಾಣ್ಯಗಳು

ಪ್ರತ್ಯೇಕವಾಗಿ ಇರಿಸಿದ್ದನು. ಅವನು ಕಟ್ಟಿಸಿದ 'ಹಜಾರ ರಾಮಮಂದಿರ', ಕೃಷ್ಣ ಮಂದಿರ, ಮತ್ತು ವಿಠ್ಠಲ ಮಂದಿರ ಇವು ವಿಶೇಷ ಪ್ರಸಿದ್ಧವಿವೆ. ಅವನ ಕಾಲದಲ್ಲಿ ನೂರಾರು ಭವ್ಯ ಗೋಪುರಗಳು ಕಟ್ಟಲ್ಪಟ್ಟವು. ಈ ರಾಜ್ಯದಲ್ಲಿ ಕಟ್ಟಲ್ಪಟ್ಟ ಕೋಟೆಕೊತ್ತಳ, ಮಂದಿರ, ಗೋಪುರ, ಮಠ ಮತ್ತು ಧರ್ಮಶಾಲೆಗಳ ಸಂಖ್ಯೆಯು ಬಹಳ ಇದೆ.

೬) **ಆರ್ಥಿಕ ಪರಿಸ್ಥಿತಿ :—** ಆರ್ಥಿಕ ಸುಸ್ಥಿತಿಯಿಲ್ಲದೆ ಇಂಥ ಕಾರ್ಯಗಳು ಎಂದಿಗೂ ಸಾಧಿಸವು. ಸಮೃದ್ಧ ಹೊಲಗಳು, ಉತ್ಕೃಷ್ಟ ವ್ಯಾಪಾರ ಇವುಗಳ ಮೂಲಕ ವಿಜಯನಗರದಿಂದ ಬಂಗಾರದ ಹೊಗೆ ಹಾಯುತ್ತಿತ್ತು. ವಿಜಯನಗರ ದಲ್ಲಿದ್ದ ಇರಾಣದ ವಕೀಲ ಅಬ್ದುರ್‌ರಜಾಕನು 'ಈ ರಾಜ್ಯದ ಬೊಕ್ಕಸದಲ್ಲಿ ಎಷ್ಟೋ ಕೋಣೆಗಳಿವೆ. ಅವುಗಳಲ್ಲಿ ನೆಲಮನೆ ಕಡಿದಿದ್ದು ಅವುಗಳಲ್ಲಿ ತುಂಬಿದ ಬಂಗಾರದಿಂದ ದೊಡ್ಡ ಮುದ್ದೆಯನ್ನೇ ಮಾಡಿದೆ' ಎಂದು ಬರೆದಿರುವನು. ವಿಜಯನಗರವನ್ನು ಸಂದರ್ಶಿಸಿದ ಪರಕೀಯ ಪ್ರವಾಸಿಕರೆಲ್ಲ ಇಲ್ಲಿನ ಸಾಧನಸಂಪತ್ತಿಯನ್ನು ನೋಡಿ ಬೆರಳು ಕಚ್ಚಿಕೊಂಡರು.

ವಿಜಯನಗರದ ವ್ಯಾಪಾರವೂ ಹೆಚ್ಚಿಗಿದ್ದಿತು. ಪೋರ್ತುಗಾಲದಿಂದ ಚೀನದ ವರೆಗಿನ ದೇಶಗಳೊಡನೆ ವಿಜಯನಗರವು ಇನ್ನೂರು ವರ್ಷ ವ್ಯಾಪಾರ ನಡೆಸಿತ್ತು. ಈ ರಾಜ್ಯದಲ್ಲಿಯ ಸುಮಾರು ಮುನ್ನೂರು ಬಂದರಗಳಿಂದ ಆಯಾತ ನಿರ್ಯಾತ ವ್ಯಾಪಾರ ನಡೆದಿದ್ದಿತು. ಅವುಗಳಲ್ಲಿ ಕಾಲಿಕತ್ತ ಬಂದರವು ಬಹಳ ಮಹತ್ವದ್ದಾಗಿತ್ತು. ಈ ಎಲ್ಲ ಬಂದರಗಳಿಂದ ಮುತ್ತು, ರತ್ನ, ಕುದುರೆ, ಆನೆ, ರೇಶಿಮೆ ಮತ್ತು ಅರಳೆ ಬಟ್ಟೆಗಳು, ಮಸಾಲೆ ಸಾಮಾನು, ಔಷಧ, ಕಬ್ಬಿಣ ಮೊದಲಾದ ವಸ್ತುಗಳ ಆಯಾತ ನಿರ್ಯಾತವಾಗುತ್ತಿತ್ತು. ಪೋರ್ತುಗೀಜ ಪ್ರವಾಸಿಯಾದ ಬಾರ್ಬೋಸನು 'ವಿಜಯನಗರ ಪಟ್ಟಣದಲ್ಲಿ ಬಹಳ ವ್ಯಾಪಾರವು ಸಾಗುತ್ತದೆ. ಅಧಿಕಾರಿ ವರ್ಗವು

ಅತ್ಯಂತ ನ್ಯಾಯದಿಂದ ಮತ್ತು ಸತ್ಯದಿಂದ ನಡೆಯುವದು' ಎಂದು ಬರೆದಿರುವನು. "ರಾಜನು ತನ್ನ ದೇಶದ ದಂಡೆಯನ್ನು ಸುಧಾರಿಸಿ ವ್ಯಾಪಾರಿಗಳಿಗೆ ಉತ್ತೇಜನ ಕೊಡಬೇಕು; ಅದರಿಂದ ಕುದುರೆ, ಆನೆ, ರತ್ನ, ಚಂದನ, ಮುತ್ತು ಮೊದಲಾದವು ಗಳು ದೇಶದಲ್ಲಿ ಬರಲು ಅನುಕೂಲವಾಗುವದು" ಎಂದು ಕೃಷ್ಣದೇವರಾಯನು ತಿಳಿಸುತ್ತಿದ್ದನು.

ವಿಜಯನಗರದ ವ್ಯಾಪಾರವನ್ನು ಪೋರ್ತುಗೀಜರೇ ಹೆಚ್ಚಾಗಿ ವಶಪಡಿಸಿ-ಕೊಂಡಿದ್ದರು. ಇಲ್ಲಿನ ವ್ಯಾಪಾರದಿಂದ ಸಮೃದ್ಧರಾಗಿದ್ದ ಪೋರ್ತುಗೀಜರು ಹಿಂದು-ಗಳಿಗೆ ಅನಿಸ್ಚಿತ ಧರ್ಮಚ್ಯುಲನ ಮಾಡಿದರು. ಈ ಘಟನೆಯು ಲಕ್ಷ್ಯದಲ್ಲಿ ಇಡುವಂಥ-ದಾಗಿದೆ. ಮಿತ್ರರಾರು, ಶತ್ರುಗಳಾರು ಎಂಬದನ್ನು ನಾವು ಸೂಕ್ಷ್ಮವಾಗಿ ವಿಚಾರಿಸಿ ನೋಡುವದಿಲ್ಲೆಂದು ಹೇಳಿದರೆ ವಿಶೇಷ ತಪ್ಪಾಗದು.

**ಪರರಾಷ್ಟ್ರೀಯ ಪ್ರವಾಸಿಕರ ಅಭಿಪ್ರಾಯ :—** ಈ ರಾಜ್ಯದಲ್ಲಿ ಅನೇಕ ಜನ ಪರಕೀಯರು, ವಕೀಲರು, ಪ್ರವಾಸಿಕರೆಂದು ಕಾಲಕಾಲಕ್ಕೆ ಬಂದುಹೋಗಿರುವರು. ಅವರು ಬರೆದಿಟ್ಟ ವರ್ಣನಾತ್ಮಕ ಲೇಖಗಳಿಂದ ಪರಕೀಯರಿಗೆ ಈ ರಾಜ್ಯವು ಹೇಗೆ ತೋರಿತೆಂಬುದರ ಮೂರ್ತಿಮಂತ ಚಿತ್ರವು ಕಂಗೊಳಿಸುವದು. ಜಿಜ್ಞಾಸುವೃತ್ತಿಯ ನಿಕೋಲೊ-ದಿ-ಕೋಂತಿ ಎಂಬ ಇಟಾಲಿಯನ್ ಪ್ರವಾಸಿಕನು ಇ. ಸ. ೧೪೨೦-೨೧ ರಲ್ಲಿ ಬಂದು ಹೋದನು. ದೂರದ ವರೆಗೆ ಹಬ್ಬಿದ್ದ ವಿಜಯನಗರದ ವೈಭವವನ್ನು ಪ್ರತ್ಯಕ್ಷವಾಗಿ ನೋಡಿದನು. ಈ ಉದ್ದೇಶದಿಂದಲೆ ಅವನಿಲ್ಲಿಗೆ ಬಂದಿದ್ದನು. ಅರವತ್ತು ಮೈಲು ಪರಿಘವಿದ್ದ ಈ ನಗರವು, ಅದರಲ್ಲಿಯ ಆಕರ್ಷಕ ಮೆರವಣಿಗೆ, ಒಳ್ಳೆ ವಿಜೃಂಭಣೆಯಿಂದ ನಡೆಯುವ ಉತ್ಸವ ಸಮಾರಂಭಗಳ ಉಲ್ಲೇಖವನ್ನು ಅವನು ಮಾಡಿರುವನು. ಅಬ್ದುರ್ ರಝಾಕನು ಸುಸಂಸ್ಕೃತ ಇರಾಣಿ ವಕೀಲನು. ಅವನು ಇ. ಸ. ೧೪೪೩ ರಲ್ಲಿ ಬಂದು ಹೋದನು. ಅವನ ಪ್ರವಾಸ ವೃತ್ತಾಂತದಲ್ಲಿ ಈ ರೀತಿ ಉಲ್ಲೇಖವಿದೆ. 'ಈ ರಾಜ್ಯದಲ್ಲಿ ಪರ್ವತಾಕಾರದ ಸಹಸ್ರ ಆನೆಗಳು ಮತ್ತು ಹನ್ನೊಂದು ಲಕ್ಷ ಸೇನೆ ಇದೆ. ಇಡೀ ಹಿಂದುಸ್ಥಾನದಲ್ಲಿಯೆ ಬಲಾಢ್ಯವಾದ 'ರಾಯ'ವಿದು. ವಿಜಯ ನಗರದಲ್ಲಿಯ ಜನರ ದೈನಿಕ ಜೀವನಕ್ರಮವನ್ನು ನೋಡಿ ದರೆ ಅಲ್ಲಿಯ ಜನರು ಅತ್ಯಂತ ಸುಧಾರಿಸಿದವರೆಂಬ ಮತವನ್ನು ಅವನು ವ್ಯಕ್ತಪಡಿ ಸಿರುವನು. 'ಒಂದು ಅಪೂರ್ವ ಮತ್ತು ಅದ್ಭುತ ನಗರ'ವೆಂದು ಅವನು ವಿಜಯ-ನಗರದ ಉಲ್ಲೇಖ ಮಾಡಿರುವನು. ವಿಜಯನಗರದಲ್ಲಿಯ ವ್ಯಾಪಾರದ ವೈಭವವನ್ನು ಅವನು ಬಹಳ ವಿಸ್ತಾರವಾಗಿ ಬಣ್ಣಿಸಿರುವನು.

ಇ. ಸ. ೧೪೭೪ರಲ್ಲಿ ಬಂದಿದ್ದ ನಿಕಿತನನೆಂಬ ರಶಿಯದ ಪ್ರವಾಸಿಯು 'ವಿಜಯ ನಗರದ ಅರಸನ ಹತ್ತರ ಅಸಂಖ್ಯ ಸೈನ್ಯವಿರುವುದರಿಂದ ಅವನು ಅತ್ಯಂತ ಬಲಾಢ್ಯ ನಾಗಿರುವನು' ಎಂದು ಹೇಳಿರುವನು.

ಮೆಗೆಲಾನನೆಂಬ ವಿಖ್ಯಾತ ಜಗಪ್ರವಾಸಿಯ ಮಗನಾದ ಬಾರ್ಬೋಝಾ

ಇವನು ಇ. ಸ ೧೫೦೦-೧೬ ಈ ಕಾಲದಲ್ಲಿ ವಿಜಯನಗರದಲ್ಲಿ ಇದ್ದನು. ಅವನು ಇಲ್ಲಿಯ ಅರಸರ ಧಾರ್ಮಿಕ ಔದಾರ್ಯವನ್ನು ಬಣ್ಣಿಸಿ 'ಕಣ್ಣು ಕುಕ್ಕಿಸುವಂಥ ನಗರ' ವೆಂದು ವಿಜಯನಗರದ ವೈಭವವನ್ನು ಹೊಗಳಿರುವನು. ಡಾಮಿಂಗೊ ಪಾಯಸ ಎಂಬ ಮತ್ತೊಬ್ಬ ಪೋರ್ತುಗೀಜನು ವ್ಯಾಪಾರಿಯೆಂದು ಇ. ಸ. ೧೫೨೦-೨೨ ರಲ್ಲಿ ಬಂದಿದ್ದನು. ಅವನಿಗೆ ಅನೇಕ ಸಲ ಕೃಷ್ಣದೇವರಾಯನ ದರ್ಶನವಾಯಿತು. ಈ ಅರಸನ ಗಂಭೀರ ವ್ಯಕ್ತಿತ್ವದ ಪರಿಣಾಮವು ಅವನ ಮನಸ್ಸಿನ ಮೇಲೆ ಚನ್ನಾಗಿ ಆಗಿತ್ತು. ಇಲ್ಲಿನ ಜನರ ಇರುವಿಕೆಯ ಅತ್ಯಂತ ಉದ್ಬೋಧಕ ವರ್ಣನೆಯನ್ನು ಅವನು ಮಾಡಿರುವನು. ಈ ರಾಜ್ಯದಲ್ಲಿ ಜ್ಯೋತಿಷಿಗಳು, ಮಲ್ಲರು, ಲೇಖಕರು ಮೊದಲಾದವರ ಕಾರ್ಯವನ್ನು ಸ್ತ್ರೀಯರೂ ಮಾಡುತ್ತಿರುವರು ಎಂದು ಅವನು ಹೇಳಿ ರುವನು. ಇ. ಸ. ೧೫೩೦-೩೫ ರಲ್ಲಿ ನ್ಯೂನಿಝನೆಂಬ ಮೂರನೇ ಪ್ರವಾಸಿಯು ಬಂದು ಹೋದನು. ಅವನು ಅತ್ಯಂತ ಪರಿಶ್ರಮದಿಂದ ವಿಜಯನಗರದ ಇತ್ಥಂಭೂತ ವೃತ್ತಾಂತವನ್ನು ಬರೆದಿರುವನು. ಅವನು 'ಯಾರಿಗಾದರೂ ಏನಾದರೂ ಬೇಡಿಕೊಳ್ಳ ಬೇಕಾಗಿದ್ದರೆ ಅವರು ನೇರವಾಗಿ ಅರಸನ ಕಡೆಗೆ ಹೋಗಲು ಮುಕ್ತದ್ವಾರವಿದೆ.' ಎಂದು ವಿಶೇಷವಾಗಿ ಉಲ್ಲೇಖಿಸಿರುವನು.

ಪರಕೀಯರಾದ ಈ ಪ್ರವಾಸಿಕರನ್ನು ವಿಜಯನಗರದ ಅರಸರು ಬಹಳ ಆದರ ಭಾವದಿಂದ ನೋಡಿಕೊಂಡರು. ಸನ್ಮಾನನೀಯ, ಪರಕೀಯ ಅತಿಥಿಗಳಿಗೆ ರಾಜ ರೀತಿಯ ಆದರಾತಿಥ್ಯ ನಡೆಯುತ್ತಿದ್ದಿತು. ಈ ಬಗೆಯ ಪ್ರಶಸ್ತಿಪತ್ರವನ್ನು ಈ ಎಲ್ಲ ಪ್ರವಾಸಿಕರು ಕೊಟ್ಟಿರುವರು. ವಿಜಯನಗರದ ಅಪೂರ್ವ ವೈಭವ, ಪ್ರಗತಿ-ಶೀಲ ರಾಜ್ಯಪದ್ಧತಿ ಮತ್ತು ಸುಧಾರಿಸಿದ ಹಾಗು ಸುಖಮಯ ಜೀವನವನ್ನು ಈ ಪ್ರವಾಸಿಕರೆಲ್ಲ ಮುಕ್ತಕಂಠದಿಂದ ಹೊಗಳಿರುವರು.

**ಸಮಾರೋಪ :-** ಇಷ್ಟೊಂದು ವೈಭವ ಶಿಖರಕ್ಕೇರಿದ ರಾಜ್ಯದ ವೃತ್ತಾಂತವು ಅತ್ಯಂತ ಅಭಿಮಾನಾಸ್ಪದವಾದುದಾಗಿದೆ. ಭಾರತೀಯರ ಉಚ್ಚ ಸಂಸ್ಕೃತಿಯನ್ನು ವಿಜಯನಗರದ ಅರಸರು ರಕ್ಷಿಸಿ ಆ ಅಮೌಲ್ಯ ಆಸ್ತಿಯನ್ನು ಮರಾಠರಿಗೊಪ್ಪಿಸಿ ತಮ್ಮ ಅವತಾರ ಕಾರ್ಯವನ್ನು ಮುಗಿಸಿದರು. ವಿಜಯನಗರದವರು ಪುರಸ್ಕರಿಸಿದ ಧಾರ್ಮಿಕ ಔದಾರ್ಯ ಮತ್ತು ಪ್ರಜೆಗಳ ಸರ್ವಾಂಗೀಣ ಪ್ರಗತಿಯ ಬಗ್ಗೆ ಅವರು ತಾಳಿದ ಕಳಕಳಿಯಿಂದ ಸ್ವತಂತ್ರ ಭಾರತಕ್ಕೆ ಸ್ಫೂರ್ತಿಯು ದೊರೆಯಬಲ್ಲದು.

## ಅವತರಣಿಕೆ

೧) ತತ್ಕಾಲೀನ ಇತಿಹಾಸಕಾರನಾಗಿದ್ದ ಫೆರಿಸ್ತಾ ಇವನು ವಿಜಯನಗರದ ಉದಯವು ಯಾವ ಪರಿಸ್ಥಿತಿಯಲ್ಲಿ ಆಯಿತೆಂಬುದರ ಉದ್ಬೋಧಕ ವರ್ಣನೆಯನ್ನು ಮಾಡಿರುವನು. ಆ ವರ್ಣನೆಯಲ್ಲಿಯ ಕೆಲಭಾಗವನ್ನು ಇಲ್ಲಿ ಕೊಟ್ಟಿದೆ. "ಪ್ರತಾಪ ರುದ್ರದೇವನ ಮಗನಾದ ಕೃಷ್ಣನಾಯಕನು ಕರ್ನಾಟಕದ ಬಲಶಾಲಿ ಅರಸನಾಗಿದ್ದ ಬಲ್ಲಾಳದೇವ ( ದ್ವಾರಸಮುದ್ರದಲ್ಲಿಯ ೩ನೇ ವೀರಬಲ್ಲಾಳ ) ನನ್ನು ಭೆಟ್ಟಿಯಾಗಿ

ಈ ರೀತಿಯಾಗಿ ಹೇಳಿದನು ‘ ಮುಸಲ್ಮಾನರು ತೆಲಂಗಣ ಮತ್ತು ಕರ್ನಾಟಕವನ್ನು ಪ್ರವೇಶಿಸಿರುವರು. ಹಿಂದುಗಳನ್ನು ನಿರ್ಮೂಲನಮಾಡಬೇಕೆಂದು ಅವರು ಪಣತೊಟ್ಟಿರುವರು. ಈ ಕಠಿಣ ಪರಿಸ್ಥಿತಿಯಲ್ಲಿ ನಾವು ಕಾರ್ಯಮಾಡಲಿಕ್ಕೆ ಬೇಕು. ’ ಆಗ ಬಲ್ಲಾಳದೇವನು ತನ್ನ ಮಂತ್ರಿಗಳ ಸಭೆಯನ್ನು ಸೇರಿಸಿ ಅವರ ಸಲಹೆಯಂತೆ ಮುಸಲ್ಮಾನ ಸೈನ್ಯವನ್ನು ಮುರಿಯಲು ತಾನೇ ಮುಂದಾಗಬೇಕೆಂದು ನಿರ್ಧರಿಸಿದನು. ಅದರಂತೆ ಮಾಬರ, ದ್ವಾರಸಮುದ್ರ ಮತ್ತು ಕಂಪಲಿಯನ್ನು ಮುಸಲ್ಮಾನರ ಆಳಿಕೆಯಿಂದ ಮುಕ್ತಗೊಳಿಸಬೇಕೆಂದು ಗೊತ್ತುಪಡಿಸಿದನು. ಈ ಯೋಜನೆಯಂತೆ ಬಲ್ಲಾಳ ದೇವನು ತನ್ನ ರಾಜ್ಯದ ಗಡಿಯಲ್ಲಿ ಗುಡ್ಡಗಾಡು ಪ್ರದೇಶದಲ್ಲಿ ವಿಶಾಲವಾದ ಪ್ರದೇಶದಲ್ಲಿ ವಿಜಯನಗರದ ರಾಜಧಾನಿಯನ್ನು ಸ್ಥಾಪಿಸಿದನು.

‘ ಕೃಷ್ಣನಾಯಕನು ವರಂಗಲ್ಲನ್ನು ಗೆದ್ದನು ಮತ್ತು ಅಲ್ಲಿಯ ಸುಭೇದಾರನಾಗಿದ್ದ ಇಮಾಮು-ಉಲ್-ಮುಲ್ಕನು ದೌಲತಾಬಾದಿಗೆ ಓಡಿಹೋದನು. ಬಲ್ಲಾಳದೇವ ಮತ್ತು ಕೃಷ್ಣನಾಯಕರು ತಮ್ಮ ಸೈನ್ಯಗಳನ್ನು ಒಗ್ಗೂಡಿಸಿ, ದೀರ್ಘಕಾಲದ ವರೆಗೆ ಮುಸಲ್ಮಾನರ ಕೈಯಲ್ಲಿ ಸಿಕ್ಕಿದ್ದ ಮಾಬರ ಮತ್ತು ದ್ವಾರಸಮುದ್ರಗಳನ್ನು ಮುಕ್ತ ಮಾಡಿದರು. ಯುದ್ಧ ಮತ್ತು ಬಂಡಿನ ಜ್ವಾಲೆ ಎಲ್ಲೆಡೆ ಹಬ್ಬಿದ್ದು ದೇವಗಿರಿಯೊಂದನ್ನು ಬಿಟ್ಟು ದಕ್ಷಿಣದಲ್ಲಿಯ ಸುಲ್ತಾನ ಆಳಿಕೆಯಲ್ಲಿಯ ಪ್ರದೇಶವೆಲ್ಲ ಮುಕ್ತವಾಗಿದೆ ’ ( ಇ. ಸ. ೧೩೪೬ ). —ಫೆರಿಸ್ತಾ

ಇಸವಿ ಸ. ೧೫೨೨ ರಲ್ಲಿ ಭಾರತಕ್ಕೆ ಬಂದಿದ್ದ ಡಾಮಿಂಗೊ ಪಾಯಸನೆಂಬ ಪೋರ್ತುಗೀಜ ಪ್ರವಾಸಿಯು ಇಲ್ಲಿಗೆ ಬರುವ ಮೊದಲು ಅನೇಕ ದೇಶಗಳನ್ನು ನೋಡಿದ್ದನು. ಅವನು ಬರುವ ಕಾಲಕ್ಕೆ ಯುರೋಪಿನಲ್ಲಿ ಜ್ಞಾನದ ಪುನರುಜ್ಜೀವನವಾಗಿ ನವನಿರ್ಮಾಣದ ಕಾರ್ಯವು ಇಟಲಿ ಮೊದಲಾದ ಯುರೋಪ ರಾಷ್ಟ್ರಗಳಲ್ಲಿ ಪ್ರಾರಂಭವಾಗಿದ್ದಿತು. ಯುರೋಪಿನಲ್ಲಿಯ ಈ ಪ್ರಗತಿಯ ಪರಿಚಯವಿದ್ದ ‘ಪಾಯಸನ ಕೆಳಗಿನ ಉದ್ಗಾರಗಳಿಗೆ ವಿಶೇಷ ಮಹತ್ವವಿದೆ. ಅವನು ಹೀಗೆ ಬರೆಯುತ್ತಾನೆ. “ವಿಜಯನಗರವು ವಿಸ್ತಾರದಲ್ಲಿ ರೋಮದ ರಾಜ್ಯದಷ್ಟು ವಿಶಾಲವಾಗಿದೆ ಆ ನಗರದ ರಚನೆ ಮತ್ತು ಸೌಂದರ್ಯ ಇವು ನಯನಮನೋಹರವಾಗಿವೆ. ಹೂ, ಹಣ್ಣುಗಳಿಂದ ಸಮೃದ್ಧವಾದ ಇಲ್ಲಿಯ ತೋಟಗಳು, ರಮಣೀಯ ಸರೋವರಗಳು ಅತ್ಯಂತ ಚಿತ್ತಾಕರ್ಷಕವಾಗಿವೆ. ಇದರಷ್ಟು ಸ್ವಯಂಪೂರ್ಣ ನಗರವು ಜಗತ್ತಿನಲ್ಲಿ ಬೇರೆಲ್ಲಿಯೂ ಇರುವದಿಲ್ಲ ”

## ಅಭ್ಯಾಸ

೧. ವಿಜಯನಗರದ ಸ್ಥಾಪನೆಗೆ ಯಾವ ಪರಿಸ್ಥಿತಿಯು ಕಾರಣವಾಯಿತು ?

೨. ವಿಜಯನಗರದ ನಿರ್ಮಾಣದಲ್ಲಿ ಈ ಕೆಳಗಿನ ವ್ಯಕ್ತಿಗಳು ಯಾವ ಪಾತ್ರವನ್ನು ವಹಿಸಿದರು ? ೩ನೇ ಬಲ್ಲಾಳ, ಕೃಷ್ಣನಾಯಕ, ೧ನೇ ಹರಿಹರ, ಬುಕ್ಕ, ೨ನೇ ಹರಿಹರ ಮತ್ತು ಕೃಷ್ಣದೇವರಾಯ.

೩. ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರವು ವೈಭವಶಿಖರವನ್ನು ಮುಟ್ಟಿತ್ತು, ಎಂದು ಏಕೆ ಹೇಳುವರು ?

೪. ವಿಜಯನಗರವು ಹ್ರಾಸವಾಗುವದಕ್ಕೆ ಕಾರಣಗಳನ್ನು ಹೇಳಿರಿ.

೫. ವಿಜಯನಗರದ ಸಂಬಂಧದಲ್ಲಿ ನಿಮಗೆ ಮಹತ್ವದ್ದೆನಿಸುವ ಯಾವದಾದರೂ ಮೂರು-ವಿಶೇಷ ಭಾಗಗಳನ್ನು ಹೇಳಿರಿ.

೬. ವಿಜಯನಗರದಲ್ಲಿಯ ಯಾವ ವೈಶಿಷ್ಟ್ಯವನ್ನು ಪರಕೀಯ ಪ್ರವಾಸಿಗಳು ಮುಕ್ತ ಕಂಠದಿಂದ ಹೊಗಳಿರುವರು ?

## ೫ನೆಯ ಪಾಠ

# ಬಹಮನೀ ರಾಜ್ಯ

**ಪ್ರಾಸ್ತಾವಿಕ :—** ಮುಹಮ್ಮದ ಬಿನ್ ತುಘಲಕನ ಅವಿಚಾರದ ಮತ್ತು ಹುಚ್ಚು ಕೃತಿಗಳು ಅವನ ಲಹರಿ ಮತ್ತು ಒತ್ತಾಯದ ಸ್ವಭಾವ ಹಾಗು ಆ ರಾಜ್ಯದಲ್ಲಿಯ ಆರ್ಥಿಕ ದುರವಸ್ಥೆ ಇವುಗಳಿಗಾಗಿ ಎಲ್ಲೆಡೆ ಅಸ್ವಸ್ಥತೆಯುಂಟಾಗಿತ್ತು. ರಾಜ್ಯದ ವಿಸ್ತಾರವು ಬಹಳಾದ್ದರಿಂದ ಅದನ್ನೆಲ್ಲ ಸುಸ್ಥಿತಿಯಲ್ಲಿಡುವದು ಸುಲ್ತಾನನಿಂದ ಆಗಲಿಲ್ಲ. ವಿಶೇಷವಾಗಿ ದಿಲ್ಲಿಯಿಂದ ದೂರವಿರುವ ಪ್ರಾಂತಗಳಲ್ಲಿ ಬಂಡಾಯವೇ ಎದ್ದಿತು. ಸುಲ್ತಾನನ ಅಧಿಕಾರ ದುರ್ಬಲವಾದ್ದರಿಂದ ಇ. ಸ. ೧೩೩೫-೧೩೫ರ ಕಾಲಾವಧಿಯಲ್ಲಿ ಅವನ ರಾಜ್ಯದಲ್ಲಿಯ ಅನೇಕ ಪ್ರಾಂತಗಳು ಸ್ವತಂತ್ರವಾದವು. ಸ. ೧೩೩೫ರಲ್ಲಿ ಪೂರ್ವ ದಂಡೆಯಲ್ಲಿದ್ದ ಮಾಬರ ಮತ್ತು ಮಧುರೆಗಳಲ್ಲಿ ಮುಸಲ್ಮಾನ ಸರದಾರರು ಸ್ವತಂತ್ರ ರಾಜ್ಯಗಳನ್ನು ಸ್ಥಾಪಿಸಿಕೊಂಡ ಮುಂದಿನ ವರ್ಷ ಅಂದರೆ ೧೩೩೬ ರಲ್ಲಿಯ ಬಲಾಢ್ಯ ಮತ್ತು ವೈಭವಶಾಲಿಯಾದ ವಿಜಯನಗರದ ಹಿಂದೂ ರಾಜ್ಯ ಸ್ಥಾಪನೆಯಾಯಿತು. ಈ ರಾಜ್ಯದ ಇತಿಹಾಸವನ್ನು ನಾವು ಹಿಂದಿನ ಪಾಠದಲ್ಲಿ ಓದಿದ್ದೇವೆ. ಅನಂತರ ಕೇವಲ ೧೧ ವರ್ಷಗಳಲ್ಲಿಯೇ ಅಂದರೆ ೧೩೪೭ರಲ್ಲಿ ವಿಜಯನಗರದ ಉತ್ತರಕ್ಕೆ ಮುಸಲ್ಮಾನರ ಸ್ವತಂತ್ರ ಮತ್ತು ಸಮರ್ಥ ರಾಜ್ಯವು ಕಲಬುರ್ಗಿಯಲ್ಲಿ ಸ್ಥಾಪಿತವಾಯಿತು. ಈ ರಾಜ್ಯದ ಇತಿಹಾಸವನ್ನು ನಾವೀಗ ನೋಡುವಾ.

**ಸ್ಥಾಪನೆ :—** ಮುಹಮ್ಮದ ಬಿನ್ ತುಘಲಕನ ಅರಾಜಕತೆಯ ಕಾಲದಲ್ಲಿ ದಕ್ಷಿಣದಲ್ಲಿಯ ಅಫಗಾಣ ಸರದಾರರು ದಿಲ್ಲಿಯ ಸುಲ್ತಾನನ ಅಧಿಕಾರವನ್ನು ಧಿಕ್ಕರಿಸಿ ದೌಲತಾಬಾದ ಕಿಲ್ಲೆಯನ್ನು ವಶಪಡಿಸಿಕೊಂಡರು. ಮತ್ತು ತಮ್ಮ ಮುಂದಾಳಾದ ಇಸ್ಮಾಯಿಲ್ ಖಾನನಿಗೆ ನಾಸೀರುದ್ದೀನನೆಂಬ ಬಿರುದುಕೊಟ್ಟು ಅವನನ್ನು ಸುಲ್ತಾನನ್ನಾಗಿ ಪಟ್ಟಕ್ಕೆ ಕೂಡ್ರಿಸಿದರು. ಆದರೆ ವೃದ್ಧಾಪ್ಯದ ಮೂಲಕ ತನಗೆ ರಾಜ್ಯಾಧಿಕಾರ ನಡೆಯಿಸುವದಾಗಲಾರದೆಂದು ಇಸ್ಮಾಯಿಲ್‌ನು ಆತ್ಮಸಂತೋಷದಿಂದ ತನ್ನ

ಅಧಿಕಾರವನ್ನು ಬಿಟ್ಟುಕೊಟ್ಟನು. ಮತ್ತು ಪರಾಕ್ರಮಿ ಹಾಗು ಕರ್ತವ್ಯಶಾಲಿ-ಯಾಗಿದ್ದ ಸರದಾರ ಝಫರಖಾನನನ್ನು ಸುಲ್ತಾನನನ್ನಾಗಿ ಪಟ್ಟಗಟ್ಟಿದನು. ಝಫರ ಖಾನನು ಅಲ್ಲಾಉದ್ದೀನ ಬಹಮ್ಮನಶಾಹ ಎಂಬ ಬಿರುದು ಧರಿಸಿ ಸುಲ್ತಾನನ ಪಟ್ಟವನ್ನೇರಿದನು. ಅವನು ಕಲಬುರ್ಗಿಯನ್ನು ರಾಜಧಾನಿಯ ಸ್ಥಳವನ್ನಾಗಿ ಮಾಡಿ ಕೊಂಡು ತನ್ನ ಹೆಸರಿನ ನಾಣ್ಯಗಳನ್ನು ಹೊರಡಿಸಿದನು. ತಾನು ಇರಾಣದ ಪ್ರಸಿದ್ಧ ಬಹಮನೀ ವಂಶದವನೆಂದು ಅವನು ಒಳ್ಳೇ ಅಭಿಮಾನದಿಂದ ಹೇಳಿಕೊಳ್ಳಹತ್ತಿದನು. ಇದರಿಂದ ಅವನ ರಾಜ್ಯಕ್ಕೆ "ಬಹಮನಿ" ಎಂಬ ಹೆಸರು ಪ್ರಾಪ್ತವಾಯಿತು.



ಬಹಮನಿ ನಾಣ್ಯಗಳು

ದಕ್ಷಿಣದಲ್ಲಿಯ ಈ ಪ್ರಸಿದ್ಧರಾಜ್ಯವು, ಅದು ಸ್ಥಾಪಿತವಾದ ಬಳಿಕ ಸುಮಾರು ೧೮೦ ವರ್ಷ ಮಾತ್ರ ಉಳಿಯಿತು. (ಇ. ಸ. ೧೩೪೭–೧೫೨೬) ಈ ಕಾಲಾವಧಿಯಲ್ಲಿ ಒಟ್ಟಿಗೆ ೧೮ ಜನ ಸುಲ್ತಾನರು ರಾಜ್ಯವಾಳಿದರು. ಈ ರಾಜ್ಯದ ವಿಸ್ತಾರವು ಹೆಚ್ಚಿಗೆ ಹೆಚ್ಚೆಂದರೆ ಉತ್ತರಕ್ಕೆ ಪೆನುಗೊಂಡೆಯಿಂದ ದಕ್ಷಿಣಕ್ಕೆ ಕೃಷ್ಣೆಯವರೆಗೆ ಮತ್ತು ಪಶ್ಚಿಮಕ್ಕೆ ಕೊಂಕಣಪಟ್ಟಿಯಿಂದ ಪೂರ್ವಕ್ಕೆ ಭೋಂಗೀರ (ದಕ್ಷಿಣ ಹೈದ್ರಾಬಾದ)ದ ವರೆಗಿನ ಪ್ರದೇಶದವರೆಗೆ ಹಬ್ಬಿತ್ತು. ಗುಜರಾಥ, ಮಾಳವಾ, ತೆಲಂಗಣ, ಓಡಿಸಾ ಗಳಲ್ಲಿಯ ರಾಜರೊಡನೆ ಅವರ ಯುದ್ಧಗಳು ನಡೆದೇ ಇದ್ದವು. ಆದರೆ ವಿಜಯ ನಗರ ರಾಜ್ಯದ ಗಡಿಯು ಅದಕ್ಕೆ ಹೊಂದಿ ಇದ್ದುದರಿಂದ ರಾಯಚೂರ–ಮುಅಬದ ಬಗ್ಗೆ ಇವೆರಡೂ ರಾಜ್ಯಗಳಲ್ಲಿ ಮೇಲಿಂದಮೇಲೆ ಬಡಿದಾಟಗಳಾಗುತ್ತಿದ್ದವು. ತೀವ್ರ ಹೋರಾಟವು ಸದಾ ನಡೆಯುತ್ತಿದ್ದಿತು.

**ಪ್ರಮುಖ ಸುಲ್ತಾನ:**—ರಾಜ್ಯಸಂಸ್ಥಾಪಕ ಬಹಮನಶಾಹ ಇವನು ತನ್ನ ಹತ್ತು ವರ್ಷಗಳ ಆಳಿಕೆಯಲ್ಲಿ (೧೩೪೭–೧೩೫೮) ಭೀಮಾನದಿಯಿಂದ ಆದವಾನಿಯ ವರೆಗೆ ಮತ್ತು ಚೌಲ ಬಂದರದಿಂದ ಬೀದರವರೆಗೆ ರಾಜ್ಯವನ್ನು ವಿಸ್ತರಿಸಿದನು. ಈ ವಿಸ್ತೃತ ಪ್ರದೇಶದಲ್ಲಿ ವ್ಯವಸ್ಥಿತ ಆಡಳಿತವು ನಡೆಯಬೇಕೆಂದು ಅವನು ತನ್ನ ರಾಜ್ಯ-ವನ್ನು ಕಲ್ಬುರ್ಗಿ, ದೌಲತಾಬಾದ, ವರ್ಹಾಡ ಮತ್ತು ಬೀದರ ಹೀಗೆ ವಿಭಾಗಗಳನ್ನಾಗಿ ಮಾಡಿದನು. ಆಡಳಿತೆಯಲ್ಲಿ ಏಕಸೂತ್ರತೆ ಉಳಿಯಬೇಕೆಂದು ಅವನು ಮೇಲಿಂದ ಮೇಲೆ ತನ್ನ ರಾಜ್ಯದಲ್ಲಿ ಸಂಚರಿಸುತ್ತಿದ್ದನು. ಪ್ರತ್ಯೇಕ ವಿಭಾಗದ ಅಧಿಕಾರಿಯು

ಕಡೆಗೆ ವಸೂಲಿಯ ಮತ್ತು ಸಂರಕ್ಷಣೆಯ ಹೊಣೆಯನ್ನು ಅವನು ಒಪ್ಪಿಸಿದ್ದನು. ಆಡಳಿತೆಯಲ್ಲಿ ಶಿಸ್ತು ಉಂಟಾದ್ದರಿಂದ ಬಂಡಾಯಕ್ಕೆ ಒಳ್ಳೇ ಪೆಟ್ಟು ಬಿದ್ದಿತು.

'ಬುರ್ಹಾನ-ಈ-ಮಾಝೀರ' ಈ ಗ್ರಂಥದ ಲೇಖಕನು 'ಅಲ್ಲಾವುದ್ದೀನ ಬಹಮನಶಾಹನು ನ್ಯಾಯನಿಷ್ಠುರ ಧರ್ಮಶೀಲ ಮತ್ತು ಪ್ರಜಾವತ್ಸಲನಾಗಿದ್ದನು. ಸದ್ಧರ್ಮ ಪ್ರಸಾರಕ್ಕಾಗಿ ಅವನು ಬಹಳ ಪ್ರಯತ್ನ ಮಾಡಿದನು; ಅವನ ಪ್ರಜೆಗಳು ಸಮಾಧಾನದಲ್ಲಿದ್ದರು' ಎಂದು ಬರೆದಿರುವನು.

ಅಲ್ಲಾವುದ್ದೀನ ಶಾಹನ ತರುವಾಯದಲ್ಲಿ ಮುಹಮ್ಮದಶಾಹ ಪಟ್ಟಕ್ಕೆ ಬಂದನು. (ಇ. ಸ. ೧೩೫೮ ರಿಂದ ೧೩೭೩). ಅವನು ತನ್ನ ಜಾಣ ಮತ್ತು ಅನುಭವಿಕ ಪ್ರಧಾನಿ, ಸೈಫುದ್ದೀನ ಘೋರಿ ಇವನ ಮೇಲೆ ರಾಜ್ಯಕಾರಭಾರದ ಹೊಣೆಯನ್ನೆಲ್ಲ ಹೊರಿಸಿದನು. ಸುಲ್ತಾನನು ಸ್ವತಃ ವರಂಗಲ್ಲದ ಅರಸನಿಗೆ ತನ್ನ ಕೈತೋರಿಸಿ ಗೋವಳಕೊಂಡವನ್ನು ಗೆದ್ದನು. ಅದರಂತೆ ವಿಜಯನಗರದ ಅರಸರೊಡನೆಯೂ ಅವನು ಯುದ್ಧ ಮಾಡಿದನು. ರಾಯಚೂರ-ದುಆಬ ಸಮೃದ್ಧ ಪ್ರದೇಶದ ಮೇಲೆ ತಮ್ಮ ವರ್ಚಸ್ಸಿರಬೇಕೆಂದು ಇವೆರಡೂ ರಾಜ್ಯಗಳಲ್ಲಿ ಸದಾ ಯುದ್ಧವಾಗುತ್ತಿದ್ದುದು ಇದಕ್ಕೆ ಕಾರಣ. ಮುಹಮ್ಮದ ಶಾಹ ಸುಲ್ತಾನನು ತನ್ನ ೧೫ ವರ್ಷಗಳ ಆಳಿಕೆಯಲ್ಲಿ ಸುಮಾರು ೫ ಲಕ್ಷ ಹಿಂದುಗಳನ್ನು ವಿಜಯನಗರದೊಡನೆ ನಡೆಸಿದ ಹೋರಾಟದಲ್ಲಿ ಯಮಸದನಕ್ಕಟ್ಟಿದ್ದನು' ಎಂದು ಪ್ರಸಿದ್ಧ ಮುಸಲ್ಮಾನ ಇತಿಹಾಸಕಾರನಾದ ಫೆರಿಸ್ತಾ ಇವನು ಬರೆದಿಟ್ಟಿರುವನು.

ಇವನ ತರುವಾಯದಲ್ಲಿ ಪಟ್ಟಕ್ಕೆ ಬಂದ ಬಹಮನೀ ಸುಲ್ತಾನರಲ್ಲಿ ಫಿರೋಜಶಾಹ. ಇವನ ಆಡಳಿತೆಯಲ್ಲಿ (ಇ. ಸ. ೧೩೯೭-೧೪೨೨) ರಾಜ್ಯದ ವೈಭವವು ಶಿಖರಕ್ಕೆ ಮುಟ್ಟಿತ್ತು. ವಿಜಯನಗರದ ಅರಸರೊಡನೆ ಯುದ್ಧಮಾಡುವ ಪರಂಪರೆಯನ್ನು ಅವನು ಮುಂದುವರಿಸಿದನು. ವಿಜಯನಗರದ ದೇವರಾಯನನ್ನು ಸೋಲಿಸಿ ಅವನಿಂದ ಹೇರಳ ಹಣವನ್ನು ಕಪ್ಪವನ್ನಾಗಿ ತೆಗೆದುಕೊಂಡನು. ಫಿರೋಜಶಾಹನು ರಾಜಮಹೇಂದ್ರಿವರೆಗೆ ತನ್ನ ರಾಜ್ಯವನ್ನು ಹಬ್ಬಿಸಿದನು.

ಫಿರೋಜನು ಕೇವಲ ಜಯಶಾಲಿಯಾಗಿದ್ದನಿಷ್ಟೇ ಅಲ್ಲ; ಆದರೆ ಅವನಿಗೆ ವಿದ್ಯೆ ಮತ್ತು ಕಲೆಗಳಲ್ಲಿಯೂ ಬಹಳ ಆಸ್ಥೆಯಿತ್ತು. ಅನೇಕ ಭಾಷೆಗಳ ಜ್ಞಾನ ಅವನಿಗಿತ್ತು. ಭೀಮೆಯ ದಂಡೆಯ ಮೇಲೆ ಅವನು ಫಿರೋಜಾಬಾದವೆಂಬ ಸುಂದರ ನಗರವನ್ನು ಕಟ್ಟಿಸಿದನು. ಅದರಂತೆ ಅವನು ದೌಲತಾಬಾದದಲ್ಲಿ ಒಂದು ವೇಧಶಾಲೆಯನ್ನು ಕಟ್ಟಿಸಿದನು. ಕಾರ್ಡೋವ್ಹಾ (ಸ್ಪೇನದಲ್ಲಿ) ದಲ್ಲಿಯ ಮಸೀದೆಯಂಥ ಒಂದು ಮಸೀದೆಯನ್ನು ಅವನು ಕಲ್ಬುರ್ಗಿಯಲ್ಲಿ ಕಟ್ಟಿಸಿದನು. ಇದರ ವೈಶಿಷ್ಟ್ಯವೆಂದರೆ, ಅದರ ಮೇಲೆ ಸಂಪೂರ್ಣ ಆಚ್ಛಾದನ (ಚಪ್ಪರವಿದ್ದುದು) ಇದೆ. ಫಿರೋಜನು ಬಹಳ ಧರ್ಮಾಂಧನಾಗಿದ್ದನು. ಮದ್ಯಪಾನ ಮತ್ತು ಸಂಗೀತದ ಹುಚ್ಚು ಅವನಿಗೆ ಬಹಳವಿದ್ದಿತು.

ಈ ಸಮಯಕ್ಕೆ ದೇಶದಲ್ಲಿ ದೊಡ್ಡದೊಂದು ಬರಬಿದ್ದಿತು. "ದುರ್ಗಾದೇವಿಯ ಬರ" ವೆಂದು ಅದು ಪ್ರಸಿದ್ಧವಿದೆ. ಈ ಬರದಿಂದ ಜನತೆಗೆ ಅನನ್ವಿತ ಕಷ್ಟವಾಯಿತು.

ಸುಲ್ತಾನನ ಪ್ರಧಾನ ಸೈಫುದ್ದೀನ ಘೋರಿಯು ಮಾಳವ, ಗುಜರಾಥ ಮೊದಲಾದ ಭಾಗಕ್ಕೆ ಸಾವಿರಾರು ಕಂಟಲಿ ಎತ್ತುಗಳನ್ನು ಕಳಿಸಿ ಧಾನ್ಯಗಳನ್ನು ತರಿಸಿದನು. ಬರಗಾಲಗ್ರಸ್ತರಿಗೆ ಆ ಧಾನ್ಯಗಳನ್ನು ಹಂಚಿ ಅವರಿಗೆ ಎಲ್ಲ ಬಗೆಯಿಂದ ಸಹಾಯ ಸಲ್ಲಿಸಿದನು. 'ಬುರ್ಹಾಣ-ಈ-ಮಾಸ್ಸೀರ' ಈ ಗ್ರಂಥ ಲೇಖಕನು ಹೀಗೆ ಬರೆಯುತ್ತಾನೆ:- "ಫಿರೋಜನು ಬಹಳ ಪರಾಕ್ರಮಿಯಾಗಿದ್ದನು. ಆದರೆ ಅವನು ಉತಾವಳಿ ಸ್ವಭಾವದವನಾಗಿದ್ದನು. ಸದ್ಧರ್ಮದ ಪ್ರಸಾರಕ್ಕಾಗಿ ಅವನು ಬಹಳ ಪರಿಶ್ರಮ ಪಟ್ಟನು. ವಿದ್ವಾಂಸರ ಮತ್ತು ಸಾಧುಸಂತರ ಸಹವಾಸದಲ್ಲಿ ಅವನಿಗೆ ಬಹಳ ಆನಂದವೆನಿಸುತ್ತಿತ್ತು."

ಫಿರೋಜನ ತರುವಾಯ ಪಟ್ಟಕ್ಕೆ ಬಂದ ಅಹಮ್ಮದಶಾಹಾನು ವರಂಗಲ್ಲ ರಾಜ್ಯವನ್ನು ಪಾದಾಕ್ರಾಂತ ಮಾಡಿ ತನ್ನ ರಾಜ್ಯದಲ್ಲಿ ಸೇರಿಸಿಕೊಂಡನು. ರಾಜಧಾನಿ ಸ್ಥಳವನ್ನು ಕಲ್ಬುರ್ಗಿಯಿಂದ ಬೀದರಕ್ಕೆ ಸ್ಥಳಾಂತರಿಸಿದನು. ಹವೆ ಮತ್ತು ಮಧ್ಯವರ್ತಿ ಸ್ಥಳ ಈ ದೃಷ್ಟಿಯಿಂದ ಬೀದರವು ಒಳ್ಳೇ ಅನುಕೂಲವಾಗಿದ್ದಿತು. ಯುದ್ಧದಲ್ಲಿ ಸಿಕ್ಕಿದ್ದ ೨೦ ಸಾವಿರ ಸ್ತ್ರೀ-ಪುರುಷರನ್ನು ಅವನು ಕ್ರೂರ ರೀತಿಯಿಂದ ಸಂಹರಿಸಿದನು. ಈ ಬಗೆಯ ಅವನ ವರ್ತನೆಯಿಂದ ಅವನ ಲಹರೀ ಮತ್ತು ಕ್ರೂರ ಸ್ವಭಾವವು ಚೆನ್ನಾಗಿ ವ್ಯಕ್ತವಾಗುವದು.

ಅವನ ತರುವಾಯ ರಾಜ್ಯಕ್ಕೆ ಬಂದ ಅಲ್ಲಾವುದ್ದೀನಶಾಹಾನ ಆಡಳತೆಯಲ್ಲಿ (ಇ. ಸ. ೧೪೩೫-೫೭) ಆಸ್ಥಾನದಲ್ಲಿಯ ದಕ್ಷಿಣೀ ಮತ್ತು ಪರದೇಶೀ ಪಕ್ಷಗಳಲ್ಲಿಯ ಬಡಿದಾಟಗಳು ವಿಕೋಪಕ್ಕೆ ಹೋಗಿ ದಕ್ಷಿಣೀ ಪಕ್ಷದ ಮುಸಲ್ಮಾನರು ಪರದೇಶೀ ಪಕ್ಷದ ಮುಸಲ್ಮಾನರನ್ನು ಅಮಾನುಷ ರೀತಿಯಿಂದ ಕೊಲೆ ಮಾಡಿದರು. ಈ ಯಾದವಿಯಿಂದ ರಾಜ್ಯದ ಶಕ್ತಿಯು ಕ್ಷೀಣವಾಗಹತ್ತಿತು. ಅದರ ನಾಶವು ಸಮೀಪಿಸಿತು. ಈ ಯಾದವಿಯನ್ನು ನಿಲ್ಲಿಸಲು ಸುಲ್ತಾನನಿಗೆ ಶಕ್ಯವಾಗಲಿಲ್ಲ.

ಅನಂತರ ಪಟ್ಟವನ್ನೇರಿದ ಹುಮಾಯೂನಶಾಹಾನಂತೂ ಕ್ರೌರ್ಯದ ಮೂರ್ತಿಮಂತ ಪ್ರತೀಕನೇ ಆಗಿದ್ದನು. ದೌಷ್ಟ್ಯ ಮತ್ತು ಕ್ರೌರ್ಯ ಈ ವಿಷಯಗಳಲ್ಲಿ ರೋಮದ ಸಮ್ರಾಟ ನೀರೋ ಮತ್ತು ಕಾಶ್ಮೀರದ ಹರ್ಷನೊಡನೆ ಅವನ ತುಲನೆಯನ್ನು ಯಥಾರ್ಥವಾಗಿ ಮಾಡಬಹುದಾಗಿದೆ. ಜನರನ್ನು ಛಲಿಸಿ, ಅವರನ್ನು ಥಳಿಸುವದರಲ್ಲಿ ಅವನಿಗೆ ಸಂತೋಷವೆನಿಸುತ್ತಿದ್ದಿತು. ಅವನು ಸತ್ತಾಗ ಜನರೆಲ್ಲ ಸಂತೋಷದ ಉದ್ಗಾರ ತೆಗೆದರು.

ಅನಂತರದ ಕಾಲದಲ್ಲಿ (ಇ. ಸ. ೧೪೫೭-೧೪೮೧) ಆಗಿಹೋದ ಸುಲ್ತಾನರು ಕೇವಲ ನಾಮಧಾರಿಗಳಾಗಿದ್ದರು. ಖ್ವಾಜಾ ಮಹಮೂದ ಗವಾನನೆಂಬ ಪ್ರಧಾನಿಯ ಕೈಯಲ್ಲಿ ಎಲ್ಲ ಅಧಿಕಾರ ಸೂತ್ರಗಳಿದ್ದವು. ಅವನು ಇರಾಣಿಯಾದ್ದರಿಂದ ದಕ್ಷಿಣದವರು ಅವನನ್ನು ದ್ವೇಷಿಸುತ್ತಿದ್ದರು. ದರಬಾರದಲ್ಲಿಯ ಯಾದವಿಯಿಂದ ಅಲಿಪ್ತನಾಗಿದ್ದುಕೊಂಡು ಅವನು ರಾಜ್ಯದ ಉತ್ಕರ್ಷಕ್ಕೆ ನಿಃಸ್ವಾರ್ಥರೀತಿಯಿಂದ ಅಹೋರಾತ್ರ ಪರಿಶ್ರಮಿಸಿದನು. ಅವನ ಕಾಲದಲ್ಲಿ ರಾಜ್ಯವು ವಿಸ್ತಾರಹೊಂದಿ ಅದರ

ವೈಭವವೂ ಹೆಚ್ಚಿತು. ಆದರೆ ಕಾರಭಾರದಲ್ಲಿಯೂ ಶಿಸ್ತು ಮತ್ತು ಉಗ್ರತೆಯ ಪರಿಣಾಮವಾಗಿ ಅನೇಕ ಶತ್ರುಗಳು ಉತ್ಪನ್ನರಾದರು. ರಾಜದ್ರೋಹದ ಕಾಲ್ಪನಿಕ ಆರೋಪವನ್ನು ಗವಾನನ ಶತ್ರುಗಳು ಅವನ ಮೇಲೆ ಹೊರಿಸಿ ಸುಲ್ತಾನನಿಂದ ಅವನ ವಧೆ ಮಾಡಿಸಿದರು. ಮದ್ಯವನ್ನು ಕುಡಿದು ಮದಾಂಧನಾಗಿದ್ದಾಗಲೇ ಸುಲ್ತಾನನು ಈ ಶಿಕ್ಷೆಯ ಹುಕುಮು ಕೊಟ್ಟನು. ಸಾಯುವಾಗ ಈ ಸ್ವಾಮಿನಿಷ್ಠ ಪ್ರಧಾನಿಯು ತೆಗೆದ ಉದ್ಗಾರಗಳು ಒಳ್ಳೇ ಸೂಚಕವಾಗಿರುವವು. "ಪರಮಾತ್ಮನೇ, ನೀನು ನನಗೆ ಹುತಾತ್ಮರ ಮರಣವನ್ನು ಕೊಡುತ್ತಿರುವಿ. ಇದಕ್ಕಾಗಿ ನಾನು ನಿನಗೆ ಋಣಿಯಾಗಿರುವೆ, ನಾನೀಗ ಹಣ್ಣೆಲೆಯಾಗಿರುವೆ. ಅದು ಉದುರಿ ಬೀಳುವದರಿಂದ ಹಾನಿಯೇನೂ ಇಲ್ಲ. ಆದರೆ ಅರಸನೇ, ನನ್ನಂಥ ವೃದ್ಧನನ್ನು ಕೊಂದು ನೀನು ಮಾತ್ರ ನಿನ್ನ ರಾಜ್ಯ ಮತ್ತು ವೈಭವದ ನಾಶವನ್ನು ಮಾಡಿಕೊಳ್ಳುತ್ತಿರುವಿ." ಮರಣ ಸಮಯದಲ್ಲಿ ಗವಾನನು ತೆಗೆದ ಉದ್ಗಾರಗಳು ಪೂರ್ಣ ಸತ್ಯವಾಗಿ ಪರಿಣಮಿಸಿದವು. ಮರಣ ಸಮಯಕ್ಕೆ ಅವನಿಗೆ ೭೮ ವರ್ಷಗಳಾಗಿದ್ದವು. ಸುಲ್ತಾನನಿಗೆ ನಿಜವಾದ ಸಂಗತಿಗಳೆಲ್ಲ ತಿಳಿದ ಬಳಿಕ ಅವನಿಗೆ ಬಹಳ ಪಶ್ಚಾತ್ತಾಪವೆನಿಸಿತು. ಆ ದುಃಖದಿಂದಲೇ ಅವನು ಮುಂದೆ ಒಂದು ವರ್ಷದೊಳಗಾಗಿಯೇ ಮರಣಹೊಂದಿದನು. ಗವಾನನ ಮರಣದ ನಂತರ ಅಲ್ಪಾವಧಿಯಲ್ಲಿಯೇ ರಾಜ್ಯವು ಒಡೆದುಹೋಯಿತು.

**ಬಹಮನಿ ರಾಜ್ಯದ ಅಲಂಕಾರಗಳು:—** ಈ ವರೆಗೆ ಓದಿದ ಇತಿವೃತ್ತದಿಂದ ಬಹಮನಿ ರಾಜ್ಯದ ಇತಿಹಾಸದಲ್ಲಿ ಬರಿ ಕಾರಸ್ಥಾನ, ಯುದ್ಧ, ಕೊಲೆ ಮೊದಲಾದವುಗಳು ನಡೆದಿದ್ದು ಸ್ತುತ್ಯವಾದ ಘಟನೆಗಳು ನಡೆಯಲಿಲ್ಲ ಎಂದು ಅನಿಸುವ ಸಂಭವವಿದೆ. ಈ ವಿಧಾನದಲ್ಲಿ ಬಹಳಷ್ಟು ತಥ್ಯವಿದ್ದರೂ ಸಂಪೂರ್ಣ ಸತ್ಯವಿರುವದಿಲ್ಲ. ಬಹಮನಿ ಸುಲ್ತಾನರು ಧರ್ಮಾಂಧರಾಗಿದ್ದರು ಮತ್ತು ಹಿಂದುಗಳನ್ನು ಛಲಿಸಿದರು. ಸ್ವತಃ ಸುಲ್ತಾನರು ದಾಳಿ, ಬೇಟೆ ಮತ್ತು ವಿಲಾಸಗಳಲ್ಲಿ ದಂಗಾಗಿ ಬಿಡುತ್ತಿದ್ದರು. ಆದರೂ ಅವರಿಗೆ ದೊರೆತ ಸೈಫುದ್ದೀನ ಘೂರಿ ಮತ್ತು ಗವಾನರಂಥ ಇಬ್ಬರು ಕರ್ತೃತ್ವಶಾಲಿಗಳಾದ ಪ್ರಧಾನರಿಂದ ರಾಜ್ಯದ ವೈಭವವು ಹೆಚ್ಚಿತು. ಅದನ್ನು ಈಗ ನೋಡುವಾ.

**೧) ಸೈಫುದ್ದೀನ ಘೂರಿ :—** ಇವನು ಮೊದಲಿನ ಐದು ಸುಲ್ತಾನರ ಕಾಲದಲ್ಲಿ ಮುಖ್ಯಪ್ರಧಾನನಾಗಿದ್ದನು. ಇವನೊಳ್ಳೆ ಅನುಭವಿಕ ಮತ್ತು ಧೋರಣಿ ಮುತ್ಸದ್ದಿಯಾಗಿದ್ದನು. 'ದುರ್ಗಾದೇವಿಯ ಬರ'ದ ತೀಕ್ಷ್ಣತೆಯನ್ನು ಕಡಿಮೆ ಮಾಡುವದಕ್ಕಾಗಿ ಅವನು ಮಾಡಿದ ಪ್ರಯತ್ನವು ನಿಜವಾಗಿ ಆಶ್ಚರ್ಯಕರವಾಗಿದ್ದಿತು. ರಾಜ್ಯದಲ್ಲಿಯ ಮುಖ್ಯ ಮುಖ್ಯ ಸ್ಥಳಗಳಲ್ಲಿ ಇಸ್ಲಾಮ ಧರ್ಮದ ಅನಾಥ ಮಕ್ಕಳಿಗೆ ಮತ್ತು ಉಳಿದ ಬಡಬಗ್ಗರಿಗೆ ಅನ್ನ, ವಸ್ತ್ರ ಮತ್ತು ಶಿಕ್ಷಣ ಪುಕ್ಕಟೆ ದೊರೆಯುವಂತೆ ಅವನು ವ್ಯವಸ್ಥೆ ಮಾಡಿದನು. ಅದರಂತೆ ಕುರುಡರಿಗೆ, ಕುರಾಣ ಪಠಣ ಮಾಡುವವರಿಗೆ, ಎಲ್ಲ ಬಗೆಯ ಆರ್ಥಿಕ ಸಹಾಯವನ್ನು ಸಲ್ಲಿಸಿದನು.

ಘೂರಿಯು ರಾಜ್ಯವನ್ನು ಪುನರ್ಘಟಿಸಿ ಆಡಳತೆಯನ್ನು ಸುಧಾರಿಸಿದನು.

ಆಡಳಿತ ಚೆನ್ನಾಗಿ ನಡೆಯಬೇಕೆಂದು ಅವನು ಎಂಟು ಜನ ಮಂತ್ರಿಗಳನ್ನು ನೇಮಿಸಿ ಅವರಿಗೆ ಬೇರೆ ಬೇರೆ ಕೆಲಸಗಳನ್ನು ಹಂಚಿಕೊಟ್ಟನು. ಶಿವಾಜಿಯ ಅಷ್ಟಪ್ರಧಾನ ಮಂಡಳದಂತಹ ಪದ್ಧತಿ ಇದಾಗಿತ್ತು. ಘುರಿಯ ಈ ಪದ್ಧತಿಯ ಅನುಕರಣವನ್ನು ದಕ್ಷಿಣದಲ್ಲಿಯ ಉಳಿದ ಸುಲ್ತಾನರೂ ಮಾಡಿದರು. ಕರ್ತೃತ್ವಶಾಲಿಯಾಗಿದ್ದ ಈ ಪ್ರಧಾನಿಯು ೧೦೪ ವರ್ಷ ವಯಸ್ಸಿನವನಾಗಿ ೧೩೯೭ ರಲ್ಲಿ ಪೈಗಂಬರವಾಸಿಯಾದನು.

೨) **ಖ್ವಾಜಾ ಮಹಮದ ಗವಾನ** :— ಬಹಮನಿ ರಾಜ್ಯದ ಎರಡನೇ ಕರ್ತೃತ್ವಶಾಲಿಯಾದ ಪ್ರಧಾನ ಮಹಮ್ಮೂದ ಗವಾನನು ಮೂವರು ಸುಲ್ತಾನರ ಕಾಲದಲ್ಲಿ ಪ್ರಧಾನಿಯಾಗಿದ್ದನು (೧೪೫೭–೮೧). ಇವನು ನಿರಲಸತನದಿಂದ ಮತ್ತು ನಿಷ್ಠೆಯಿಂದ ರಾಜ್ಯಕ್ಕೆ ಸೇವೆ ಸಲ್ಲಿಸಿ ಆದರ ವೈಭವವನ್ನು ಬೆಳಗಿಸಿದನು. ಚತುರ ಮುತ್ಸದ್ದಿಯಾಗಿದ್ದಲ್ಲದೆ ಗವಾನನು ಕುಶಲ ಸೇನಾನಿಯೂ ಆಗಿದ್ದನು. ದೊಡ್ಡ ದೊಡ್ಡ ದಾಳಿಗಳ ನೇತೃತ್ವವನ್ನು ಸ್ವತಃ ವಹಿಸಿ ಗವಾನನು ರಾಜ್ಯದ ವಿಸ್ತಾರವನ್ನು ಬಹಳ ಹೆಚ್ಚಿಸಿದನು. ಇವನ ಕಾಲದಲ್ಲಿಯಷ್ಟು ಬಹಮನಿ ರಾಜ್ಯವು ಎಂದೂ ವಿಸ್ತಾರ ಆಗಿರಲಿಲ್ಲ. ಗವಾನನು ಕೊಂಕಣ ಪ್ರಾಂತದ ಮೇಲೆ ದಾಳಿ ಮಾಡಿ ಅಲ್ಲಿ ತನ್ನ ಅಧಿಕಾರವನ್ನು ಪ್ರಸ್ಥಾಪಿಸಿದನು. ಎರಡು ವರ್ಷ ಒಳ್ಳೇ ಜಿಗುಟುತನದಿಂದ ಯುದ್ಧವನ್ನು ಮಾಡಿ ಅವನು ಸಂಗಮೇಶ್ವರದ ಪ್ರಬಲ ಅರಸನಾಗಿದ್ದ ಶಂಕರರಾಯನ ಪ್ರಸಿದ್ಧ ಖೇಳಣ ಕಿಲ್ಲೆಯನ್ನು ವಶಪಡಿಸಿಕೊಂಡನು. ಈ ದಾಳಿಯಲ್ಲಿ ಅವನಿಗೆ ಬಹುಮೂಲ್ಯ ಸಾಮುಗ್ರಿ ಮತ್ತು ವಿಪರೀತ ಸಂಪತ್ತು ದೊರೆಯಿತು.

ವಿಜಯನಗರದ ಅರಸರು ವಶಪಡಿಸಿಕೊಂಡಿದ್ದ ಗೋವೆಯ ಮಹತ್ವದ ಬಂದರವನ್ನು ಅವನು ಗೆದ್ದನು. ಮುಂಬಯಿಂದ ಗೋವೆಯ ವರೆಗಿನ ಪಶ್ಚಿಮ ದಂಡೆಯಲ್ಲಿಯ ಪಟ್ಟಿಯನ್ನು ಮತ್ತು ಕೋಕೋನಾಡದಿಂದ ಕೃಷ್ಣೆಯ ಮುಖದವರೆಗಿನ ಪೂರ್ವಭಾಗದಲ್ಲಿಯ ಪ್ರದೇಶವನ್ನೆಲ್ಲ ಗವಾನನ ಪರಿಶ್ರಮದಿಂದ ಬಹಮನೀ ರಾಜ್ಯದಲ್ಲಿ ಸಮಾವಿಷ್ಟಮಾಡಿತು. ಸುಂದರ ಮಂದಿರಗಳು, ವಿಪರೀತ ಸಂಪತ್ತು ಇವುಗಳ ಬಗ್ಗೆ ಪ್ರಸಿದ್ಧವಿದ್ದ ಕಾಂಚಿ ನಗರವು ಬಹಮನಿ ಸೈನ್ಯದವರ ವಶವಾಯಿತು.

ಗವಾನನ ಕಾಲಕ್ಕೆ ನಿಕಿಟಿನ್‌ನೆಂಬ ರಶಿಯದ ಪ್ರವಾಸಿಯು ಬಂದುಹೋದನು. ಸರ್ವಸಾಮಾನ್ಯ ಜನತೆಯ ದುಃಖಮಯ ಜೀವನ ಮತ್ತು ಅವರು ಪಡುತ್ತಿರುವ ಕಷ್ಟವನ್ನೂ ಶ್ರೀಮಂತ ಜನರ ವಿಲಾಸೀ ಜೀವನವನ್ನೂ ಅವನು ಸುಂದರವಾಗಿ ವರ್ಣಿಸಿರುವನು ( ಅವತರಣಿಕೆ ನೋಡಿರಿ ).

ಸ್ವಪರಾಕ್ರಮದಿಂದ ಸಂಪಾದಿಸಿದ ವಿಸ್ತೃತ ರಾಜ್ಯದ ಆಡಳಿತೆಯು ವ್ಯವಸ್ಥಿತ ರೀತಿಯಿಂದ ಸಾಗಬೇಕೆಂದು ಗವಾನನು ರಾಜ್ಯದ ಪುನರ್ರಚನೆ ಮಾಡಿದನು. ಈ ವರೆಗೆ ಕಲ್ಬುರ್ಗಿ, ದೌಲತಾಬಾದ, ವರ್‍ಹಾಡ ಮತ್ತು ಬೀದರ ಎಂದು ನಾಲ್ಕೇ ವಿಭಾಗಗಳಿದ್ದವು. ಆದರೆ ಗವಾನನು ಇವುಗಳಲ್ಲಿ ಎರಡೆರಡು ಭಾಗಮಾಡಿ ಒಟ್ಟು ಎಂಟು ವಿಭಾಗಗಳನ್ನು ಮಾಡಿದನು. ಇವುಗಳ ಮೇಲೆಲ್ಲ ಸ್ವತಂತ್ರ ಅಧಿಕಾರಿಗಳನ್ನು

ನೇಮಿಸಿದನು. ಅವರ ಮೇಲೆ ಮಧ್ಯವರ್ತಿ ಸರಕಾರದ ಲಕ್ಷ್ಯವುಳಿಯುವಂತೆಯೂ ಯೋಜಿಸಿದನು. ಅದರಂತೆ ಈ ಅಧಿಕಾರಿಗಳೂ ಭಾರವಾಗಿ ಪರಿಣಮಿಸಬಾರದೆಂದು ಅವರಿಗೆ ಮೊದಲಿದ್ದ ಅಧಿಕಾರವನ್ನು ಕಡಿಮೆ ಮಾಡಿದನು. ಲಂಚ ತಿನ್ನುವ ಅಧಿಕಾರಿಗಳಿಗೆ ಉಗ್ರಶಾಸನವನ್ನು ವಿಧಿಸಿ ಅವನು ಆಡಳಿತೆಯಲ್ಲಿ ಶಿಸ್ತನ್ನು ಉಂಟುಮಾಡಿದನು. ಈ ಬಗೆಯ ಕ್ರಾಂತಿಕಾರಕ ಬದಲಾವಣೆ ಮಾಡಿದ ಪ್ರಧಾನಿಯ ವಿರುದ್ಧ ಸರದಾರರು ದೂರು ಹೇಳಿ ಅವನನ್ನು ನಾಶಪಡಿಸಿದ್ದನ್ನು ಈ ಮೊದಲು ಉಲ್ಲೇಖಿಸಲಾಗಿದೆ.

ಗವಾನನು ಒಳ್ಳೆ ಧರ್ಮಶೀಲ ಮತ್ತು ವಿದ್ಯಾಪ್ರೇಮಿಯಾಗಿದ್ದನು. ಬೀದರದಲ್ಲಿ ಅವನು ಒಂದು ಮಹಾವಿದ್ಯಾಲಯವನ್ನು ಸ್ಥಾಪಿಸಿದನು. ಆ ವಿದ್ಯಾಲಯಕ್ಕೆ ದೊಡ್ಡ ದೊಡ್ಡ ಕಾಣಿಕೆಗಳನ್ನು ಕೊಟ್ಟನು. ಅಲ್ಲಿ ಬಡ ವಿದ್ಯಾರ್ಥಿಗಳಿಗೆ ಶಿಕ್ಷಣದ ಸೌಕರ್ಯವನ್ನುಂಟುಮಾಡಿದನು. ಅದರಂತೆಯೆ ಅವನು ತನ್ನ ಗ್ರಂಥಾಲಯದಲ್ಲಿದ್ದ ಮೂರು ಸಾವಿರ ಪುಸ್ತಕಗಳನ್ನು ಸಂದರ್ಶನವೆಂದು ಕಾಣಿಕೆ ಕೊಟ್ಟು ತನ್ನ ವಿದ್ಯಾಪ್ರೇಮವನ್ನು ವ್ಯಕ್ತಪಡಿಸಿದನು. ಇಂದಿಗೂ ಆ ಭವ್ಯ ವಿದ್ಯಾಲಯದ ಅವಶೇಷಗಳನ್ನು ಕಾಣಬಹುದು. ಗವಾನನು ಸರಳ ಜೀವನ ಮತ್ತು ವಿಚಾರಸರಣಿ ಇವುಗಳ ಮೂರ್ತಿಮಂತ ಪ್ರತೀಕನಾಗಿದ್ದನು. ಅವನು ಬಡಬಗ್ಗರಿಗೆ ದಾನಕೊಡುವಾಗ "ಇದು ಅರಸನ ದಾನವಿದೆ, ಇದನ್ನು ಸ್ವೀಕರಿಸಿ ಅರಸನನ್ನು ಆಶೀರ್ವದಿಸಿರಿ" ಎಂದು ಹೇಳುತ್ತಿದ್ದನು. ಗವಾನನ ಕೀರ್ತಿಯು ತುರ್ಕಸ್ತಾನ ಸುಲ್ತಾನನ ವರೆಗೆ ಹಬ್ಬಿದ್ದಿತು.

ಆ ಸುಲ್ತಾನನು ಇವನ ಮಹತ್ವದ ಕೃತ್ಯಗಳಿಗಾಗಿ ಪ್ರಶಂಸೆ ಮಾಡಿ ಬಹುಮಾನಗಳ ಪದವಿಗಳನ್ನು ಸಮರ್ಪಿಸಿದನು. ಗವಾನನ ರಾಜ್ಯಾಡಳಿತೆಯ ಬಗ್ಗೆ ಈಶ್ವರೀ ಪ್ರಸಾದರು ಹೀಗೆ ಬರೆಯುತ್ತಾರೆ– "ರಾಜ್ಯಾಡಳಿತೆಯ ಪ್ರತಿಯೊಂದು ಶಾಖೆಯ ಬಗ್ಗೆ ಅವನು ಸ್ವತಃ ಲಕ್ಷ್ಯಪೂರಯಿಸುತ್ತಿದ್ದನು. ಅದರಂತೆ ಅವನು ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಸುಸ್ಥಿತಿಯಲ್ಲಿರಿಸಿದನು. ಭೂಮಿಯ ಪರಿಶೀಲನ ಮಾಡಿ ಭೂಕಂದಾಯವನ್ನು ಕೂಡಿಸಿದನು. ನ್ಯಾಯವ್ಯವಸ್ಥೆಯನ್ನು ಸುಧಾರಿಸಿದನು. ಶಿಕ್ಷಣಕ್ಕೆ ಉತ್ತೇಜನಕೊಟ್ಟನು. ಲಂಚಗುಳಿತನವನ್ನು ನಿರ್ಮೂಲಗೊಳಿಸಿದನು. ಅದರಂತೆಯೇ ಸೈನ್ಯ ಶಾಖೆಯಲ್ಲಿ ಸುಧಾರಣೆಮಾಡಿ ಅದನ್ನು ಕಾರ್ಯಕ್ಷಮಗೊಳಿಸಿದನು." ಪ್ರಸಿದ್ಧ ಲೇಖಕನಾದ ಮೇಡೋಜ ಟೇಲರನು "ಗವಾನನ ಮರಣದ ನಂತರ ರಾಜ್ಯದಲ್ಲಿಯ ಐಕ್ಯ ಮತ್ತು ಬಲ ಇಲ್ಲದಂತಾಯಿತೆಂಬದರಲ್ಲಿ ಸಂದೇಹವಿಲ್ಲ" ಎಂದು ಬರೆದಿರುವನು.

**ಬಹಮನಿ ರಾಜ್ಯದ ಕೊನೆ :—** ಇ. ಸ. ೧೪೮೧ರ ನಂತರ ಪಟ್ಟಕ್ಕೆ ಬಂದ ಯಾವ ಸುಲ್ತಾನರೂ ಅಷ್ಟೊಂದು ಕರ್ತೃತ್ವಶಾಲಿಗಳಾಗಿರಲಿಲ್ಲ. ದಕ್ಷಿಣದ ಮತ್ತು ಪರದೇಶದ ಪಕ್ಷಗಗಲ್ಲಿ ಬಡಿದಾಟವು ನಿಕರಕ್ಕೆ ಮುಟ್ಟಿ ದೊಡ್ಡ ಯಾದವಿ ಉಂಟಾಗಿತ್ತು; ರಾಜಧಾನಿಯಲ್ಲಿಯೇ ಭಯಂಕರ ರಕ್ತಪಾತವಾಯಿತು. ಈ ಅರಾಜಕತೆ ಮತ್ತು ಅಂದಾಧುಂದಿಯ ಲಾಭ ಪಡೆದು ಮಹತ್ವಾಕಾಂಕ್ಷಿಗಳಾಗಿದ್ದ ಪ್ರಾಂತಾಧಿಕಾರಿಗಳು

ಸ್ವತಂತ್ರರಾದರು. ಇ. ಸ. ೧೪೮೨-೧೫೨೬ ಈ ಕಾಲದಲ್ಲಿ ಬಹಮನೀ ರಾಜ್ಯದಲ್ಲಿ ಐದು ತುಂಡುಗಳಾಗಿ ಆ ರಾಜ್ಯವು ನಾಮಶೇಷವಾಯಿತು. ಆ ಐದು ರಾಜ್ಯಗಳೆಂದರೆ–

೧) ವರ್‍ಹಾಡದ ಇಮಾದಶಾಹಿ (ಇ. ಸ. ೧೪೮೪—೧೫೭೪)
೨) ಬೀದರದ ಬರೀದಶಾಹಿ (ಇ. ಸ. ೧೪೮೭—೧೬೧೯)
೩) ವಿಜಾಪುರದ ಆದಿಲಶಾಹಿ (ಇ. ಸ. ೧೪೮೯—೧೬೮೬)
೪) ಆಹಮ್ಮದ ನಗರದ ನಿಜಾಮಶಾಹಿ (ಇ, ಸ. ೧೪೯೦—೧೬೩೬)
೫) ಗೋವಳಕೊಂಡದ ಕುತುಬಶಾಹಿ (ಇ. ಸ. ೧೫೧೨—೧೬೮೭)

## ಅವತರಣಿಕೆ

ಆಥೆನೇಶಿಯಸ್ ನಿಕಿಟಿನ್‌ನೆಂಬ ರಶಿಯನ್ ವ್ಯಾಪಾರಿ ಪ್ರವಾಸಿಯು ಹಿಂದೀ-ಮಹಾಸಾಗರವನ್ನು ದಾಟಿ, ಗುಜರಾಥ, ಖಂಬಾಯತ ಮಾರ್ಗವಾಗಿ ಚೌಲಬಂದರದಲ್ಲಿ ಇಳಿದನು. ಚೌಲದಿಂದ ಮುಂದೆ ಘಟ್ಟವನ್ನೇರಿ ದಕ್ಷಿಣಕ್ಕೆ ಜುನ್ನರಕ್ಕೆ ಬಂದನು. ಆ ಕಾಲಕ್ಕೆ ಬಹಮನೀ ರಾಜ್ಯದಲ್ಲಿ ಜುನ್ನರವು ಅತ್ಯಂತ ಪ್ರಮುಖವಾದ ನಗರವಾಗಿತ್ತು. ಅವನು ಅಲ್ಲಿಂದ ಮುಂದೆ ಹೋಗಿ ಬೀದರ ರಾಜಧಾನಿಯನ್ನು ಮುಟ್ಟಿದನು. ಅಲ್ಲಿ ಅವನು ನಾಲ್ಕು ವರ್ಷ ಬಾಳಿದನು (ಇ. ಸ. ೧೪೭೦-೭೪). ಬೀದರದ ವೈಭವ-ವನ್ನು ನೋಡಿ ಅವನ ಕಣ್ಣು ಕುಕ್ಕಿದವು. ಚೌಲ, ಖಂಬಾಯತ, ಮತ್ತು ಜುನ್ನರ ನಗರಗಳ ವರ್ಣನೆಯನ್ನು ಅವನು ವಿವರವಾಗಿ ಮಾಡಿದ್ದು ಅದೊಳ್ಳೇ ಮನೋ-ರಂಜಕವಾಗಿದೆ. ನಿಕಿಟಿನ್‌ನು ದೈನಂದಿನ ದಿನಚರಿಯಲ್ಲಿ ಬರೆದ ವಿಷಯಗಳನ್ನೆಲ್ಲ ಸಂಗ್ರಹಿಸಿ ರಶಿಯಾ ಸರಕಾರದವರು "ನಿಕಿಟಿನ್‌ನ ಪ್ರವಾಸ ವೃತ್ತ"ವೆಂಬ ಪುಸ್ತಕವನ್ನು ಇದೇ ತಾನೆ ಪ್ರಸಿದ್ಧಿಸಿರುವರು. ಈ ಗ್ರಂಥದಲ್ಲಿಯ ಕೆಲ ಭಾಗವನ್ನು ಕೆಳಗೆ ಕೊಟ್ಟಿದೆ:– " ಖಂಬಾಯತವು ಗುಜರಾಥದಲ್ಲಿಯ ಒಂದು ಪ್ರಮುಖ ಬಂದರವಿದ್ದು ಅದೊಬ್ಬ ಮುಸಲ್ಮಾನ ಅರಸನ ವಶದಲ್ಲಿದೆ. ಕಾಲಿಕತ್ತ ಬಂದರದಲ್ಲಿ ಪ್ರತಿಯೊಂದು ವಸ್ತು ಬಹಳ ಅಗ್ಗವಾಗಿ ದೊರೆಯುತ್ತದೆ.

"ಬಹಮನೀ ಸುಲ್ತಾನ ಮಹಮದಶಾಹಾ ಕೇವಲ ೨೦ ವರ್ಷ ವಯಸ್ಸಿನವನಾಗಿದ್ದು ಅವನು ಪೂರ್ಣವಾಗಿ 'ಸರದಾರ'ರ ವಶದಲ್ಲಿರುವನು. ಸುಲ್ತಾನನ ರಾಜ್ಯ-ದಲ್ಲಿ ಜನಸಂಖ್ಯೆ ವಿಪುಲವಾಗಿದೆ. ಹಳ್ಳಿಗಳಲ್ಲಿಯ ಜನರು ದೈನ್ಯ ಸ್ಥಿತಿಯಲ್ಲಿದ್ದು ಅವರ ಜೀವನವು ಅತ್ಯಂತ ಕಷ್ಟದಾಯಕವಾಗಿದೆ. ತದ್ವಿರುದ್ಧ ನಗರಗಳಲ್ಲಿದ್ದ ಸರ-ದಾರರು ಧನಾಢ್ಯರಾಗಿದ್ದು ಐಷಆರಾಮದಲ್ಲಿ ಮತ್ತು ವಿಲಾಸದಲ್ಲಿ ಮಗ್ನರಾಗಿರು-ವರು. ಸರದಾರ ಜನರು ಬೆಳ್ಳಿಯ ಮೇಣೆಗಳಲ್ಲಿ ಸಂಚರಿಸುತ್ತಿರುವರು. ಆ ಕಾಲಕ್ಕೆ ಅವರ ಮುಂದೆ ಬಂಗಾರದ ಜೀನು ಮತ್ತು ಝುಲ್ಲರ ಹಾಕಿದ ಇಪ್ಪತ್ತು ಜನ ರಾಹುತರು, ಐದುನೂರು ಕಾಲ್ದಳವು, ಹತ್ತು ಗಾಯಕರು, ರಣಗೊಂಬು ಊದುವವರು ಮೊದಲಾದ ಪರಿವಾರವು ಇರುವದು.

" ತಮ್ಮ ತಾಯಿ ಮತ್ತು ಹೆಂಡತಿಯನ್ನು ಸಂಗಡ ಕರೆದುಕೊಂಡು ಸುಲ್ತಾ-ನನು ಬೇಟೆಗೆ ಹೋಗುತ್ತಿರುವನು. ಆ ಕಾಲಕ್ಕೆ ಆವನ ಸಂಗಡ ೧೦ ಸಾವಿರ ರಾಹುತರು, ಐವತ್ತು ಸಾವಿರ ಕಾಲ್ದಳ, ಬಂಗಾರದ ನೀರು ಕೊಟ್ಟ ಚಿಲಕತ್ತನ್ನು ಸುಂದರ ರೀತಿಯಿಂದ ಕೂಡಿಸಿದ ಇನ್ನೂರು ಆನೆಗಳು, ಇಷ್ಟೊಂದು ಸರಂಜಾಮು ಇರುವದು ".

## ಅಭ್ಯಾಸ

೧. ಬಹಮನೀ ರಾಜ್ಯವನ್ನು ಯಾರು ಯಾವಾಗ ಯಾವ ಪರಿಸ್ಥಿತಿಯಲ್ಲಿ ಸ್ಥಾಪಿಸಿದರು ? ಈ ರಾಜ್ಯಕ್ಕೆ "ಬಹಮನೀ" ಎಂಬ ಹೆಸರು ಏಕೆ ಬಂದಿತು ?

೨. ಫಿರೋಜ ಬಹಾಮನಿಯು ಕರ್ತೃತ್ವಶಾಲಿಯಾದ ಸುಲ್ತಾನನಾಗಿ ಹೋದನೆಂದು ಏಕೆ ಹೇಳುವರು ?

೩. ಗವಾನನು ರಾಜ್ಯದಲ್ಲಿ ಯಾವ ಸುಧಾರಣೆ ಮಾಡಿದನು ? ಅವುಗಳ ಪರಿಣಾಮವೇ-ನಾಯಿತು ?

೪. ಯೋಗ್ಯತೆಯನ್ನು ಹೇಳಿರಿ— (ಅ) ಸೈಫುದ್ದೀನ ಘುರಿ. (ಆ) ಗವಾನ.

೫. ನಿಕಿತಿನ್‌ನೆಂಬ ರಶಿಯದ ಪ್ರವಾಸಿಯು ಭಾರತದಲ್ಲಿ ಯಾವ ಭಾಗವನ್ನು ಸಂದರ್ಶಿ-ಸಿದನು ? ಸರದಾರರು ಮತ್ತು ಸಾಮಾನ್ಯ ಜನರ ಜೀವನದ ವಿಷಯದಲ್ಲಿ ಅವನಿಗೆ ಬಂದ ಅನುಭವಗಳೇನು ?

---

# ೭ನೆಯ ಪಾಠ

## ದಕ್ಷಿಣದಲ್ಲಿಯ ಸುಲ್ತಾನರು

**ಪ್ರಾಸ್ತಾವಿಕ :—** ಮಹಮೂದ ಗವಾನನ ಮರಣದ ನಂತರ (೧೪೮೧ ಇಸ್ವಿ) ಅಲ್ಪಾವಧಿಯಲ್ಲಿಯೆ ಬಹಮನಿ ರಾಜ್ಯವು ಕೊನೆಗಂಡು ಅದು ಐದು ರಾಜ್ಯಗಳಾಗಿ ಹೇಗೆ ಒಡೆದು ಹೋಯಿತೆಂಬುದನ್ನು ನೀವು ಹಿಂದಿನ ಪಾಠದಲ್ಲಿ ಓದಿದ್ದೀರಿ. ಇದಕ್ಕೆ ಮೊದಲೇ ತುಘಲಕರ ಆಳಿಕೆಯಲ್ಲಿಯೆ ಮಾಬಾರ, ಮದುರಾ ಮತ್ತು ಖಾನದೇಶ ಎಂಬ ಸ್ವತಂತ್ರ ಮುಸಲ್ಮಾನಿ ರಾಜ್ಯಗಳು ನಿರ್ಮಾಣವಾಗಿದ್ದವು. ಈ ಎಲ್ಲ ರಾಜ್ಯ ಗಳ ಇತಿಹಾಸವನ್ನು ನಾವಿಲ್ಲಿ ನೋಡೋಣ.

ಬಹಮನಿ ರಾಜ್ಯದ ಅಂತ್ಯವಾಗಿ ಹುಟ್ಟಿಕೊಂಡ ಐದು ರಾಜ್ಯಗಳಲ್ಲಿ ವರ್ಹಾಡದ ಇಮಾದಶಾಹಿ ಹಾಗೂ ಬೀದರದ ಬರೀದಶಾಹಿ ರಾಜ್ಯಗಳು ಬಹುಕಾಲ ಬಾಳಲಿಲ್ಲ. ಅಹಮ್ಮದನಗರದ ಸುಲ್ತಾನನು ಇಮಾದಶಾಹಿಯನ್ನು ೧೫೭೪ರಲ್ಲಿ ಕೊನೆಗಾಣಿಸಿ-ಬಿಟ್ಟನು. ಇತ್ತ ವಿಜಾಪುರದ ಆದಿಲಶಾಹನು ಬೀದರದ ರಾಜ್ಯವನ್ನು ೧೬೧೯ರಲ್ಲಿ ಮಣ್ಣುಗೂಡಿಸಿದನು.* ಅಹಮ್ಮದನಗರ ವಿಜಾಪುರ ಮತ್ತು ಗೋವಳಕೊಂಡ ಎಂಬ ಈ ಮಹತ್ವದ ರಾಜ್ಯಗಳು ಬಹುಕಾಲ ಉಳಿದವು. ಅಹಮ್ಮದನಗರದ ರಾಜ್ಯವನ್ನು ಮೊಗಲ ಬಾದಶಾಹನಾದ ಶಾಹಾಜಹಾನನು ೧೬೩೬ರಲ್ಲಿ ತನ್ನ ರಾಜ್ಯಕ್ಕೆ ಸೇರಿಸಿ ಬಿಟ್ಟನು. ವಿಜಾಪುರ ಮತ್ತು ಗೋವಳಕೊಂಡ ರಾಜ್ಯಗಳನ್ನು ಔರಂಗಜೇಬನು

ಸನ್ ೧೬೮೬ ಮತ್ತು ೧೬೮೭ರಲ್ಲಿ ನಿರ್ನಾಮಮಾಡಿದನು.

ನಿಜಾಮಶಾಹಿಯು ೧೪೯ ವರ್ಷ, ಕುತುಬಶಾಹಿಯು ೧೬೯ ವರ್ಷ, ಆದಿಲ ಶಾಹಿಯು ೧೯೭ ವರ್ಷ ಬಾಳಿದವು. ಈ ಮೂರೂ ರಾಜ್ಯಗಳು ಸೇರಿ ಮಹಾರಾಷ್ಟ್ರದ ಬಹುಭಾಗವನ್ನೂ ಆಂಧ್ರ ಕರ್ನಾಟಕಗಳ ಕೆಲಭಾಗವನ್ನೂ ವ್ಯಾಪಿಸಿದ್ದವು.

ಇವಲ್ಲದೆ ಮಾಬಾರ, ಮದುರಾ ಮತ್ತು ಖಾನದೇಶ ಎಂಬ ಮೂರು ಸ್ವತಂತ್ರ ರಾಜ್ಯಗಳು ದಕ್ಷಿಣದಲ್ಲಿದ್ದವು. ಮಾಬಾರ ಮತ್ತು ಮದುರೆಯಲ್ಲಿಯ ರಾಜ್ಯಗಳು ಸ. ೧೩೩೫ರಲ್ಲಿ ಸ್ಥಾಪಿತವಾಗಿ ಸ್ವಲ್ಪಕಾಲ ಬಾಳಿದವು. ಮದುರೆಯ ರಾಜ್ಯವನ್ನು ವಿಜಯನಗರದ ಕಂಪರಾಯನು ಸ. ೧೩೭೮ರಲ್ಲಿ ಗೆದ್ದುಕೊಂಡನು. ಖಾನದೇಶದ ರಾಜ್ಯವು ಫಿರೋಜ ತುಘಲಕನ ಆಳಿಕೆಯಲ್ಲಿ ಸ. ೧೩೯೮ರಲ್ಲಿ ಸ್ಥಾಪಿತವಾಗಿತ್ತು. ಅಕಬರನು ಅವನ್ನು ಇಸ್ವಿ ಸನ್ ೧೬೦೧ ರಲ್ಲಿ ಮೊಗಲ ಸಾಮ್ರಾಜ್ಯಕ್ಕೆ ಸೇರಿಸಿಬಿಟ್ಟನು.

ಬಹಮನಿ ರಾಜ್ಯದ ಅಳಿಗಾಲವಾಗಿ ಅದರೊಳಗಿಂದ ಅಸ್ತಿತ್ವದಲ್ಲಿ ಬಂದ ಐದು ಸ್ವತಂತ್ರ ರಾಜ್ಯಗಳ ಕುರಿತು ಅನುಕ್ರಮವಾಗಿ ಸ್ವಲ್ಪದರಲ್ಲಿ ವಿಚಾರಿಸೋಣ.

**(೧) ವರ್ಹಾಡದ ಇಮಾದಶಾಹಿ** :— ( ಸ. ೧೪೮೪–೧೫೭೪ ) ಬಹಮನೀ ರಾಜ್ಯದ ಪ್ರಭುತ್ವವನ್ನು ನಿರಾಕರಿಸಿ ಸ್ವತಂತ್ರವಾದ ಮೊದಲನೇ ರಾಜ್ಯವೆಂದರೆ ವರ್ಹಾಡದ್ದು. ವರ್ಹಾಡವು ಬಹಮನೀ ರಾಜ್ಯದ ಒಂದು ಮಹತ್ವದ ವರಗಣೆಯಾಗಿತ್ತು. ಗಾವಿಲಗಡದ ( ವರ್ಹಾಡದ ಒಂದು ಭಾಗ ) ಪ್ರಾಂತಾಧಿಕಾರಿ ಇಮಾದಉಲ್ ಮುಲ್ಕನು ಬಹಮನೀ ರಾಜ್ಯದಲ್ಲಿಯ ಅರಾಜಕತೆಯನ್ನು ನೋಡಿ ಸಂಧಿಯನ್ನು ಸಾಧಿಸಿ ತನ್ನ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನು ( ಸ. ೧೪೮೪ ). ಇಮಾದಉಲ್ ಮುಲ್ಕನು ಮೊದಲು ಆಂಧ್ರ ಬ್ರಾಹ್ಮಣನಿದ್ದನು. ಇಮಾದನು ಖಾನ ದೇಶದ ಮತ್ತು ಗುಜರಾತದ ಸುಲ್ತಾನರ ಸಹಾಯ ಪಡೆದುಕೊಂಡು ನಿಜಾಮ ಶಾಹಿಯ ಆಕ್ರಮಣವನ್ನು ತಡೆಗಟ್ಟಲು ನಿಕರದ ಪ್ರಯತ್ನ ಮಾಡಿದನು. ಆದರೆ ಆತನಿಗೆ ಯಶ ದೊರೆಯಲಿಲ್ಲ. ಕೊನೆಗೆ ಅಹಮದನಗರದ ನಿಜಾಮಶಾಹನು ಆ ರಾಜ್ಯವನ್ನು ಗೆದ್ದುಕೊಂಡನು ( ಸ. ೧೫೭೪ ).

**(೨) ಬೀದರದ ಬರೀದಶಾಹಿ** :— ( ಸ. ೧೪೮೭–೧೬೧೯ ) ಬಹಮನಿ ರಾಜ್ಯದ ಸುಲ್ತಾನನಾಗಿದ್ದ ಮಹಮ್ಮದಶಾಹನ ಮುಖ್ಯ ಪ್ರಧಾನನಾದ ಕಾಸೀಮ ಬರೀದನು ತಾನೇ ಸರ್ವಾಧಿಕಾರವನ್ನು ವಹಿಸಿ ಸ್ವತಂತ್ರ ರೀತಿಯಿಂದ ಆಡಳತೆಯನ್ನು ನಡೆಸಿದನು. ಸುಲ್ತಾನನು ನಾಮಧಾರಿಯಾಗಿದ್ದನು. ಕಾಸೀಮ ಬರೀದ ಹಾಗೂ ಅವನ ಮಗ ಅಮೀರ ಇವರಿಬ್ಬರೂ ಪಟ್ಟವನ್ನಾಕ್ರಮಿಸದೆ ಸರ್ವಾಧಿಕಾರವನ್ನು ನಡೆಸಿದರು. ಬಹಮನೀ ರಾಜ್ಯದ ಕೊನೆಯ ಸುಲ್ತಾನನಾದ ಕಲೀಮ ಉಲ್ಲಾನು ತನ್ನ ಸುರಕ್ಷಿತತೆಗಾಗಿ ರಾಜಧಾನಿಯಿಂದ ಪಲಾಯನ ಹೇಳಿದನು. ಆಗ ಅಮೀರನು ಸ ೧೫೨೬ರಲ್ಲಿ ತನ್ನ ಬಾಹ್ಯನಟನೆಯನ್ನೆಲ್ಲ ನಿಲ್ಲಿಸಿ, ತಾನೇ ಸುಲ್ತಾನನಿರುವದಾಗಿ ಘೋಷಿಸಿದನು. ಮುಂದೆ ಬರೀದ ಸುಲ್ತಾನರ ಈ ರಾಜ್ಯವನ್ನು ವಿಜಾಪುರದ ಆದಿಲಶಾಹನು ಸ. ೧೬೧೯ರಲ್ಲಿ ಜಯಿಸಿದನು.

**( ೩ ) ಅಹಮ್ಮದನಗರದ ನಿಜಾಮಶಾಹಿ :—** ( ೧೪೯೦—೧೬೩೬ )
ಬಹಮನೀ ಸುಲ್ತಾನರ ಕರ್ತೃವ್ಯದಕ್ಷ ಪ್ರಧಾನನಾದ ಮಹಮೂದ ಗವಾನನ ಮರಣದ ನಂತರ ದಕ್ಷಿಣದ ಪಕ್ಷದ ಪ್ರಮುಖನಾದ ನಿಜಾಮ ಉಲ್ಮುಲ್ಕ ಬಹಿರೀ ಎಂಬ ಸರದಾರನು ಪ್ರಧಾನನಾದನು. ( ಈತನು ಮೊದಲಿಗೆ ಹಿಂದೂ ಇದ್ದನು. ) ಮುಂದೆ ರಾಜಧಾನಿಯಲ್ಲಿ ನಡೆದ ಒಳಜಗಳದಲ್ಲಿ ಈತನು ಹತನಾದನು. ಈತನ ಮಗ ಮಲೀಕ ಅಹಮ್ಮದನು ಜುನ್ನರ ಪ್ರಾಂತದ ಪ್ರಮುಖ ಅಧಿಕಾರಿಯಾಗಿದ್ದನು. ಮಲೀಕನು ಜುನ್ನರದ ಸುತ್ತುಮುತ್ತಲಿನ ಪ್ರದೇಶವನ್ನು ವಶಪಡಿಸಿಕೊಂಡು ತನ್ನ ಅಧಿಕಾರವನ್ನು ಹೆಚ್ಚಿಸಿಕೊಂಡನು. ಆಗ ಸುಲ್ತಾನನು ಆತನ ಸೊಕ್ಕು ಮುರಿಯಲೆಂದು ಕಳಿಸಿದ ಸೈನ್ಯವನ್ನು ಮಲೀಕನು ಸೋಲಿಸಿಬಿಟ್ಟು ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನು ( ಸ. ೧೪೯೦ ). ಈತನು ಅಹಮ್ಮದ ನಿಜಾಮಶಾಹ ಎಂಬ ಹೆಸರನ್ನು ಧಾರಣ ಮಾಡಿದ್ದರಿಂದ ಈ ಮನೆತನಕ್ಕೆ ನಿಜಾಮಶಾಹಿ ಎಂಬ ಹೆಸರುಂಟಾಯಿತು.

ಪ್ರಾರಂಭದಲ್ಲಿ ಈ ಸುಲ್ತಾನನ ರಾಜಧಾನಿಯು ಜುನ್ನರದಲ್ಲಿಯೇ ಇತ್ತು. ಆತನು ಬೇಗನೆ ತನ್ನ ರಾಜಧಾನಿಯನ್ನು ಅಹಮ್ಮದನಗರಕ್ಕೆ ಬದಲಿಸಿದನು. ಅಹಮ್ಮದನಗರವು ಸೈನಿಕ ಹಾಗೂ ಆಡಳಿತದ ದೃಷ್ಟಿಯಿಂದ ಸೌಕರ್ಯವುಳ್ಳದ್ದಾಗಿತ್ತು. ಬಳಿಕ ಅವನು ದೌಲತಾಬಾದದ ಭದ್ರವಾದ ಕೋಟೆಯನ್ನು ವಶಪಡಿಸಿಕೊಂಡು ತನ್ನ ರಾಜ್ಯವನ್ನೂ ಬಹಳಷ್ಟು ಭದ್ರವಾಗಿಸಿದನು.

ಅಹಮ್ಮದ ನಿಜಾಮಶಾಹನ ನಂತರ ಬುರ್ಹಾಣ ನಿಜಾಮಶಾಹನು ಪಟ್ಟಕ್ಕೆ ಬಂದನು ( ಸನ್ ೧೫೦೮–೧೫೫೩ ) ನೆರೆಹೊರೆಯ ಅರಸರೊಂದಿಗೆ ಯುದ್ಧ ಮಾಡುವದರಲ್ಲಿಯೇ ಈತನು ಬಹುಕಾಲ ಕಳೆಯಬೇಕಾಯಿತು. ಈತನು ವಿಜಯನಗರದ ಅರಸರ ಸಹಾಯವನ್ನು ಪಡೆದುಕೊಂಡು ವಿಜಾಪುರದ ಆದಿಲಶಾಹಿ ರಾಜ್ಯದಮೇಲೆ ದಾಳಿಮಾಡಿದನು. ವಿಜಯನಗರದ ಅರಸರೂ ದಕ್ಷಿಣದ ಈ ಸುಲ್ತಾನರಿಗೆ ಪ್ರಸಂಗ ಬಂದಂತೆ ಒಬ್ಬರ ವಿರುದ್ಧ ಇನ್ನೊಬ್ಬರಿಗೆ ಸಹಾಯ ಮಾಡುತ್ತ ತಮ್ಮ ಹಿತವನ್ನು ಸಾಧಿಸಿಕೊಳ್ಳುತ್ತಿದ್ದರು. ಬುರ್ಹಾಣ ನಿಜಾಮಶಾಹನ ಆಳಿಕೆಯಲ್ಲಿ ಮರಾಠಾ ಸರದಾರರ ಮಹತ್ವವು ಹೆಚ್ಚುತ್ತ ನಡೆದು ದರಬಾರದಲ್ಲಿ ಅವರಿಗೆ ಮಹತ್ವದ ಹುದ್ದೆಗಳು ದೊರೆಯಹತ್ತಿದವೆಂಬುದು ಗಮನಾರ್ಹವಾಗಿದೆ.

ಅನಂತರದ ಕಾಲದಲ್ಲಿ ಪಟ್ಟಕ್ಕೆ ಬಂದ ಸುಲ್ತಾನರಲ್ಲಿ ದಕ್ಷನಾದವನೊಬ್ಬನೂ ಕಂಡುಬರಲಿಲ್ಲ. ಆದರೆ ಈ ಅವಧಿಯಲ್ಲಿ ನಿಜಾಮಶಾಹಿಯ ಇತಿಹಾಸದಲ್ಲಿ ಉಲ್ಲೇಖನೀಯವಾದ ಇಬ್ಬರು ವ್ಯಕ್ತಿಗಳು ಆಗಿಹೋದರು. ಅವರೆಂದರೆ ಶೂರ ಚಾಂದಬೀಬಿ ಹಾಗೂ ನಿಜಾಮಶಾಹಿಯ ಉದ್ಧಾರಕನಾದ ಮಲಿಕ ಅಂಬರ್.

ನಿಜಾಮಶಾಹನು ಮೊಗಲ ಬಾದಶಹರ ಮಾಂಡಲಿಕತ್ವವನ್ನು ಒಪ್ಪಿಕೊಳ್ಳಲು ನಿರಾಕರಿಸಿದ್ದರಿಂದ ಅಕಬರನು ತನ್ನ ಮಗನಾದ ಮುರಾದನ ಆಧಿಪತ್ಯದಲ್ಲಿ ದೊಡ್ಡದೊಂದು ಸೈನ್ಯವನ್ನು ದಾಳಿಮಾಡಲು ಕಳಿಸಿಕೊಟ್ಟನು (ಸನ್ ೧೫೯೫). ಆ ಕಾಲಕ್ಕೆ

ನಿಜಾಮ ಶಾಹಿಯ ಆಡಳಿತದ ಸೂತ್ರಗಳು ಚಾಂದಬೀಬಿಯ ಕಡೆಗೆ ಇದ್ದವು. ಆಕೆಯು ಸ್ವತಃ ಸೇನಾಧಿಪತ್ಯವನ್ನು ಸ್ವೀಕರಿಸಿ ಗೊಂಡವನದ ದುರ್ಗಾವತಿ ರಾಣಿ-ಯಂತೆ ಕಿಲ್ಲೆಯನ್ನು ಸಂರಕ್ಷಿಸಲು ಶೌರ್ಯದಿಂದ ಕಾದಿದಳು. ಆದರೆ ಯಶ ದೊರೆಯ ಲಿಲ್ಲ. ಚಾಂದಬೀಬಿಯು ವರ್ಹಾಡ ಪ್ರಾಂತವನ್ನು ಬಿಟ್ಟುಕೊಡಲು ಒಪ್ಪಿದ್ದರಿಂದ ಮುರಾದನು ಯುದ್ಧವನ್ನು ನಿಲ್ಲಿಸಿದನು. ಆದರೆ ಒಪ್ಪಂದದ ಕರಾರುಗಳನ್ನು ಉಭಯ ಪಕ್ಷದವರು ಯೋಗ್ಯರೀತಿಯಿಂದ ಪಾಲಿಸಲಿಲ್ಲವಾದ್ದರಿಂದ ಪುನಃ ಯುದ್ಧವು ಪ್ರಾರಂಭ ವಾಯಿತು. ಆಗ ಅಕಬರನೇ ಸ್ವತಃ ದಕ್ಷಿಣಕ್ಕೆ ಬಂದು ಕೋಟೆಗೆ ಮುತ್ತಿಗೆಯನ್ನು ಹಾಕಿದನು. (ಸ. ೧೫೯೯). ಮತ್ತು ಅಲ್ಪಾವಧಿಯಲ್ಲಿಯೆ ಅದನ್ನು ಗೆದ್ದುಕೊಂಡನು (ಸನ್ ೧೬೦೦). ಆದರೆ ಚಾಂದಬೀಬಿಯ ದರ್ಬಾರದಲ್ಲಿಯ ಆಕೆಯ ಶತ್ರುಗಳು ಇದಕ್ಕೆ ಮೊದಲೇ ಆಕೆಯನ್ನು ಸಂಹರಿಸಿದ್ದರು.

ಚಾಂದಬೀಬಿಯ ನಂತರ ನಿಜಾಮಶಾಹಿಯ ಸೂತ್ರಗಳು ಮಲೀಕ ಅಂಬರನ ಕಡೆಗೆ ಬಂದವು. ಈತನು ದಕ್ಷನಾದ ಮುತ್ಸದ್ದಿಯಾಗಿದ್ದನು. ಈತನು ತನ್ನ ರಾಜ್ಯದಲ್ಲಿಯ ಲುಕಜಿ ಜಾಧವ, ಮಾಲೋಜಿ ಭೋಸಲೆ ಮುಂತಾದ ಮರಾಠಾ ಸರದಾರರ ಸಹಾಯವನ್ನು ಪಡೆದುಕೊಂಡು ಮೊಗಲರು ಗೆದ್ದುಕೊಂಡ ಪ್ರದೇಶವನ್ನು ಮುಕ್ತಗೊಳಿಸುವಲ್ಲಿ ವಿಶೇಷ ಯಶಸ್ಸನ್ನು ಸಂಪಾದಿಸಿದನು. ಮೊಗಲರೊಡನೆ ಯುದ್ಧಮಾಡುವಾಗ ಈತನು ಕೂಟಯುದ್ಧದ ಪದ್ಧತಿಯನ್ನು ಅವಲಂಬಿಸಿ ಮೊಗಲ ರಿಗೆ ಏಳು ಕೆರೆಯ ನೀರು ಕುಡಿಸಿದನು. ಮಲಿಕ ಅಂಬರನು ಬಹು ಮುಂಧೋರ-ಣೆಯ ಮುತ್ಸದ್ದಿಯಾಗಿದ್ದನು ದೌಲತಾಬಾದದ ಹತ್ತರ ಖಡಕಿ (ಔರಂಗಾಬಾದ) ಯಲ್ಲಿ ಹೊಸ ರಾಜಧಾನಿಯನ್ನು ಸ್ಥಾಪಿಸಿ ಇವನು ವಿಪನ್ನಾವಸ್ಥೆಯಲ್ಲಿದ್ದ ನಿಜಾಮ ಶಾಹಿಯ ಪುನರುಜ್ಜೀವನ ಮಾಡಿದನು. ಇದು ಅವನ ಮಹತ್ವದ ಕಾರ್ಯವಾಗಿದೆ. ಮೊಗಲರು ವಶಪಡಿಸಿಕೊಂಡ ಪ್ರದೇಶದ ಮೇಲೆ ಮಲಿಕ ಅಂಬರನು ನಡೆಸಿದ ದಾಳಿಯನ್ನು ತಡೆಯುವದಕ್ಕಾಗಿ ಶಹಾಜಾದಾ ಖುರಮ ( ಶಹಾಜಹಾನ )ನು ದಕ್ಷಿಣಕ್ಕೆ ಬಂದನು. ಮಲೀಕ ಅಂಬರನನ್ನು ಸೋಲಿಸಿ ವರ್ಹಾಡ ಹಾಗು ಬಾಲಾ-ಘಾಟದ ಪ್ರದೇಶವನ್ನು ಗೆದ್ದುಕೊಂಡನು. ಅಲ್ಲದೆ ಖಡಕಿಯಲ್ಲಿಯ ಹೊಸ ರಾಜ-ಧಾನಿಯನ್ನು ಧೂಳೀಪಟಮಾಡಿ ೧೮ ಲಕ್ಷ ರೂ. ಗಳ ದಂಡವನ್ನು ವಸೂಲ ಮಾಡಿ-ದನು ( ಸನ್ ೧೬೨೧ ).

ಮೊಗಲ ಸೈನ್ಯವು ಹಿಂತಿರುಗಿದ ಕೂಡಲೆ ಮಲೀಕ ಅಂಬರನು ಪುನಃ ನಿಜಾಮಶಾಹಿಯ ಉದ್ಧಾರ ಕಾರ್ಯದಲ್ಲಿ ತೊಡಗಿದನು. ನಿಜಾಮಶಾಹಿಯ ಮೇಲೆ ದಂಡೆತ್ತಿ ಬಂದ ಮೊಗಲರ ಹಾಗೂ ಆದಿಲಶಾಹಿಯ ಸಂಯುಕ್ತ ಸೇನೆಯನ್ನು ಈತನು ಭಾತವಡಿಯ ಪ್ರಸಿದ್ಧ ಸಮರದಲ್ಲಿ ಸಂಪೂರ್ಣವಾಗಿ ಸೋಲಿಸಿದನು (೧೬೨೪) ಈ ಯುದ್ಧದಲ್ಲಿ ಶಹಾಜಿ ಭೋಸಲೆಯು ಅಪೂರ್ವ ಪರಾಕ್ರಮವನ್ನು ಮೆರೆದು ಮಲಿಕ ಅಂಬರನಿಗೆ ಯುಶ ದೊರಕಿಸಿಕೊಟ್ಟನು. ಈ ವಿಜಯದಿಂದ ಶಹಾಜಿಯ ಪ್ರತಿಷ್ಠೆಯು ಬೆಳೆದು ದಕ್ಷಿಣದ ರಾಜಧಾನಿಯಲ್ಲಿ ಅವನಿಗೆ ವಿಶೇಷ ಮಹತ್ವವು

ಪ್ರಾಪ್ತವಾಯಿತು. ಮಲಿಕ ಅಂಬರನು ೧೬೨೬ ರಲ್ಲಿ ಮಡಿದನು.

ಮಲಿಕ ಅಂಬರನು ನಿಜಾಮಶಾಹಿಯನ್ನು ರಕ್ಷಿಸಲು ಮೊಗಲರೊಡನೆ ಅಖಂಡವಾಗಿ ೨೫ ವರ್ಷಗಳ ವರೆಗೆ ಕಾದಿ ಪರಾಕಾಷ್ಠತೆಯ ಪ್ರಯತ್ನವನ್ನು ಮಾಡಿದನು. ಭೂಕಂದಾಯ ಪದ್ಧತಿಯಲ್ಲಿ ಇವನು ಅನೇಕ ಸುಧಾರಣೆಗಳನ್ನು ಮಾಡಿ ರೈತರ ಹಿತ ಸಾಧಿಸಿದನು. ಸೈನ್ಯದಲ್ಲಿ ಮರಾಠರಿಗೆ ಅಧಿಕಾರದ ಹುದ್ದೆಗಳನ್ನಿತ್ತು ಅವರ ಕರ್ತೃತ್ವ ಶಕ್ತಿಯ ಪ್ರದರ್ಶನಕ್ಕೆ ಅವಕಾಶ ಮಾಡಿದನು. ಈ ಕಾಲದಲ್ಲಿ ಮರಾಠರಿಗೆ ದೊರೆತ ಯುದ್ಧದ ಶಿಕ್ಷಣ ಹಾಗೂ ಅನುಭವಗಳು ಮುಂದೆ ಅವರ ಸ್ವರಾಜ್ಯ ಸ್ಥಾಪನೆಯ ಕಾಲಕ್ಕೆ ಬಹಳ ಸಹಾಯಕಾರಿಯಾದವು.

ಮಲೀಕ ಅಂಬರನ ಮರಣದ ನಂತರ ನಿಜಾಮಶಾಹಿಯಲ್ಲಿ ದೊಡ್ಡ ಒಳ ಜಗಳವು ಹುಟ್ಟಿಕೊಂಡಿತು. ಮೊಗಲ ಬಾದಶಾಹರೂ ದಕ್ಷಿಣವನ್ನೂ ಗೆದ್ದುಕೊಳ್ಳಲು ದೊಡ್ಡ ದೊಡ್ಡ ಸರದಾರರನ್ನು ಕಳಿಸಿದರು. ಮೊಗಲರ ಈ ರಭಸದ ಆಕ್ರಮಣದಿಂದ ನಿಜಾಮಶಾಹಿಯು ನಾಮಶೇಷವಾಗುವ ಚಿಹ್ನೆಗಳು ಕಂಡುಬರಹತ್ತಿದವು. ಆಗ ಶಹಾಜಿ ಮತ್ತು ಆದಿಲಶಹಾ ಇದರಿಬ್ಬರೂ ಸೇರಿಕೊಂಡು ನಿಜಾಮಶಾಹಿಯ ಸಂರಕ್ಷಣೆಗಾಗಿ ಮೊಗಲರೊಂದಿಗೆ ಧೈರ್ಯದಿಂದ ಕಾದತೊಡಗಿದರು. ಆದರೆ ನಿಜಾಮಶಾಹಿಯ ಪ್ರಧಾನನಾದ ಫತ್ತೇಖಾನನೇ ಮೊಗಲರಿಗೆ ಶರಣುಹೋಗಿ ದೌಲತಾಬಾದದ ಕಿಲ್ಲೆಯನ್ನೂ ಬಾಲಕನಾಗಿದ್ದ ನಿಜಾಮಶಾಹನನ್ನೂ ಮೊಗಲರಿಗೆ ಒಪ್ಪಿಸಿದನು (ಸ. ೧೬೩೩). ಆದ್ದರಿಂದ ನಿಜಾಮಶಾಹಿಯು ಇತಿಶ್ರೀಯಾದಂತಾಯಿತು.

ಇಂಥ ಬಿಕ್ಕಟ್ಟಿನ ಪ್ರಸಂಗದಲ್ಲಿಯೂ ಶಹಾಜಿಯು ಎದೆಗುಂದಲಿಲ್ಲ. ನಿಜಾಮಶಾಹಿಯ ಒಬ್ಬ ರಾಜಪುತ್ರನನ್ನು ಕಟ್ಟಿಕೊಂಡು ಜುನ್ನರದಲ್ಲಿ ರಾಜಧಾನಿಯನ್ನು ಸ್ಥಾಪಿಸಿ ನಿಜಾಮಶಾಹಿಯನ್ನು ಪುನರುಜ್ಜೀವಿಸಲು ಪ್ರಯತ್ನಿಸಿದನು. ಕೂಟಯುದ್ಧದಿಂದ ಮೊಗಲರೊಡನೆ ಯುದ್ಧ ನಡೆಸಿ ಅವರಿಗೆ ಚಳ್ಳ ಹಣ್ಣು ತಿನ್ನಿಸಿದನು. ಶಾಹಜಹಾನನು ತಾನೇ ದೊಡ್ಡ ಸೈನ್ಯದೊಂದಿಗೆ ದಕ್ಷಿಣಕ್ಕೆ ಆಗಮಿಸಿದನು (೧೬೩೬) ಮತ್ತು ನಿಜಾಮಶಾಹಿಯ ಅರ್ಧರಾಜ್ಯವನ್ನು ಕೊಡುವ ಆಸೆಯನ್ನು ತೋರಿಸಿ ಆದಿಲಶಾಹಿಯನ್ನು ತನ್ನ ಕಡೆಗೆ ಒಲಿಸಿಕೊಂಡನು. ಹೀಗಾಗಿ ಶಹಾಜಿಯ ಪಕ್ಷದ ಬಲವು ಕುಗ್ಗಿತು ಆದರೂ ಶಹಾಜಿಯು ಅತಿ ಧೈರ್ಯದಿಂದಲೂ ಆತ್ಮವಿಶ್ವಾಸದಿಂದಲೂ ಮೊಗಲರ ವಿರುದ್ಧ ನಡೆಸಿದ ಯುದ್ಧವನ್ನು ಮುಂದುವರಿಸಿದನು. ಆದರೆ ಸ್ವತಃ ಬಾಲ ನಿಜಾಮಶಾಹನೂ ಆತನ ತಾಯಿಯೂ ಮೊಗಲರಿಗೆ ಶರಣಾಗತರಾದ್ದರಿಂದ ಶಹಾಜಿಗೆ ಯುದ್ಧವನ್ನು ನಿಲ್ಲಿಸಬೇಕಾಯಿತು. ಶಹಾಜಹಾನ ಬಾದಶಾಹನು ನಿಜಾಮಶಾಹಿ ರಾಜ್ಯವನ್ನು ಮೊಗಲರ ಸಾಮ್ರಾಜ್ಯಕ್ಕೆ ಸೇರಿಸಿದನು (ಸನ್ ೧೬೩೬). ಆಗ ನಡೆದ ಒಪ್ಪಂದದ ಪ್ರಕಾರ ಶಹಾಜಿಯು ಆದಿಲಶಾಹಿಯ ಸರದಾರನಾದನು.

**ಗೋವಳಕೊಂಡದ ಕುತುಬಶಾಹಿ** (ಸ. ೧೫೧೮-೧೬೮೭) :— ಬಹಮನಿ

ಸುಲ್ತಾನರಲ್ಲಿ ದೊಡ್ಡ ಅಧಿಕಾರದಲ್ಲಿದ್ದ ತುರ್ಕ ಸರದಾರನಾದ ಕುಲಿಶಾಹನು ಈ ಕುತುಬಶಾಹಿಯನ್ನು ಸ್ಥಾಪಿಸಿದನು. ಬಹಮನಿ ರಾಜ್ಯದ ಪೂರ್ವಭಾಗವಾದ ತೆಲಂಗಣಕ್ಕೆ ಈ ಕುಲಿಶಾಹನನ್ನು ಮಹಮ್ಮದ ಗವಾನನು ಸುಭೇದಾರನೆಂದು ನೇಮಿಸಿದ್ದನು. ಗವಾನನ ಕೊಲೆಯನಂತರ ಕುತುಬಶಾಹನೇ ದರಬಾರದ ರಾಜಕಾರಣದಿಂದ ದೂರ ಉಳಿದು ತನ್ನ ಪ್ರಾಂತದಲ್ಲಿ ಸಾಕಷ್ಟು ಸ್ವಾತಂತ್ರ್ಯದಿಂದ ವರ್ತಿಸಹತ್ತಿದನು. ಈತನು ಬಹಮನಿ ಸುಲ್ತಾನರ ಪ್ರಭುತ್ವವನ್ನು ಬಹಿರಂಗವಾಗಿ ನಿರಾಕರಿಸಲಿಲ್ಲ. ಆದರೆ ಮುಂದೆ ೧೫೧೨ ರಲ್ಲಿ ಸಮಯಸಾಧಿಸಿ 'ಕೂಲೀ ಕುತುಬಶಾಹ' ಎಂಬ ಪದವಿಯನ್ನು ಧಾರಣಮಾಡಿ ತಾನು ಸ್ವತಂತ್ರ ರಾಜ್ಯವನ್ನು ಪ್ರಸ್ಥಾಪಿಸಿದ್ದಾಗಿ ಸಾರಿದನು ಬಹಮನಿ ಸುಲ್ತಾನರು ೧೫೨೩ ರಲ್ಲಿ ವರಂಗಲ್ಲಿನಲ್ಲಿ ಹಿಂದುರಾಜರಿಂದ ಗೆದ್ದುಕೊಂಡ ಭಾಗದ ಅವಶೇಷವೇ ಈ ಗೋವಳಕೊಂಡದ ರಾಜ್ಯವಾಗಿತ್ತು. ( ಪ್ರಾಚೀನ ಕಾಲದಲ್ಲಿ ಕಾಕತೀಯರ ರಾಜ್ಯವು ವರಂಗಲ್ಲಿನಲ್ಲಿತ್ತು. )

ಸುಲ್ತಾನ ಕೂಲಿಶಾಹನು ಪರಾಕ್ರಮಿಯಾಗಿದ್ದು ಕುಶಲನಾದ ಆಡಳಿತಗಾರನಿದ್ದನು. ಅವನು ತೆಲಂಗಣದ ಪೂರ್ವಭಾಗವನ್ನು ಗೆದ್ದುಕೊಂಡು ತನ್ನ ರಾಜ್ಯವನ್ನು ಸಮುದ್ರದ ಕರಾವಳಿಯ ವರೆಗೆ ವಿಸ್ತರಿಸಿದನು. ಇವನ ಈ ಏರಾಟಿಕೆಗೆ ಹಿಂದೂ ರಾಜರು ತೋರಿಸಿದ ಪ್ರತಿಭಟನೆಯು ವ್ಯರ್ಥವಾಯಿತು.

ಈತನು ತನ್ನ ರಾಜಧಾನಿಯನ್ನು ವರಂಗಲ್ಲದಿಂದ ಗೋವಳಕೊಂಡಕ್ಕೆ ಸ್ಥಾನಾಂತರಿಸಿದನು. ಈ ಪಟ್ಟಣವು ಬೇಗನೆ ಬೆಳೆದು ಸಮೃದ್ಧವಾದ ಭದ್ರವಾದ ಪಟ್ಟಣವಾಯಿತು.

ಕೂಲಿಶಾಹನ ಕಾಲದಲ್ಲಿ ರಾಜ್ಯವು ಉತ್ಕರ್ಷಹೊಂದಿತು. ಆತನ ರಾಜ್ಯದಲ್ಲಿ ಸುಖಶಾಂತಿಗಳು ನೆಲಸಿದ್ದವು. ಕೂಲಿಶಾಹನು ತನ್ನ ೯೦ನೇ ವರ್ಷದ ವಯಸ್ಸಿನಲ್ಲಿ ಮರಣಹೊಂದಿದನು ( ಸ. ೧೫೪೩ ).

ಅನಂತರ ಜಮಶೀದ ( ೧೫೪೩–೫೦ ) ಮತ್ತು ಇಬ್ರಾಹಿಮ ( ೧೫೫೦-೮೦ ) ಎಂಬಿಬ್ಬರು ಸುಲ್ತಾನರಾಗಿಹೋದರು. ಇಬ್ರಾಹಿಮನು ಪ್ರಜಾಹಿತದಕ್ಷನಾದ ಸುಲ್ತಾನನಾಗಿದ್ದನು. ಮುಲ್ಕಿ ಹಾಗೂ ಸೈನ್ಯಶಾಖೆಯಲ್ಲಿ ಇವನು ಹಿಂದುಗಳಿಗೆ ಮಹತ್ವದ ಹುದ್ದೆಗಳನ್ನು ಕೊಟ್ಟು ಅವರನ್ನು ಸನ್ಮಾನಪೂರ್ವಕ ನಡೆಸಿಕೊಂಡನು. ಆತನು ಕಟ್ಟಿಸಿದ ಭವ್ಯ ಕಟ್ಟಡಗಳು, ಕೆರೆಗಳು, ಮಸೀದಿಗಳು, ಪಾಠಶಾಲೆಗಳು ಮುಂತಾದವುಗಳಿಂದ ಆತನ ರಾಜ್ಯದ ವೈಭವವು ಹೆಚ್ಚಿತೆಂಬಲ್ಲಿ ಸಂದೇಹವಿಲ್ಲ.

ಇಬ್ರಾಹಿಮನ ನಂತರ ಪಟ್ಟಕ್ಕೆ ಬಂದ ಮಹಮ್ಮದ ಕೂಲಿಯು ಸ. ೧೫೮೦ ರಿಂದ ೧೬೧೧ ರ ವರೆಗೆ ರಾಜ್ಯವಾಳಿದನು. ಇವನು ತನ್ನ ರಾಜಧಾನಿಯನ್ನು ಗೋವಳಕೊಂಡದಿಂದ ಭಾಗಾನಗರಕ್ಕೆ ( ಇಂದಿನ ಹೈದರಾಬಾದ )ಕ್ಕೆ ಸ್ಥಳಾಂತರಿಸಿದನು ( ೧೫೮೯ ). ಆಗ ಭಾಗಾನಗರವು ವೈಭವಶಾಲಿ ನಗರವಾಗಿ ಬೆಳೆಯುತ್ತ ಬಂದಿತು.

ಸುಲ್ತಾನನು ನಗರಕ್ಕೆ ನೀರಿನ ಪೂರೈಕೆಯನ್ನು ಸಾಕಷ್ಟು ಪ್ರಮಾಣದಿಂದ ಒದಗಿಸಿದ್ದಲ್ಲದೆ ಅರಮನೆ, ಉದ್ಯಾನಗಳು, ಪಾಠಶಾಲೆಗಳು, ಮಸೀದಿಗಳನ್ನು ಕಟ್ಟಿಸಿ ನಗರದ ಸೌಂದರ್ಯವನ್ನು ಹೆಚ್ಚಿಸಿದನು.

ಅಬ್ದುಲ್ಲಾ ಕುತುಬಶಾಹಾ (೧೬೧೧–೧೬೫೮). ಈತನ ಆಳಿಕೆಯಲ್ಲಿ ರಾಜ್ಯದ ಸೂತ್ರಗಳೆಲ್ಲ ಮೀರ ಜುಮ್ಲಾ ಎಂಬ ಮಂತ್ರಿಯ ಕೈಯಲ್ಲಿದ್ದವು. ಮೀರ ಜುಮ್ಲಾನು ಮೂಲತಃ ಇರಾಣದವನು. ತನ್ನ ದೈವಪರೀಕ್ಷೆಗಾಗಿ ವರ್ತಕನೊಬ್ಬನ ಸಂಗಡ ಭಾರತಕ್ಕೆ ಬಂದನು. ಇರಾಣದಿಂದ ಅನೇಕ ಸಾಹಸಿಗಳು ಭಾರತಕ್ಕೆ ಬರುತ್ತಿದ್ದುದು ವಿದಿತವೇ ಇದೆ. ಗವಾನ ಮತ್ತು ಗಿಯಾಸುದ್ದೀನ (ನೂರಜಹಾನಳ ತಂದೆ) ಇವರಾದರೂ ಅಂಥ ಸಾಹಸಿಗಳೇ.

ಮೀರ ಜುಮ್ಲಾನು ವ್ಯಾಪಾರದಲ್ಲಿ ಹಾಗು ವಜ್ರಗಳ ಗಣಿಗಳನ್ನು ತೋಡಿ-ಸುವ ಉದ್ದಿಮೆಯಲ್ಲಿ ಅಪಾರ ಸಂಪತ್ತನ್ನು ಗಳಿಸಿದನು. ಗೋವಳಕೊಂಡದ ರಾಜ್ಯದಲ್ಲಿಯ ಇಂಥ ಅನೇಕ ಗಣಿಗಳು ಈತನ ಒಡೆತನದಲ್ಲಿದ್ದವು. ಈತನು ತನ್ನ ಸಂಪತ್ತಿಯ ಬಲದಿಂದ ಹಾಗು ಕರ್ತೃತ್ವಶಕ್ತಿಯಿಂದ ಕುತುಬಶಾಹಿಯಲ್ಲಿ ಪ್ರಬಲ ಸರದಾರನಾದನು.

ಆದಿಲಶಾಹಿಯ ಸಹಕಾರವನ್ನು ಪಡೆದುಕೊಂಡು ಕರ್ನಾಟಕದಲ್ಲಿ ರಾಜ್ಯವನ್ನು ವಿಸ್ತರಿಸುವದಕ್ಕಾಗಿ ಕುತುಬಶಾಹನು ಮೀರ ಜುಮ್ಲಾನನ್ನು ಕಳಿಸಿಕೊಟ್ಟನು. ಮೀರ ಜುಮ್ಲಾನು ಚಂದ್ರಗಿರಿ ಅರಸನ ಅಧೀನದಲ್ಲಿದ್ದ ವೆಲ್ಲೂರ ಕಿಲ್ಲೆಯನ್ನು ಮುತ್ತಿ ಆದಿಲಶಾಹನ ಸೈನ್ಯದ ಸಹಾಯದಿಂದ ಅದನ್ನು ಹಿಡಿದುಕೊಂಡನು (ಸ. ೧೬೪೫). ಪೂರ್ವ ಕರಾವಳಿಯಲ್ಲಿಯ ಬಹುಶಃ ಮಹತ್ವದ ಎಲ್ಲ ಸ್ಥಳಗಳು ಈ ದಾಳಿಯಲ್ಲಿ ಕುತುಬಶಾಹನ ಕೈವಶವಾದವು. ಅಪಾರ ಸಂಪತ್ತನ್ನೂ ಬಲಾಢ್ಯ ಸೇನೆಯನ್ನೂ ಹೊಂದಿದ್ದ ಮೀರ ಜುಮ್ಲಾನು ಕರ್ನಾಟಕದಲ್ಲಿ ಸ್ವತಂತ್ರನಂತೆ ವರ್ತಿಸಹತ್ತಿದನು. ಈ ರೀತಿ ಸ್ವತಂತ್ರ ಸೈನ್ಯವನ್ನಿಟ್ಟುಕೊಂಡು ಆತನು ತನ್ನ ಸಾಮರ್ಥ್ಯವನ್ನು ಹೆಚ್ಚಿಸಿ-ಕೊಂಡನು. ಮೀರ ಜುಮ್ಲಾನ ಹೆಚ್ಚಳವನ್ನು ಕಂಡು ಹೆದರಿ ಕುತುಬಶಾಹನು ಆತ-ನನ್ನು ನಾಶಪಡಿಸುವ ವಿಚಾರ ಮಾಡಹತ್ತಿದನು. ಈ ಸುದ್ದಿಯು ತಿಳಿದಕೂಡಲೇ ಮೀರ ಜುಮ್ಲಾನು ಸ್ವಸಂರಕ್ಷಣೆಯ ಪ್ರಯತ್ನವನ್ನು ಪ್ರಾರಂಭಿಸಿದನು. ಆಗ ದಕ್ಷಿಣ-ದಲ್ಲಿ ಮೊಗಲರ ಸುಭೇದಾರನಾಗಿದ್ದ ಔರಂಗಜೇಬನಿಗೆ ಸಹಾಯ ನೀಡುವ ಆಶ್ವಾ-ಸನವನ್ನಿತ್ತು ಆತನಿಗೆ ಗೋವಳಕೊಂಡದ ಮೇಲೆ ದಾಳಿಯನ್ನು ಮಾಡಲು ಸೂಚಿ-ಸಿದನು. ಗೋವಳಕೊಂಡದ ಶಿಯಾ ಪಂಥದ ರಾಜ್ಯವನ್ನು ಮುಳುಗಿಸಬೇಕೆಂಬ ವಿಚಾರವು ಔರಂಗಜೇಬನ ಮನಸ್ಸಿನಲ್ಲಿಯೂ ಇತ್ತು. ಔರಂಗಜೇಬನು ಗೋವಳ-ಕೊಂಡದ ಕೋಟೆಗೆ ಮುತ್ತಿಗೆಯನ್ನು ಹಾಕಿದರೂ ಆಯತ್ತ ಸಮಯಕ್ಕೆ ಬಾದ-ಶಾಹನ ಆಜ್ಞೆಯ ಪ್ರಕಾರ ಆ ಮುತ್ತಿಗೆಯನ್ನು ಹಿಂತೆಗೆದುಕೊಳ್ಳಬೇಕಾಯಿತು. ಕುತುಬಶಾಹನು ಮೊಗಲರ ಮಾಂಡಲಿಕತ್ವವನ್ನು ಒಪ್ಪಿಕೊಂಡು ೨೫ ಲಕ್ಷ ರೂಪಾಯಿ ಕಪ್ಪವನ್ನು ಕೊಟ್ಟನು (೧೬೦೭).

ಗೋವಳಕೊಂಡದ ಕೊನೆಯ ಸುಲ್ತಾನನಾದ ಅಬೂಹಸನ ಕುತುಬಶಾಹಾನು ೧೬೭೨ ರಲ್ಲಿ ಪಟ್ಟಕ್ಕೆ ಬಂದನು. ಇವನ ಆಳಿಕೆಯಲ್ಲಿ ಅಕ್ಕಣ್ಣ-ಮಾದಣ್ಣ ಎಂಬಿಬ್ಬರು ಮುತ್ಸದ್ದಿ ಸರದಾರರ ಕೈಯಲ್ಲಿ ಸಕಲ ರಾಜ್ಯಸೂತ್ರಗಳಿದ್ದವು. ಕುತುಬಶಾಹಿಯುಲ್ಲಿ ಹಿಂದುಗಳಿಗೆ ಸಾಕಷ್ಟು ಗೌರವವಿತ್ತು ಎಂಬುದಕ್ಕೆ ಇದು ಉದಾಹರಣೆಯಾಗಿದೆ.

ಶಿವಾಜಿಯು ತನ್ನ ರಾಜ್ಯಾಭಿಷೇಕದ ಸಮಾರಂಭದ ನಂತರ ೧೬೭೬ರಲ್ಲಿ ಕರ್ನಾಟಕದ ಮೇಲೆ ದಾಳಿಯನ್ನು ಕೈಕೊಂಡನು. ಮತ್ತು ಈ ದಾಳಿಯಲ್ಲಿ ಕುತುಬಶಾಹನ ನೆರವನ್ನು ಪಡೆದನು. ಇವರಿಬ್ಬರ ಸಂಯುಕ್ತ ಸೈನ್ಯಗಳು ಕರ್ನಾಟಕವನ್ನು ಗೆದ್ದುಕೊಳ್ಳಲು ಹೊರಟವು. ಶಿವಾಜಿಯು ಮದ್ರಾಸದವರೆಗಿನ ಪ್ರದೇಶವನ್ನು ಪಾದಾಕ್ರಾಂತಮಾಡಿ ಜಿಂಜಿ, ವೆಲ್ಲೂರ ಮುಂತಾದ ಮಹತ್ವದ ಸ್ಥಳಗಳನ್ನು ಹಿಡಿದುಕೊಂಡನು. ಹೀಗೆಯೆ ಬೆಂಗಳೂರಿನ ಸುತ್ತುಮುತ್ತಲಿನ ಪ್ರದೇಶವನ್ನೂ ವಶಪಡಿಸಿಕೊಂಡನು. ಹೀಗೆ ಗೆದ್ದುಕೊಂಡ ಪ್ರದೇಶದಲ್ಲಿ ಕುತುಬಶಾಹನಿಗೂ ಸ್ವಲ್ಪ ಪಾಲು ದೊರೆಯಿತು.

ಶಿವಾಜಿಯ ಮರಣದ ನಂತರ ದಕ್ಷಿಣದ ದೇಶವನ್ನೆಲ್ಲ ಗೆದ್ದುಕೊಳ್ಳಬೇಕೆಂದು ಔರಂಗಜೇಬನು ಪ್ರಚಂಡ ಸಿದ್ಧತೆಯಿಂದ ಬಂದನು. ೧೬೮೬ರಲ್ಲಿ ಆದಿಲಶಾಹಿಯನ್ನು ಗೆದ್ದುಕೊಂಡು ಕೂಡಲೇ ತನ್ನ ಸೈನ್ಯವನ್ನು ಗೋವಳಕೊಂಡದ ಕಡೆಗೆ ತಿರುಗಿಸಿ ಆ ಕೋಟೆಯನ್ನು ಮುತ್ತಿದನು. ಕುತುಬಶಾಹನ ಅಧಿಕಾರಿಗಳು ವಿಶ್ವಾಸಘಾತ ಮಾಡಿದ್ದರಿಂದ ಔರಂಗಜೇಬನಿಗೆ ಈ ಕಿಲ್ಲೆಯನ್ನು ಗೆದ್ದುಕೊಳ್ಳುವದು ಸುಲಭವಾಯಿತು. ಬಹಮನಿ ರಾಜ್ಯದಲ್ಲಿಯ ಕೊನೆಯ ರಾಜ್ಯವಾದ ಇದನ್ನು ಔರಂಗಜೇಬನು ಮೊಗಲ ಸಾಮ್ರಾಜ್ಯಕ್ಕೆ ಸೇರಿಸಿಬಿಟ್ಟನು ( ಸ. ೧೬೮೭ ).

**ವಿಜಾಪುರದ ಆದಿಲಶಾಹಿ** ( ೧೪೮೯-೧೬೮೬ ):— ಬಹಮನಿ ರಾಜ್ಯದಲ್ಲಿಯ ವಿಜಾಪುರ ಸುಭೆಯ ಅಧಿಕಾರಿಯಾದ ಯುಸುಫನು ಸಮಯ ಸಾಧಿಸಿ ೧೪೮೯ರಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದನು. ಈ ಯುಸುಫನು ತುರ್ಕ ವಂಶದವನಿದ್ದು ಶಿಯಾ ಪಂಥದವನಾಗಿದ್ದನು. ಇವನು ಸುಸಂಸ್ಕೃತನಿದ್ದು ವಿದ್ಯೆ ಕಲೆಗಳ ಬಗೆಗೆ ಅಭಿರುಚಿಯುಳ್ಳವನಾಗಿದ್ದನು. ಇರಾಣ ಮತ್ತು ಕಾನ್‌ಸ್ಟಾಂಟಿನೋಪಲ್‌ಗಳಿಂದ ಬಂದ ಕಲಾಕಾರರಿಗೆ, ವಿದ್ವಾಂಸರಿಗೆ, ಶಿಲ್ಪಜ್ಞರಿಗೆ ಇವನು ತನ್ನ ದರಬಾರದಲ್ಲಿ ಆಶ್ರಯವಿತ್ತು ಉದಾರಹಸ್ತದಿಂದ ಅವರಿಗೆ ನೆರವಾಗುತ್ತಿದ್ದನು.

ಯುಸುಫನು ಮುಕುಂದರಾವನೆಂಬ ಮರಾಠಾ ಸರದಾರನೊಬ್ಬನ ತಂಗಿಯನ್ನು ಮದುವೆಯಾದನು. ಆಕೆಯ ಮಗ ಇಸ್ಮಾಯಿಲನು ಮುಂದೆ ಸುಲ್ತಾನನಾದನು. ಹಿಂದೂ ಧರ್ಮದ ಬಗ್ಗೆ ಇವನು ಸಹಿಷ್ಣುವೂ ಉದಾರಿಯೂ ಆಗಿದ್ದನು. ಹಿಂದುಗಳಿಗೆ ದೊಡ್ಡ ದೊಡ್ಡ ಅಧಿಕಾರದ ಹುದ್ದೆಗಳನ್ನಿತ್ತು ಅವರ ಸಹಕಾರವನ್ನು ಪಡೆದನು. ಜಮಾಖರ್ಚು ಹಾಗೂ ದರಬಾರದ ವ್ಯವಹಾರಕ್ಕಾಗಿ ಈತನು ಮರಾಠಿ ಭಾಷೆಯನ್ನು ಬಳಕೆಯಲ್ಲಿ ತಂದನು.

ಯುಸುಫನು ನಿರ್ವ್ಯಸನಿಯಾಗಿದ್ದನಲ್ಲದೆ ಕರ್ತವ್ಯತತ್ಪರನೂ ಆಗಿದ್ದನು. ಅಲ್ಲದೆ ಪ್ರಾಮಾಣಿಕನೂ ನ್ಯಾಯಪಕ್ಷಪಾತಿಯೂ ಇದ್ದನು. ಇವನು ೧೫೧೦ರಲ್ಲಿ ನಿಧನಹೊಂದಿದನು.

ಆನಂತರ ಪಟ್ಟಕ್ಕೆ ಬಂದ ಸುಲ್ತಾನರಲ್ಲಿ ಇಬ್ರಾಹಿಮ ಆದಿಲಶಾಹಾ (೨ನೇ)ನು ಪ್ರಖ್ಯಾತನೂ ಕರ್ತೃತ್ವಶಾಲಿಯೂ ಆಗಿದ್ದನು (೧೫೮೦—೧೬೨೭). ಇವನು ಪರಾಕ್ರಮಿಯೂ ಲೋಕಪ್ರಿಯನೂ ಆಗಿದ್ದು ಈತನ ರಾಜ್ಯದಲ್ಲಿ ಸುಖಶಾಂತಿಗಳು ಸಮೃದ್ಧವಾಗಿದ್ದವು. ರಾಜಾತೋಡರಮಲ್ಲನ ಕಂದಾಯ ಪದ್ಧತಿಯಲ್ಲಿ ಈತನು ಪರಿಸ್ಥಿತಿಗೆ ಉಚಿತವಾಗಿ ಬದಲಾವಣೆ ಮಾಡಿ ಅದನ್ನು ತನ್ನ ರಾಜ್ಯದಲ್ಲಿ ಬಳಕೆಯಲ್ಲಿ ತಂದನು. ಇದರಿಂದ ರೈತರಿಗೆ ಹಿತವಾಗಿ ರಾಜ್ಯದ ಆರ್ಥಿಕಸ್ಥಿತಿಯು ಸುಧಾರಿಸಿತು. ಧರ್ಮದ ವಿಷಯದಲ್ಲಿ ಯಾರ ಮೇಲೆಯೂ ಒತ್ತಾಯ ಮಾಡಲಿಲ್ಲ. ಹಿಂದೂ, ಕ್ರಿಶ್ಚನ್ ಮುಂತಾದವರನ್ನು ಸಮಾನ ದೃಷ್ಟಿಯಿಂದ ನೋಡುತ್ತಿದ್ದನು. ಪೋರ್ತುಗೀಜರಿಗೆ ವ್ಯಾಪಾರೀ ಸೌಕರ್ಯಗಳನ್ನಿತ್ತು ಅವರಿಗೆ ಚರ್ಚುಗಳನ್ನು ಕಟ್ಟಲು ಅನುಮತಿಯನ್ನಿತ್ತನು. ಧರ್ಮಸಹಿಷ್ಣುತೆಯ ವಿಷಯದಲ್ಲಿ ಈತನನ್ನು ಅಕಬರನಿಗೆ ಹೋಲಿಸುತ್ತಿರುವದು ಯೋಗ್ಯವಾಗಿದೆ. ಮುಲಕಿ ಹಾಗೂ ಸೈನ್ಯ ಶಾಖೆಯಲ್ಲಿ ದೊಡ್ಡ ಅಧಿಕಾರಪದಗಳಿಗೆ ಹಿಂದುಗಳನ್ನು ನೇಮಿಸುವ ಧೋರಣವನ್ನು ಅಂಗೀಕರಿಸಿದನು. ಇದರಿಂದ ವಿಜಾಪುರದ ದರಬಾರದಲ್ಲಿ ಹಿಂದುಗಳ ಮಹತ್ವವು ಹೆಚ್ಚಿತು.

ಪ್ರಸಿದ್ಧ ಇಂಗ್ಲೀಷ ಲೇಖಕನಾದ ಮೇಡೋಜ ಟೇಲರನು ಇಬ್ರಾಹಿಮನ ಬಗೆಗೆ ಹೀಗೆ ಬರೆದಿಟ್ಟಿದ್ದಾನೆ

" ರಾಜ್ಯ ಸಂಸ್ಥಾಪಕನಾದ ಯುಸೂಫ ಆದಿಲಶಾಹನನ್ನು ಬಿಟ್ಟರೆ, ಉಳಿದ ಎಲ್ಲ ಸುಲ್ತಾನರಲ್ಲಿ ಇಬ್ರಾಹಿಮ (೨ನೇ)ನು ಬಹು ಕರ್ತೃತ್ವಶಾಲಿ, ಲೋಕಪ್ರಿಯ ಹಾಗು ಅಸಾಮಾನ್ಯ ಯೋಗ್ಯತೆಯ ಸುಲ್ತಾನನಾಗಿದ್ದನು.

ಇಬ್ರಾಹಿಮನ ನಂತರ ಆದಿಲಶಾಹಿಯ ಪಟ್ಟಕ್ಕೆ ಬಂದ ಪ್ರಸಿದ್ಧ ಸುಲ್ತಾನನೆಂದರೆ ಮಹಮ್ಮದ ಆದಿಲಶಾಹನೇ ಸರಿ (೧೬೨೭–೧೬೫೬). ಇವನು ಬಹು ಮಹತ್ವಾಕಾಂಕ್ಷಿಯೂ, ಮುಂಧೋರಣೆಯುಳ್ಳವನೂ ಆಗಿದ್ದನು. ನಿಜಾಮುಶಾಹಿಯ ಪತನದ (ಸ. ೧೬೩೬) ನಂತರ ಮೊಗಲರ ಆಕ್ರಮಣದ ಆಘಾತವು ವಿಜಾಪುರ, ಗೋವಳಕೊಂಡಗಳ ಸುಲ್ತಾನರಿಗೆ ಚನ್ನಾಗಿ ಆಗಹತ್ತಿತು. ಉತ್ತರಕ್ಕೆ ತಮ್ಮ ರಾಜ್ಯವನ್ನು ವಿಸ್ತರಿಸಬೇಕೆಂಬ ಅವರ ಆಶೆ ಈಡೇರುವಂತಿರಲಿಲ್ಲ. ಆದ್ದರಿಂದ ದಕ್ಷಿಣಕ್ಕೆ ಕರ್ನಾಟಕದಲ್ಲಿ ರಾಜ್ಯವಿಸ್ತಾರವನ್ನು ಸಾಧಿಸಿ ತಮ್ಮ ಸಾಮರ್ಥ್ಯವನ್ನು ಕಾಯ್ದುಕೊಳ್ಳಬೇಕೆಂಬ ಧೋರಣವನ್ನು ಉಭಯ ಸುಲ್ತಾನರೂ ಕರಾರುಗಳನ್ನು ಮಾಡಿಕೊಂಡು ಅಂಗೀಕರಿಸಿದರು.

ಕರ್ನಾಟಕದಲ್ಲಿ ರಾಜ್ಯವನ್ನು ಬೆಳೆಸುವದಕ್ಕಾಗಿ ಆದಿಲಶಾಹನು ತನ್ನ ನುರಿತ ಸೇನಾಪತಿಗಳಾದ ರಣದುಲ್ಲಾಖಾನ, ಮುಸ್ತಾಫಖಾನ ಮುಂತಾದವರನ್ನು ಆಗಾಗ

ಕಳಿಸಿಕೊಡುತ್ತಿದ್ದನು. ಅಲ್ಲದೆ ತನ್ನ ದರಬಾರದಲ್ಲಿದ್ದ ಬಲಾಢ್ಯ ಸರದಾರನಾದ ಶಹಾಜಿ ಭೋಸಲೆಯನ್ನು ಇದೇ ಕೆಲಸದ ಮೇಲೆ ಅವರೊಂದಿಗೆ ಕಳಿಸಿಕೊಡುತ್ತಿ-ದ್ದನು. ಕರ್ನಾಟಕದ ಮೇಲೆ ನಡೆದ ಈ ದಾಳಿಗಳಲ್ಲಿ ರಣದುಲ್ಲಾಖಾನನಿಗೆ ಶಹಾ-ಜಿಯ ಸಹಾಯವು ವಿಶೇಷವಾಗಿ ದೊರೆಯಿತು. ವಿಜಯನಗರದ ಪತನದ ನಂತರ ಅಲ್ಲಿಯ ಅರಸುಮನೆತನದವರು ಪೆನುಕೊಂಡೆಯಲ್ಲಿ ರಾಜ್ಯವಾಳುತ್ತಿದ್ದರು. ಇಕ್ಕೇರಿ, ಕಾವೇರಿಪಟ್ಟಣ, ಶ್ರೀರಂಗಪಟ್ಟಣ, ತಂಜಾವರ, ಮದುರಾ ಮುಂತಾದ ಕಡೆಗಳಲ್ಲಿದ್ದ ವಿಜಯನಗರದ ಪ್ರಾಂತಾಧಿಕಾರಗಳು (ನಾಯಕರೆಂಬ ಹೆಸರಿನವರು) ಹೆಚ್ಚುಕಡಿಮೆ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿಕೊಂಡಿದ್ದರು. ಈ ಎಲ್ಲ ಪ್ರಾಂತಾಧಿಕಾರಿಗಳನ್ನು ಆದಿಲಶಾಹಿಯ ಪ್ರಭುತ್ವಕ್ಕೆ ಒಡಂಬಡಿಸುವ ಕೆಲಸವು ಆದಿಲಶಾಹಿಯ ಸೇನಾ-ಪತಿಗಳಿಗೆ ಒಪ್ಪಿಸಲ್ಪಟ್ಟಿತ್ತು. ಸ. ೧೬೩೭–೧೬೫೭ ರ ಕಾಲದಲ್ಲಿ ಈ ಸೇನಾಪತಿ-ಗಳು ಮೇಲಿಂದ ಮೇಲೆ ದಾಳೀಮಾಡಿ ಇಕ್ಕೇರಿ, ಸಿರಾ, ಬೆಂಗಳೂರ, ವೆಲ್ಲೂರ, ಜಿಂಜಿ ಮುಂತಾದ ಹಿಂದೂ ರಾಜ್ಯಗಳನ್ನು ಗೆದ್ದುಕೊಂಡು ರಾಜ್ಯವನ್ನು ಬಹುವಾಗಿ ವಿಸ್ತರಿಸಿದರು. ಮುಸಲ್ಮಾನರ ಆಕ್ರಮಣವನ್ನು ತಡೆಗಟ್ಟಲು ತಮ್ಮಲ್ಲಿ ಒಕ್ಕಟ್ಟು ಸಾಧಿಸಬೇಕೆನ್ನುವ ಜಾಣತನವನ್ನು ಈ ಹಿಂದೂ ರಾಜರು ತೋರದಿದ್ದುದು ದುರ್ದೈ-ವದ ಸಂಗತಿಯಾಗಿದೆ. ಈ ರಾಜರಲ್ಲಿಯ ವೈಮನಸ್ಸಿನ ಹಾಗು ಒಳಜಗಳದ ಲಾಭ-ವನ್ನು ಆದಿಲಶಾಹಿಯ ಸೇನಾಪತಿಗಳು ಪಡೆದುಕೊಂಡು ಈ ರಾಜ್ಯಗಳನ್ನು ನಿರಾ-ಯಾಸದಿಂದ ಗೆದ್ದುಕೊಂಡರು. ಕೆಲವು ಹಿಂದೂ ಪ್ರಾಂತಾಧಿಕಾರಿಗಳಂತೂ ತಮ್ಮ ವಿರೋಧಿಗಳ ನಿರ್ಮೂಲನಕ್ಕಾಗಿ ಮುಸಲ್ಮಾನರಿಗೇ ನೆರವಾದರು.

ಬೆಂಗಳೂರನ್ನು ಗೆದ್ದುಕೊಂಡ ನಂತರ ಶಹಾಜಿಯು ಆದಿಲಶಾಹಿಯ ಸೇನಾಪತಿ ರಣದುಲ್ಲಾಖಾನನ ಸಮ್ಮತಿಯಿಂದ ಆ ನಗರವನ್ನು ಕರ್ನಾಟಕದಲ್ಲಿಯ ತನ್ನ ಮುಖ್ಯ ಠಾಣೆಯನ್ನಾಗಿ ಮಾಡಿಕೊಂಡನು. ಮತ್ತು ಅಲ್ಲಿಯೇ ನಿಂತುಕೊಂಡು ಕರ್ನಾಟಕದಲ್ಲಿ ಗೆದ್ದುಕೊಂಡ ಭಾಗದ ಆಡಳಿತವನ್ನು ಆದಿಲಶಾಹಿಯ ಪರವಾಗಿ ನೋಡಿಕೊಳ್ಳಹತ್ತಿದನು. ಶಹಾಜಿಯು ಕರ್ನಾಟಕದಲ್ಲಿ ನಿಂತು ನಡೆಸಿದ ಕಾರ್ಯದ ಪ್ರಯೋಜನವು ಮುಂದೆ ಮರಾಠರಿಗೆ ಬಹಳ ಉಪಯುಕ್ತವಾಯಿತು.

ಮಹಮ್ಮದ ಆದಿಲಶಾಹನ ಆಳಿಕೆಯು ಬಹಳ ವೈಭವಶಾಲಿಯಾಗಿತ್ತು. ಅವನ ರಾಜ್ಯವಿಸ್ತಾರವೂ ಬಹಳಷ್ಟಿತ್ತು. ಇವನಿಗೆ ಕರ್ನಾಟಕದ ಮೇಲಿನ ದಾಳಿ-ಗಳಲ್ಲಿ ವಿಸ್ತಾರವಾದ ಪ್ರದೇಶವೂ ಅಪಾರವಾದ ಸಂಪತ್ತಿಯೂ ಲಭಿಸಿತು. ಈ ಹಣ-ವನ್ನು ವೆಚ್ಚಮಾಡಿ ಆತನು ದೊಡ್ಡ ದೊಡ್ಡ ಪ್ರಾಸಾದಗಳನ್ನೂ, ಮಸೀದೆ ಗೋರಿ ಗಳನ್ನೂ ಕಲಾಪೂರ್ಣವಾಗಿ ಕಟ್ಟಿಸಿ ವಿಜಾಪುರವನ್ನು ಸುಂದರ ನಗರವನ್ನಾಗಿ ಬೆಳೆಸಿ ದನು. ಆತನ ಸೈನ್ಯದಲ್ಲಿ ಎರಡು ಲಕ್ಷ ಕಾಲ್ಬಲ, ಎಂಬತ್ತು ಸಾವಿರ ಅಶ್ವದಳ, ಐನೂರು ಆನೆಗಳು ಇಂಥ ಪ್ರಚಂಡ ಸೈನ್ಯವು ಸದಾ ಸುಸಜ್ಜಿತವಿರುತ್ತಿತ್ತು.

ಆನಂತರ ಪಟ್ಟಕ್ಕೆ ಬಂದ ಆದಿಲಶಾಹಿ ಸುಲ್ತಾನರಲ್ಲಿ ಹೇಳಿಕೊಳ್ಳುವಂಥವ-ರಾರೂ ಆಗಲಿಲ್ಲ. ಮರಾಠರ ಹಾಗೂ ಮೊಗಲರ ಆಕ್ರಮಣಗಳು ಪ್ರಾರಂಭವಾದದ್ದ-

ರಿಂದ ಆದಿಲಶಾಹಿ ರಾಜ್ಯಕ್ಕೆ ಅವನತಿಯ ಸ್ವರೂಪವುಂಟಾಯಿತು. ಶಿವಾಜಿಯಂತೂ ಸ್ವತಂತ್ರ ರಾಜ್ಯಸ್ಥಾಪನೆ ಮಾಡಿ ಆದಿಲಶಾಹಿಯನ್ನು ನುಗ್ಗುಮಾಡಿಬಿಟ್ಟನು.



ಗೋಳಗುಮ್ಮಟ (ವಿಜಾಪುರ)

೧೬೮೫ ರಲ್ಲಿ ಔರಂಗಜೇಬನು ದಕ್ಷಿಣದ ಮೇಲೆ ದಾಳಿಮಾಡಿ ಆದಿಲಶಾಹಿಯನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡುಬಿಟ್ಟನು.

ವಿಜಾಪುರವು ಭವ್ಯವಾದ, ಸಮೃದ್ಧವಾದ, ಸುಂದರ ನಗರವಾಗಿತ್ತು. ನಗರದ ಸುತ್ತಲೂ ಭದ್ರವಾದ ಕೋಟೆ ಗೋಡೆಯಿದ್ದು ನಗರದ ಸಂರಕ್ಷಣೆಗಾಗಿ ಅಲ್ಲಲ್ಲಿ ಕೊತ್ತಳಗಳ ಮೇಲೆ ದೊಡ್ಡ ದೊಡ್ಡ ತೋಪುಗಳನ್ನಿಡಲಾಗಿತ್ತು. ಅವುಗಳಲ್ಲಿ “ಮುಲಖ ಈ ಮೈದಾನ” ಎಂಬ ಪ್ರಚಂಡ ತೋಪು ವಿಜಾಪುರದ ಕಿಲ್ಲೆಯ ಮೇಲೆ ಇದೆ. ಇದು ಎರಕದ ಕೆಲಸದ ಅತ್ಯುತ್ತಮ ಮಾದರಿಯದಾಗಿದೆ. ಈ ತೋಫಿನ ಭಾರವು ೪೦ ಟನ್ ಇದೆ. ನಗರದ ಸುತ್ತಲೂ ಇರುವ ಕೋಟೆಯ ಗೋಡೆಯ ಪರಿಘವು ೬। ಮೈಲುಗಳಷ್ಟಿದೆ.

ವಿಜಯನಗರದ ಪತನದ ನಂತರ ಅಲ್ಲಿಯ ಶಿಲ್ಪಜ್ಞರೂ ಕಲಾವಿದರೂ ವಿಜಾಪುರಕ್ಕೆ ಬಂದು ನೆಲಸಿದರು. ಆದಿಲಶಾಹಿ ಸುಲ್ತಾನರು ಇವರ ಸಹಾಯದಿಂದ ಉತ್ಕೃಷ್ಟವಾದ ಅನೇಕಾನೇಕ ಅರಮನೆಗಳನ್ನೂ, ಮಸೀದೆಗಳನ್ನೂ, ಗೋರಿಗಳನ್ನೂ ಕಟ್ಟಿಸಿದರು. ಅಲ್ಲಿ ಆದಿಲಶಹನು ಕಟ್ಟಿಸಿದ ಮಸೀದೆಯು ಭವ್ಯ

ವಾಗಿದ್ದು ಐದು ಸಾವಿರ ಜನರು ಒತ್ತಟ್ಟಿಗೆ ಕುಳಿತು ಅಲ್ಲಿ ಪ್ರಾರ್ಥನೆ ಮಾಡ ಬಹುದಾಗಿದೆ. ಎರಡನೇ ಇಬ್ರಾಹಿಮನ ಗೋರಿಯು ಅತ್ಯಂತ ಪ್ರೇಕ್ಷಣೀಯ ವಿರುತ್ತದೆ. ಮಹಮ್ಮದ ಆದಿಲಶಾಹನ ಗೋರಿಯಾದ ಗೋಳಗುಮ್ಮಟವು ಜಗತ್ಪ್ರ- ಸಿದ್ಧವಾಗಿದೆ. ಈ ಗೋರಿಯ ಮೇಲಿನ ಗುಮ್ಮಟವು ಜಗತ್ತಿನಲ್ಲಿ ಪ್ರಚಂಡವಾದ ಎರಡು ಗುಮ್ಮಟಗಳಲ್ಲಿ ಒಂದಾಗಿದೆ. ಭವ್ಯವೂ ಪ್ರಶಸ್ತವೂ ಆದ ಗಗನಮಹಾಲ ಎಂಬ ಸಭಾಗೃಹವನ್ನೂ ಇದೇ ಕಾಲಕ್ಕೆ ಕಟ್ಟಲಾಯಿತು.

ಪ್ರಸಿದ್ಧ ಮುಸಲ್ಮಾನ ಇತಿಹಾಸಕಾರನಾದ 'ಫೆರಿಷ್ತಾ'ನು ಇಬ್ರಾಹಿಮ ಆದಿಲಶಹನ ದರ್ಬಾರದಲ್ಲಿದ್ದನು ಸುಲ್ತಾನನ ಆಜ್ಞೆಯಂತೆ 'ಮುಸಲ್ಮಾನರ ಇತಿಹಾಸ' ವೆಂಬ ಗ್ರಂಥವನ್ನು ಇವನು ಬರೆದು ಅತ್ಯುಪಯುಕ್ತ ಕಾರ್ಯವನ್ನು ಮಾಡಿದ್ದಾನೆಂಬಲ್ಲಿ ಸಂದೇಹವಿಲ್ಲ.

**ಇತರ ಸುಲ್ತಾನರು** :— ಮಾಬಾರ ಮಹಮ್ಮದ ಬಿನ್ ತುಘಲಕನ ಹುಚ್ಚು- ತನದ ಅವ್ಯವಹಾರಿ ಯೋಜನೆಗಳಿಂದ ಆತನ ವಿಸ್ತೃತ ರಾಜ್ಯದಲ್ಲಿ ಆತನು ಪಟ್ಟಕ್ಕೆ ಬಂದ ಹತ್ತುವರ್ಷಗಳಲ್ಲಿ ಅಂದರೆ ಸನ್ ೧೩೩೫ರ ಸುಮಾರಕ್ಕೆ ಅರಾಜಕ ಪರಿಸ್ಥಿತಿ- ಯುಂಟಾಯಿತು. ಈ ಅನಾಯಕತ್ವದ ಲಾಭ ಪಡೆದುಕೊಂಡು ಮಹತ್ವಾಕಾಂಕ್ಷಿ ಗಳಾದ ಕೆಲವು ಪ್ರಾಂತಾಧಿಕಾರಿಗಳು ಸ್ವತಂತ್ರರಾಗಲು ಪ್ರಯತ್ನಿಸಹತ್ತಿದರು. ಮೊಟ್ಟಮೊದಲಿಗೆ ದಕ್ಷಿಣ ಭಾರತದಲ್ಲಿ ಪೂರ್ವ ಕರಾವಳಿಯ ಮಾಬಾರದಲ್ಲಿಯ ಜಲಾಲುದ್ದೀನ ಅಸಾನಶಾಹಾ ಎಂಬ ಸುಭೇದಾರನು ಬಂಡೆದ್ದು ತನ್ನ ಸ್ವಾತಂತ್ರ್ಯ ವನ್ನು ಘೋಷಿಸಿದನು. ಇವನನ್ನು ಕೂಡಲೆ ಸದೆಬಡೆಯದಿದ್ದರೆ ಉಂಟಾಗುವ ಭಯಂಕರ ದುಷ್ಪರಿಣಾಮದ ಅರಿವು ಸುಲ್ತಾನನಿಗೆ ಆದದ್ದರಿಂದ ಅವನು ದೊಡ್ಡ ಸೇನೆಯೊಂದಿಗೆ ದಕ್ಷಿಣಕ್ಕೆ ಬಂದನು. ರಾಜಧಾನಿಯ ಸುತ್ತಲೂ ದುರ್ಭಿಕ್ಷೆ ಅರಾಜ ಕತೆಗಳು ತಾಂಡವವಾಡುತ್ತಿದ್ದರೂ ಆತನಿಗೆ ಈ ಕೆಲಸವನ್ನು ಕೈಕೊಳ್ಳಬೇಕಾಯಿತು. ಸುಲ್ತಾನನಿಗೆ ದುರ್ದೈವವು ಕೈತೊಳೆದುಕೊಂಡು ಬೆನ್ನಹತ್ತಿತ್ತು. ಅವನ ಸೈನ್ಯ ವಲ್ಲಿ ನೂರಕ್ಕೆ ಹತ್ತರಷ್ಟು ಜನರು ಮಾರೀ ಬೇನೆಯಿಂದ ಸತ್ತಿದ್ದರಿಂದ ಆತನು ಬಂದ ಹಾದಿಗೆ ಸುಂಕವಿಲ್ಲವೆಂಬಂತೆ ಹಾಗೇ ಹಿಂತಿರುಗಬೇಕಾಯಿತು.

**ಮದುರೆ** :— ಪಾಂಡ್ಯರ ಪ್ರಾಚೀನವಾದ ಈ ಹಿಂದೂ ರಾಜ್ಯವನ್ನು ಮಲಿಕ ಕಾಫೂರನು ಪ್ರಥಮತಃ ಗೆದ್ದುಕೊಂಡಿದ್ದನು. ೧೩೩೫ ರಲ್ಲಿ ಮಹಮ್ಮದ ತುಘಲಕನ ಅಧಿಕಾರಿಯಾದ ಜಲಾಲುದ್ದೀನ ಅಸನಶಾಹಾನು ಅನುಕೂಲ ಪರಿಸ್ಥಿತಿಯಿರುವದನ್ನು ಕಂಡುಕೊಂಡು ಸುಲ್ತಾನನ ಪ್ರಭುತ್ವವನ್ನು ನಿರಾಕರಿಸಿ ಮದುರೆಯಲ್ಲಿ ಸ್ವತಂತ್ರ ಮುಸಲ್ಮಾನ ರಾಜ್ಯವನ್ನು ಸ್ಥಾಪಿಸಿದನು. ಮುಂದೆ ಸೈನ್ಯಾಧಿಕಾರಿಯೊಬ್ಬನು ಜಲಾಲುದ್ದೀನನನ್ನೂ ಸಂಹರಿಸಿ ಆತನ ಪಟ್ಟವನ್ನು ಆಕ್ರಮಿಸಿದನು (ಸ. ೧೩೪೦). ಯಾವನೋ ಒಬ್ಬನು ಈ ಸುಲ್ತಾನನ ಕೊಲೆ ಮಾಡಿದನು. ಅನಂತರ ಪಟ್ಟಕ್ಕೆ ಬಂದ 'ದಾಮಾಗಿನಿ' ಎಂಬ ಸುಲ್ತಾನನು ಹಿಂದುಗಳನ್ನು ಅನನ್ವಿತವಾಗಿ ಹಿಂಸಿಸಿದನು. ಆ ಕಾಲಕ್ಕೆ ಇಬ್ನ ಬತೂತಾ ಎಂಬ ಪ್ರಸಿದ್ಧ ಇತಿಹಾಸಕಾರನು ಮದುರೆಯ ದರ್ಬಾರ

ದಲ್ಲಿದ್ದನು. ಮದುರೆಯ ಸುಲ್ತಾನನು ನಡೆಸಿದ ಅತ್ಯಾಚಾರಗಳಿಗೆ ಹೇಸಿಕೊಂಡು ಇಬ್ನ ಬತೂತಾನು ಮದುರೆಯನ್ನು ತ್ಯಜಿಸಿದನು. ಕೊನೆಯ ಸುಲ್ತಾನನಾದ ಸಿಕಂ-ದರಶಾಹನನ್ನು ವಿಜಯನಗರದ ಅರಸರು ಮುರಿದಿಕ್ಕಿ ಅಲ್ಲಿಯ ಮುಸಲ್ಮಾನಿ ರಾಜ್ಯ-ವನ್ನು ನಷ್ಟಮಾಡಿ ಅದನ್ನು ತಮ್ಮ ರಾಜ್ಯಕ್ಕೆ ಸೇರಿಸಿಕೊಂಡರು (ಸ. ೧೩೭೮).

**ಖಾನದೇಶ:**—ತಾಪೀನದಿಯ ಕೊಳ್ಳದಲ್ಲಿಯ ಖಾನದೇಶದ ಪುಟ್ಟ ರಾಜ್ಯವು ಉತ್ತರಕ್ಕೆ ವಿಂಧ್ಯ, ದಕ್ಷಿಣಕ್ಕೆ ದಕ್ಷಿಣದ ತಪ್ಪಲು, ಪಶ್ಚಿಮಕ್ಕೆ ಗುಜರಾತ ಹಾಗೂ ವರ್ಹಾಡ ಈ ಮೇರೆಗಳಿಂದ ಕೂಡಿತ್ತು. ಫಿರೋಜ ತುಘಲಕನ ಮರಣದ ನಂತರ ದಿಲ್ಲಿಯ ಸುಲ್ತಾನರ ದೌರ್ಬಲ್ಯವನ್ನೂ ಅವರು ತನ್ನ ಮೇಲೆ ದಾಳಿಮಾಡುವ ಸಂಭವವಿಲ್ಲದಿರುವದನ್ನೂ ಕಂಡುಕೊಂಡು ಸುಭೇದಾರನಾದ ಮಲಿಕ ರಾಜಾ ಫರೂಕಿಯು ತನ್ನ ಸ್ವಾತಂತ್ರ್ಯವನ್ನು ಸಾರಿದನು. ಸುತ್ತಲಿನ ರಾಜ್ಯಗಳಲ್ಲಿ ಯುದ್ಧ ಗಳು ನಡೆದಿದ್ದರೂ ಈ ರಾಜ್ಯದಲ್ಲಿ ಶಾಂತತೆ ಸಮೃದ್ಧಿಗಳು ಕಂಡುಬರುತ್ತಿದ್ದದ್ದು ವೈಶಿಷ್ಟ್ಯವೆನ್ನಬೇಕು. ಆದ್ದರಿಂದ ಈ ರಾಜ್ಯದ ಇತಿಹಾಸವನ್ನು ಅರಿತುಕೊಳ್ಳು-ವದು ಬೋಧಪ್ರದವಾಗುವದು.

ರಾಜಾ ಫರೂಕಿಯು ರಾಜ್ಯದಲ್ಲಿ ಶಾಂತತೆಯನ್ನು ಕಾಯ್ದುಕೊಂಡು ನೆರೆ-ಹೊರೆಯವರೊಡನೆ ಸ್ನೇಹವನ್ನುಬೆಳೆಸಿ ತನ್ನ ರಾಜ್ಯದ ವೈಭವ ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳುವಲ್ಲಿ ವಿಶೇಷ ಪರಿಶ್ರಮ ವಹಿಸಿದನು. ತನ್ನ ಹಿಂದೂ ಪ್ರಜೆಗ ಳೊಡನೆ ಸಹಿಷ್ಣುತೆಯಿಂದ, ಔದಾರ್ಯದಿಂದ ವರ್ತಿಸುತ್ತಿದ್ದನು. ವ್ಯಾಪಾರ—ಒಕ್ಕಲತನಗಳಿಗೆ ಪ್ರೋತ್ಸಾಹವನ್ನಿತ್ತು ಪ್ರಜೆಗಳಿಗೆ ಸುಖವನ್ನುಂಟುಮಾಡಿದನು. ಈ ಸುಲ್ತಾನನು ೧೩೯೯ರಲ್ಲಿ ಮಡಿದನು.

ಅನಂತರ ಪಟ್ಟಕ್ಕೆ ಬಂದ ಇವನ ಮಗನಾದ ನಾಸೀರನು 'ಅಶ-ಅಹಿರ' ಎಂಬ ಹಿಂದೂ ರಾಜನಿಗೆ ವಿಶ್ವಾಸಘಾತ ಮಾಡಿ ಅಶೀರಗಡ*ವೆಂಬ ಭದ್ರವಾದ ಆಯಕಟ್ಟಿನ ಸ್ಥಳದಲ್ಲಿದ್ದ ಕಿಲ್ಲೆಯನ್ನು ವಶಪಡಿಸಿಕೊಂಡನು. ದಕ್ಷಿಣದ ಪ್ರವೇಶ ದ್ವಾರವೆಂದು ಈ ಕಿಲ್ಲೆಗೆ ವಿಶೇಷ ಮಹತ್ವವಿದೆ.

ಅನಂತರ ಪಟ್ಟಕ್ಕೆ ಬಂದ ಆದಿಲಖಾನ ಸುಲ್ತಾನನು (ಸ. ೧೪೫೭-೧೫೦೩) ಗೊಂಡವನ ಪ್ರಾಂತವನ್ನು ಗೆದ್ದುಕೊಂಡು ತನ್ನ ರಾಜ್ಯವನ್ನು ವಿಸ್ತರಿಸಿದನು. ಕರ್ತೃತ್ವಶಾಲಿಯಾದ ಈ ಸುಲ್ತಾನನು ತನ್ನ ರಾಜ್ಯದಲ್ಲಿ ಶಾಂತತೆಯನ್ನೂ, ಸುವ್ಯವಸ್ಥೆಯನ್ನೂ ಸ್ಥಾಪಿಸುವಲ್ಲಿ ಸಾಕಷ್ಟು ಯಶಸ್ವಿಯಾದನು; ಫರೂಕಿ ಸುಲ್ತಾನರು ತಮ್ಮ ನೆರೆ ಪ್ರಾಂತವಾದ ಗುಜರಾಥದ ಅರಸರ ಸ್ನೇಹವನ್ನು ಸಂಪಾದಿಸಿ ತಮ್ಮ ರಾಜ್ಯವನ್ನು ಕಾಪಾಡಿಕೊಂಡು ಬಂದರು. ಮುಂದೆ ಸುಲ್ತಾನ ಪದದಬಗ್ಗೆ ವಾರಸದಾರರಲ್ಲಿ ಜಗಳ ಹುಟ್ಟಿ ಅಹಮ್ಮದನಗರದ ಮತ್ತು ಗುಜರಾಥದ ಸುಲ್ತಾ-ನರಿಗೆ ಈ ರಾಜ್ಯದಲ್ಲಿ ಹಸ್ತಕ್ಷೇಪ ಮಾಡಲು ಅವಕಾಶವು ಲಭಿಸಿತು. ಫರೂಕಿ ಸುಲ್ತಾನರಲ್ಲಿ ಕರ್ತೃತ್ವಶಾಲಿಗಳಾರೂ ಇಲ್ಲದ್ದರಿಂದ ಅವರ ರಾಜ್ಯದ ಅವನತಿಯು

---

* ಈ ಕಿಲ್ಲೆಯನ್ನು ಅಕಬರನು ಸ. ೧೬೦೧ರಲ್ಲಿ ತನ್ನ ಕೈವಶ ಮಾಡಿಕೊಂಡನು.

ಪ್ರಾರಂಭವಾಯಿತು. ಅಕಬರನು ೧೬೦೧ರಲ್ಲಿ ಈ ರಾಜ್ಯವನ್ನು ಗೆದ್ದುಕೊಂಡು ಮೊಗಲರ ಸಾಮ್ರಾಜ್ಯಕ್ಕೆ ಸೇರಿದನು. ಅಶೀರಗಡದಂಥ ಭದ್ರವಾದ ಕೋಟೆ, ಬರ್ಹಾಣಪುರದಂಥ ವೈಭವಪೂರ್ಣವಾದ ರಾಜಧಾನಿಗಳು ಇವುಗಳಿಂದ ಖಾನದೇಶದ ರಾಜ್ಯಕ್ಕೆ ವಿಶೇಷ ಮಹತ್ವವುಂಟಾಯಿತು. ಫರೂಕಿ ಸುಲ್ತಾನರು ಈ ನಗರದಲ್ಲಿ ಭವ್ಯಪ್ರಾಸಾದಗಳನ್ನೂ, ಸುಂದರ ಉಪವನಗಳನ್ನೂ, ಮಸೀದಿ, ಮೃಗಯಾ ಮಂದಿರಗಳನ್ನೂ ರಚಿಸಿ ನೀರಿನ ಪೂರೈಕೆಯನ್ನು ಒದಗಿಸಿ ನಗರದ ಸೌಂದರ್ಯವನ್ನು ಆಕರ್ಷಕವಾಗಿ ಹೆಚ್ಚಿಸಿದರು. ಅಳಿದುಳಿದ ಇಂದಿನ ಸ್ಥಿತಿಯಲ್ಲಿಯೂ ಈ ನಗರದ ಪೂರ್ವ ವೈಭವದ ಕಲ್ಪನೆ ಬರುವಂತಿದೆ.

**ಸಮಾರೋಪ :—** ಭಾರತದಲ್ಲಿ ಇಸ್ಲಾಮದ ಹುಟ್ಟು ಬೆಳವಣಿಗೆಗಳೆಂತಾದವೆಂಬುದನ್ನು ಈ ಮೊದಲಿನ ಪಾಠಗಳಲ್ಲಿ ನೋಡಿದ್ದಾಗಿದೆ. ಉತ್ತರ ಭಾರತದಲ್ಲಿ ಇಸ್ಲಾಮಿ ರಾಜ್ಯವನ್ನು ವಿಸ್ತರಿಸಬೇಕೆಂಬುದರ ಕಡೆಗೆ ಮುಖ್ಯತಃ ದಿಲ್ಲಿ ಸುಲ್ತಾನರ ಲಕ್ಷ್ಯವಿತ್ತು. ಸಾಧಾರಣವಾಗಿ ಉತ್ತರ ಭಾರತವನ್ನೆಲ್ಲ ತಮ್ಮ ಅಧೀನದಲ್ಲಿ ತಂದುಕೊಳ್ಳಲು ಈ ಸುಲ್ತಾನರು ಸಮರ್ಥರಾದರು. ರಾಜ್ಯ ವಿಸ್ತಾರದೊಂದಿಗೆ ಅಲ್ಲಿ ಇಸ್ಲಾಮಿ ಸಂಸ್ಕೃತಿಯನ್ನು ಬಿತ್ತುವ ಪ್ರಯತ್ನವನ್ನು ಇವರು ಮಾಡಿದರು. ಖಿಲಜಿ ಹಾಗು ತುಘಲಕ ಮನೆತನಗಳ ಸುಲ್ತಾನರು ದಕ್ಷಿಣ ಭಾರತದಲ್ಲಿಯೂ ತಮ್ಮ ರಾಜ್ಯವನ್ನು ವಿಸ್ತರಿಸಿ ಅದಕ್ಕೆ ಶಕ್ತಿ ಸ್ಥೈರ್ಯಗಳನ್ನು ತಂದುಕೊಡಲು ವಿಶೇಷವಾಗಿ ಪ್ರಯತ್ನಿಸಿದರೂ ಅವರಿಗೆ ಅಷ್ಟೊಂದು ಯಶಸ್ಸು ಸಿಗಲಿಲ್ಲ. ಸುಲ್ತಾನರು ದಕ್ಷಿಣ ಭಾರತದಲ್ಲಿ ಗೆದ್ದುಕೊಂಡ ಪ್ರದೇಶವು ದಿಲ್ಲಿಯಿಂದ ಬಹು ದೂರದಲ್ಲಿತ್ತು. ತಮ್ಮ ಅಧಿಕಾರವನ್ನು ಸ್ಥಿರವಾಗಿಸುವ ಕಾರ್ಯದಲ್ಲಿ ಈ ಸುಲ್ತಾನರು ಅನೇಕ ಸಂಕಟಗಳನ್ನು ಎದುರಿಸಬೇಕಾದ್ದರಿಂದ ಅವರಿಗೆ ಅಷ್ಟೊಂದು ಯಶಸ್ಸು ಸಿಗಲಿಲ್ಲ. ಆ ಕಾಲದಲ್ಲಿ ಇಂದಿನಂತೆ ಸಾರಿಗೆ ಸಂಪರ್ಕಗಳ ಸುಲಭ ಸಾಧನವೂ ಇರಲಿಲ್ಲ. ಆದ್ದರಿಂದ ಬೇರೆ ಪ್ರಾಂತಗಳಲ್ಲಿಯ ದಂಗೆಗಳನ್ನು ನಿರ್ಮೂಲ ಮಾಡುವದು ಅಷ್ಟೊಂದು ಸುಲಭವಾಗಿರಲಿಲ್ಲ ಆದ್ದರಿಂದ ಮಹಮ್ಮದ ಬಿನ್ ತುಘಲಕನು ತನ್ನ ರಾಜಧಾನಿಯನ್ನು ದಿಲ್ಲಿಯಿಂದ ದೌಲತಾಬಾದಕ್ಕೆ ಒಯ್ಯುವ ಅಟ್ಟಹಾಸವನ್ನು ಮಾಡಿದನು. ಆದರೆ ಆತನ ಪ್ರಯತ್ನವು ಫಲಿಸಲಿಲ್ಲ.

ದಕ್ಷಿಣ ಭಾರತದಲ್ಲಿ ನೆಲಸಿದ ಮುಸಲ್ಮಾನರು ಕೇವಲ ತುರ್ಕಿಗಳಾಗಿರಲಿಲ್ಲ. ಅವರು ಪಶ್ಚಿಮದ ಕರಾವಳಿಗಳಿಂದ ಬಂದ ಸಯ್ಯದ, ಇರಾಣಿ, ಹಬಸಿ ಮುಂತಾದ ಅನೇಕ ಪ್ರಕಾರದ ಹಾಗು ದೀರ್ಘಕಾಲದಿಂದ ವಾಸಿಸುತ್ತ ಬಂದಂಥ ಮುಸಲ್ಮಾನರಾಗಿದ್ದರು. ಅಲ್ಲದೆ ಇಲ್ಲಿದ್ದ ಮುಸಲ್ಮಾನರಲ್ಲಿ ಶಿಯಾ ಪಂಥದವರು ಹೆಚ್ಚಾಗಿದ್ದರು.

ಉತ್ತರದಲ್ಲಿದ್ದ ಸುನ್ನೀ ಪಂಥದ ತುರ್ಕಿಗಳ ಬಗ್ಗೆ ಇವರಿಗೆ ಯಾವ ಆತ್ಮೀಯತೆಯೂ ಉಂಟಾಗುತ್ತಿರಲಿಲ್ಲ. ಸುನ್ನೀ ಪಂಥದ ಈ ತುರ್ಕಿಗಳೆಂದರೆ ಆಕ್ರಮಕರೇ ಎಂಬ ಭಾವನೆಯು ಇವರಲ್ಲಿ ಬೆಳೆಯುತ್ತ ಹೋಯಿತು. ಅದರಲ್ಲಿಯೂ ದಿಲ್ಲಿಯ ತುರ್ಕಿ ಸುಲ್ತಾನರ ಹಾಗು ಅವರ ಸರದಾರರ ಘೋರಣದಿಂದ ಮತ್ತು ವರ್ತನೆಯಿಂದ

ದಕ್ಷಿಣದ ಮುಸಲ್ಮಾನರ ಅಸಂತೋಷವು ಹೆಚ್ಚುತ್ತ ನಡೆಯಿತು.

ಇಂಥ ಪರಿಸ್ಥಿತಿಯಲ್ಲಿ ಇಲ್ಲಿಯ ಮುಸಲ್ಮಾನರಲ್ಲಿ ದಿಲ್ಲಿಯ ಸುಲ್ತಾನರನ್ನು ಪ್ರತಿಭಟಿಸುವ ಪ್ರವೃತ್ತಿಯು ಬೆಳೆದು ಬಂದಿತು. ಇಂಥವರಲ್ಲಿ ತುಘಲಕ ಸುಲ್ತಾನರ ಅನ್ಯಾಯದ ಅವಿಚಾರಿ ವರ್ತನದಿಂದ ತಮ್ಮದೊಂದು ಸ್ವತಂತ್ರ ರಾಜ್ಯವಿರಬೇಕು, ಎನ್ನುವ ಇಲ್ಲಿಯ ಜನರ ಮಹತ್ವಾಕಾಂಕ್ಷೆಗೆ ಪುಟ ಕೊಟ್ಟಂತಾಯಿತು. ಸರದಾರರು ಸ್ವತಂತ್ರರಂತೆ ವರ್ತಿಸಹತ್ತಿದರು. ಸುಲ್ತಾನರ ಕುರಿತು ಅವರಲ್ಲಿದ್ದ ಭೀತಿಯು ತೊಲಗಿತು. ಇಂಥ ಅಸ್ವಸ್ಥ ಪರಿಸ್ಥಿತಿಯಲ್ಲಿ ದಕ್ಷಿಣದಲ್ಲಿ ಬಹಮನಿ ರಾಜ್ಯವು ಉದಯಿಸಿತು. ಇದೇ ರೀತಿಯಲ್ಲಿ ಇತರ ಮುಸಲ್ಮಾನ ಪ್ರಾಂತಾಧಿಕಾರಿಗಳೂ ಸಮಯ ಸಾಧಿಸಿ ತಂತಮ್ಮ ಸ್ವತಂತ್ರ ರಾಜ್ಯಗಳನ್ನು ಸ್ಥಾಪಿಸಿಕೊಂಡರು.

ಸಾಂಸ್ಕೃತಿಕ ದೃಷ್ಟಿಯಿಂದಲೂ ದಕ್ಷಿಣದ ಇತಿಹಾಸವು ವಿಶೇಷ ಮಹತ್ವ-ದ್ದಾಗಿದೆ. ಹಿಂದೂ ಸಂಸ್ಕೃತಿಯನ್ನು ರಕ್ಷಿಸುವದಕ್ಕೆ ವಿಜಯನಗರದ ಅರಸರು ಹೋರಾಡಿದಂತೆ ಉತ್ತರ ಸುನ್ನಿ ಪಂಥದ ತುರ್ಕಿ ಸುಲ್ತಾನರ ಆಕ್ರಮಣವನ್ನು ತಡೆಗಟ್ಟುವದಕ್ಕಾಗಿ, ದಕ್ಷಿಣದ ವಿಶಿಷ್ಟ ಸಂಸ್ಕೃತಿಯ ರಕ್ಷಣೆಗಾಗಿ ದಕ್ಷಿಣದ ಮುಸ-ಲ್ಮಾನರು ನಿಕರದಿಂದ ಹೋರಾಡಿದರು

ಸುಲ್ತಾನರೆಲ್ಲ ನಿರ್ನಾಮಹೊಂದಿ ಮೊಗಲ ಸಾಮ್ರಾಜ್ಯವು ಪ್ರಸ್ಥಾಪಿತ ವಾದರೂ ಈ ಪರಿಸ್ಥಿತಿಯಲ್ಲಿ ಬದಲಾಗಲಿಲ್ಲ. ಔರಂಗಜೇಬನು ಕಟ್ಟಾ ಸುನ್ನಿ ಪಂಥೀಯನಾಗಿದ್ದನು. ಔರಂಗಜೇಬನು ತನ್ನ ರಾಜ್ಯತೃಷೆಯನ್ನು ಪರಿಹರಿಸಿ ಕೊಳ್ಳಲು ದಕ್ಷಿಣದ ಮೇಲೆ ದಂಡೆತ್ತಿಬಂದರೂ ದಕ್ಷಿಣದಲ್ಲಿಯ ಮುಸಲ್ಮಾನರ ರಾಜ್ಯಗಳೆಲ್ಲ ಶಿಯಾ ಪಂಥಕ್ಕೆ ಸೇರಿದ ರಾಜ್ಯಗಳಿದ್ದದ್ದರಿಂದ ಔರಂಗಜೇಬನ ದಾಳಿಗೆ ತೀವ್ರವಾದ ಧಾರ್ಮಿಕ ಸ್ವರೂಪವುಂಟಾಯಿತು.

ದಕ್ಷಿಣ ಸುಲ್ತಾನರಲ್ಲಿ ಪರಸ್ಪರರ ವೈಮನಸ್ಸು ಇದ್ದದ್ದರಿಂದ ಉತ್ತರ ಭಾರತ ದಲ್ಲಿಯಂತೆ ದಕ್ಷಿಣದಲ್ಲಿ ಇಸ್ಲಾಂ ಧರ್ಮವು ಬೇರೂರಲಿಲ್ಲ. ಇಷ್ಟೇ ಅಲ್ಲ ಆ ಧರ್ಮದ ಪ್ರಸಾರವೂ ಆಗಲಿಲ್ಲ. ನಾಕಷ್ಟು ಜನ ಸುಲ್ತಾನರು ಧರ್ಮದ ವಿಷಯದಲ್ಲಿ ಉದಾರಿಗಳೂ ಸಹಿಷ್ಣುಗಳೂ ಆಗಿದ್ದರು.

ಸುಲ್ತಾನರು ಹಿಂದೂ ಸ್ತ್ರೀಯರನ್ನು ಮದುವೆಯಾಗಹತ್ತಿದ್ದರಿಂದ ಧಾರ್ಮಿಕ ದೃಷ್ಟಿಕೋನದಲ್ಲಿಯೂ ಬದಲಾವಣೆಯಾಗುತ್ತ ಅವರಲ್ಲಿಯ ಕಟುಭಾವನೆಯು ಕಡಿಮೆಯಾಗಹತ್ತಿತು. ಕೆಲವು ಸುಲ್ತಾನರಂತೂ ಮೂಲತಃ ಹಿಂದುಗಳೇ ಆಗಿ-ದ್ದರು. ಇಸ್ಲಾಂ ಧರ್ಮವನ್ನು ಸ್ವೀಕರಿಸಿದ ಹಿಂದುಗಳು, ಮುಸಲ್ಮಾನ ಸಂಸ್ಕೃತಿ-ಯಲ್ಲಿ ಸಂಪೂರ್ಣ ಸಮರಸವಾಗಲಿಲ್ಲ. ಆದರೆ ಹಿಂದೂ ಮುಸಲ್ಮಾನರಲ್ಲಿ ನಿಕಟ ಸಂಬಂಧವುಂಟಾದ್ದರಿಂದ ಉಭಯತರ ಸಂಸ್ಕೃತಿ ಸಂಪ್ರದಾಯಗಳ ಪರಿಣಾಮಗಳು ಪರಸ್ಪರರ ಮೇಲೆ ಉಂಟಾಗದಿರಲಿಲ್ಲ. ಹಿಂದುಗಳ ಅನೇಕ ಆಚಾರ ವಿಚಾರಗ-ಳನ್ನು ಮುಸಲ್ಮಾನರು ಅಂಗೀಕರಿಸಿದರು. ಅವರ ಅನೇಕ ಅಂಶಗಳನ್ನು ಇವರು ಒಪ್ಪಿಕೊಂಡರು.

ಸುಲ್ತಾನರು ಬ್ರಾಹ್ಮಣರಿಗೂ ಮರಾಠರಿಗೂ ಮುಲ್ಕಿ ಹಾಗು ಸೈನ್ಯ ಶಾಖೆಯಲ್ಲಿ ದೊಡ್ಡ ಅಧಿಕಾರ ಹುದ್ದೆಗಳನ್ನಿತ್ತು ಒಂದು ರೀತಿಯಿಂದ ತಮ್ಮ ಉದಾರ ಧೋರಣವನ್ನು ಸಾರಿಹೇಳಿದರು. ದಕ್ಷಿಣದ ಸುಲ್ತಾನರ ದರಬಾರಗಳಲ್ಲಿ ಜಾಧವ, ನಿಂಬಾಳಕರ, ಘೋರ್ಪಡೆ, ಭೋಸಲೆ, ಘಾಟಗೆ, ಮೋರೆ, ಜೇಧೆ ಮುಂತಾದ ಪ್ರಖ್ಯಾತ ಮರಾಠಾ ಸರದಾರರು ಪ್ರಸಿದ್ಧಿಗೆ ಬಂದರೆಂಬುದು ವಿಶೇಷ ಸಂಗತಿಯಾಗಿದೆ. ಈ ಮರಾಠಾ ಸರದಾರರ ಹತ್ತಿರ ಸೈನ್ಯವಿರುತ್ತಿತ್ತಲ್ಲದೆ ಇವರ ವಶದಲ್ಲಿ ಅನೇಕ ಕೋಟೆಗಳೂ ಇರುತ್ತಿದ್ದವು. ಇದರಂತೆ ದಕ್ಷರಾದ ಮರಾಠಾ ಮುತ್ಸದ್ದಿಗಳಿಗೆ ದರಬಾರಗಳಲ್ಲಿ ಮಹತ್ವದ ಸ್ಥಾನಗಳು ದೊರೆತಿದ್ದವು. ಮರಾಠಾ ಸರದಾರರು ಹಾಗು ಮುತ್ಸದ್ದಿಗಳು ಇವರ ಕೈಯಲ್ಲಿದ್ದ ಅಧಿಕಾರದ ಉಪಯೋಗವು ಮುಂದೆ ಶಿವಾಜಿಯು ಸ್ವರಾಜ್ಯ ಸ್ಥಾಪಿಸುವ ಕಾಲಕ್ಕೆ ಬಹಳಷ್ಟು ಆಯಿತೆಂಬಲ್ಲಿ ಸಂದೇಹವಿಲ್ಲ.

ಯುಸುಫ ಆದಿಲಶಾಹನು ಪರ್ಶಿಯನ್ ಭಾಷೆಯ ಬದಲು ಮರಾಠಿ ಭಾಷೆಯನ್ನು ದರಬಾರೀ ಭಾಷೆಯೆಂದು ಅಂಗೀಕರಿಸಿ ಆ ಭಾಷೆಯಲ್ಲಿಯೆ ಎಲ್ಲ ಪತ್ರವ್ಯವಹಾರ ನಡೆಯಬೇಕು ಮತ್ತು ಲೆಕ್ಕಪತ್ರಗಳನ್ನಿಡಬೇಕು ಎಂಬ ಉಪಕ್ರಮವನ್ನು ಪ್ರಾರಂಭಿಸಿದನು.

ಆದಿಲಶಾಹಿಯ ದರ್ಬಾರದಲ್ಲಿ ಮರಾಠಿಭಾಷೆಯೊಂದಿಗೆ ಉರ್ದು ಭಾಷೆಯ ಬೆಳವಣಿಗೆಯೂ ಆಯಿತು. ಉರ್ದು ಭಾಷೆಯು ಮೊದಲು ಉತ್ತರದಲ್ಲಿ ಮುಸಲ್ಮಾನ ಸೈನಿಕರ ಶಿಬಿರಗಳಲ್ಲಿ ಪ್ರಾರಂಭವಾಯಿತು. ಸೈನ್ಯಗಳ ಅನುಕೂಲತೆಗಾಗಿ ಶಿಬಿರಗಳಲ್ಲಿ ಹುಟ್ಟಿದ ಭಾಷೆಯಿದು. ಈ ಭಾಷೆಯಲ್ಲಿ ಫಾರ್ಶಿ, ಅರಬ್ಬಿ, ಹಿಂದೀ, ಸಂಸ್ಕೃತ ಭಾಷೆಗಳ ಶಬ್ದಗಳು ಕಂಡುಬರುತ್ತವೆ. ದಕ್ಷಿಣದಲ್ಲಿಯ ಉರ್ದು ಭಾಷೆಯು ಉತ್ತರದಲ್ಲಿಯ ಉರ್ದು ಭಾಷೆಗಿಂತ ಕೆಲವು ವಿಷಯಗಳಲ್ಲಿ ಭಿನ್ನವಾಗಿರುತ್ತದೆ. ಬಹಮನಿ ಸುಲ್ತಾನರ ಆಶ್ರಯ ದೊರೆತದ್ದರಿಂದ ಕವಿಗಳೂ ಲೇಖಕರೂ ಈ ಭಾಷೆಯಲ್ಲಿ ಗ್ರಂಥರಚನೆಯನ್ನು ಪ್ರಾರಂಭಿಸಿದರು. ವಿಜಾಪುರ ಮತ್ತು ಗೋವಳಕೊಂಡಗಳಲ್ಲಿಯ ಕೆಲವು ಸುಲ್ತಾನರು ಉರ್ದುವಿನಲ್ಲಿ ಉತ್ತಮ ಕಾವ್ಯ ರಚನೆ ಮಾಡಿದ್ದಾರೆ. ವಿಜಾಪುರದ ಅಲ್ಲಿ ಆದಿಲಶಾಹಾನ ದರ್ಬಾರದಲ್ಲಿ ಪ್ರಖ್ಯಾತ ಉರ್ದು ಕವಿ ಸಸ್ರಾತನೆಂಬುವನಿದ್ದನು. ಇಬ್ರಾಹಿಮನ ದರ್ಬಾರದಲ್ಲಿ ಮುಲ್ಲಾ ಜಹೂರಿ ಎಂಬ ಉರ್ದು ಲೇಖಕನಿದ್ದನು. ಕುತುಬಶಾಹನ ದರ್ಬಾರದಲ್ಲಿ ಮಹಮ್ಮದ ಮೋದೀನನೆಂಬ ಲೇಖಕನೂ ಕವಿನಿಶಾತಿ ಎಂಬವನೂ ಪ್ರಸಿದ್ಧಿಗೆ ಬಂದರು.

ಬಹಮನಿ ಸುಲ್ತಾನರ ಕಾಲದಲ್ಲಿ ಕಲೆ-ಕೈಗಾರಿಕೆಗಳಿಗೆ ಉತ್ತೇಜನ ದೊರೆತು ಅನೇಕ ಉತ್ಕೃಷ್ಟ ಕಟ್ಟಡಗಳು ನಿರ್ಮಾಣವಾದವು. ಭಾಷೆ ಸಂಸ್ಕೃತಿಗಳ ವಿಷಯದಲ್ಲಿ ಹಿಂದು ಮುಸಲ್ಮಾನರಲ್ಲಿ ಮಿಶ್ರಣವು ಕಂಡುಬಂದಂತೆ ಕಟ್ಟಡಗಳ ನಿರ್ಮಾಣ ಕಾರ್ಯದಲ್ಲಿ ಉಭಯ ಸಂಸ್ಕೃತಿಗಳ ಸಮ್ಮಿಶ್ರಣವು ಕಂಡುಬರುತ್ತದೆ. ವಿಜಾಪುರದ ಇಬ್ರಾಹಿಮ ರೋಜ್ಹಾ ಕಟ್ಟಡವು ಈ ದೃಷ್ಟಿಯಿಂದ ಮಹತ್ವದ್ದಿದೆ. ಈ ಸ್ಮಾರಕದಲ್ಲಿ ಕಮಲದ ಆಕೃತಿಗಳನ್ನು ತೆಗೆಯಲಾಗಿದ್ದು ಹಿಂದು ಶಿಲ್ಪಕಲೆಯ ಪ್ರಭಾವವೂ

ಹೆಚ್ಚಾಗಿ ಕಂಡುಬರುತ್ತಿದೆ. ಮಸೀದೆ ಹಾಗೂ ಭವ್ಯ ಕಟ್ಟಡ ಇವುಗಳ ರಚನೆಯಲ್ಲಿ ಹಿಂದು ಮುಸಲ್ಮಾನ ಕಲೆಯ ಮಿಶ್ರಣವು ಕಂಡುಬರುತ್ತದೆ.



ಇಬ್ರಾಹಿಮ ರೋಝಾ ( ವಿಜಾಪುರ )

ಬಹಮನಿ ಸುಲ್ತಾನರಿಗೆ ಕಿಲ್ಲೆಗಳನ್ನು ಕಟ್ಟಿಸುವ ಮೋಹವಿತ್ತು. ಗಾವಿಲ-ಗಡ, ನರ್ನಾಳಾ, ಪರಿಂಡಾ, ನಲದುರ್ಗ ಮುಂತಾದ ಅವರು ಕಟ್ಟಿಸಿದ ಕೋಟೆಗಳು, ಈ ಮಾದರಿಯ ಕೆಲಸದಲ್ಲಿ ಉತ್ತಮ ಉದಾಹರಣೆಗಳಾಗಿವೆ. ನರ್ನಾಳಾ ಕಿಲ್ಲೆಯಲ್ಲಿ ಕಲ್ಲಿನಲ್ಲಿಯ ಕೆತ್ತನೆಯ ಕೆಲಸವು ಉತ್ತಮವಾಗಿದೆ. ಗುಲಬರ್ಗಾದಲ್ಲಿಯ ಜಾಮಿ ಮಸೀದ, ದೌಲತಾಬಾದದಲ್ಲಿಯ ಚಾಂದಮಿನಾರ ಮತ್ತು ಗವಾನನನು ಕಟ್ಟಿಸಿದ ಪಾಠಶಾಲೆ (ಮದ್ರಸಾ)ಗಳು ಕಲೆಯ ದೃಷ್ಟಿಯಿಂದ ಉಚ್ಚಪ್ರತಿಯವಾಗಿವೆ. ವಿಜಾಪುರದ ಗೋಳಗುಮ್ಮಟವಂತೂ ಸ್ಥಾಪತ್ಯಕೌಶಲ್ಯದ ಬಗ್ಗೆ ವಿಶ್ವವಿಖ್ಯಾತವಾಗಿದೆ.

## ಅವತರಣಿಕೆ

“ ಕೋಟೆಕೊತ್ತಳಗಳನ್ನು ವಶಪಡಿಸಿಕೊಂಡು ಮುಸಲ್ಮಾನ ವಿಜಯಿಗಳು ಸುತ್ತುಮುತ್ತಲಿನ ಪ್ರದೇಶದಲ್ಲಿ ತಮ್ಮ ಅಧಿಕಾರವನ್ನು ಪ್ರಸ್ಥಾಪಿಸುತ್ತಿದ್ದರು. ವಿಜಯಿ ಮುಸಲ್ಮಾನರು ತಾವು ಗೆದ್ದುಕೊಂಡ ಕಿಲ್ಲೆಯನ್ನು ನೆಲಸಮ ಮಾಡುತ್ತಿದ್ದರು. ಇಲ್ಲವೆ ಅಲ್ಲಿ ಅದರ ರಕ್ಷಣೆಗಾಗಿ ಸಿಬ್ಬಂದಿಯನ್ನಾದರೂ ಇಡುತ್ತಿದ್ದರು.

ಹಿಂದೂ ರೈತರ ಸ್ಥಿತಿಗತಿಯಲ್ಲಿ ಯಾವ ಬದಲಾವಣೆಯೂ ಆಗುತ್ತಿರಲಿಲ್ಲ. ಅವನ ಒಕ್ಕಲತನವು ಎಂದಿನಂತೆ ಅನಿರ್ಬಂಧವಾಗಿ ಸಾಗುತ್ತಿತ್ತು. ಆದರೆ ಹಿಂದೂ ಜಮೀನ ದಾರರ ಬದಲು ಮುಸಲ್ಮಾನ ಜಮೀನದಾರನಿಗೆ ಕರ ಕೊಡುತ್ತಿದ್ದರಷ್ಟೇ. ವರ್ತಕರೂ ಕಲಾಕಾರರೂ ತಮ್ಮ ಉದ್ದಿಮೆಗಳನ್ನು ಯಥಾಪ್ರಕಾರ ನಡೆಸಿಕೊಂಡು ಬರುತ್ತಿದ್ದರು. ರಾಜಕುಟುಂಬದವರಿಗೆ ಮಾತ್ರ ಗೆದ್ದವರೆದುರು ಸಂಪೂರ್ಣ ಶರಣಾ ಗತರಾಗಿ ನಡೆಯಬೇಕಾಗುತ್ತಿತ್ತು. ನಿರ್ದಿಷ್ಟ ಹಣ ಕೊಡುವ ಕರಾರಿನಿಂದ ಜಮೀನ ದಾರನ ಜಮೀನುಗಳನ್ನು ಅವರ ಕಡೆಗೆ ಬಿಟ್ಟಿರಲಾಗುತ್ತಿತ್ತು. ಚಿಕ್ಕ ಚಿಕ್ಕ ಪ್ರದೇಶ ಗಳಿಗೆ ಅಧಿಕಾರಿಗಳೆಂದು ನೇಮಿಸಲಾದ ಮುಸಲ್ಮಾನ ಸೈನ್ಯಾಧಿಕಾರಿಯ ಕಡೆಗೆ ಅವನ ಪ್ರದೇಶದ ಸಂರಕ್ಷಣೆಯ ಹೊಣೆಯಿರುತ್ತಿತ್ತು. ಮುಸಲ್ಮಾನರು ಹಳ್ಳಿಗಳಲ್ಲಿ ನೆಲೆಸುತ್ತಿದ್ದಿಲ್ಲ. ಹಿಂದು ರಾಜರ ಆಳಿಕೆಯಲ್ಲಿಯೆ ತಾವಿದ್ದೇವೆಂಬಂತೆ ಹಿಂದುಗಳು ಇರುತ್ತಿದ್ದರು. ಅವರ ಧರ್ಮಕಾರ್ಯಗಳಲ್ಲಿ ಯಾವ ವ್ಯತ್ಯಯವೂ ಬರುತ್ತಿರಲಿಲ್ಲ. ಆದರೆ ಯುದ್ಧದ ಗಾಳಿ ಬೀಸಿದಾಗ ಮಾತ್ರ ಅವರ ದೇವಾಲಯಗಳೂ ತೀರ್ಥಗಳೂ ಭ್ರಷ್ಟಾಕಾರ ಹೊಂದುತ್ತಿದ್ದವು. ಇಲ್ಲದಿದ್ದರೆ ಶಾಂತಿಯ ಕಾಲದಲ್ಲಿ ಅವರ ದೇವಾ ಲಯಗಳಿಗೆ ಯಾವ ತೊಂದರೆಯೂ ಇರುತ್ತಿದ್ದಿಲ್ಲ.''

"ಹಿಂದು ಜಮೀನದಾರನು ತನ್ನ ಆಶ್ರಯದಲ್ಲಿಯ ಸಿಪಾಯಿಗಳೊಂದಿಗೆ ಮುಸಲ್ಮಾನಿ ಸೈನ್ಯವನ್ನು ಸೇರಿ ಪ್ರಾಮಾಣಿಕತನದಿಂದ ಸೇವೆ ಸಲ್ಲಿಸುತ್ತಿದ್ದನು. ಇದರಿಂದ ಮುಸಲ್ಮಾನಿ ಸೈನ್ಯದಲ್ಲಿ ಕ್ರಮಶಃ ಬದಲಾವಣೆಯಾಗುತ್ತ ಹೋಗುತ್ತಿತ್ತು. ಆರಬರ ಹಾಗೂ ಹಬಸಿಗಳ ಪ್ರತ್ಯೇಕ ಪಡೆಗಳಿರುತ್ತಿದ್ದವು. ಆದರೆ ಸೈನ್ಯದಲ್ಲಿ ಹಿಂದುಗಳ ಸಂಖ್ಯೆಯೆ ಹೆಚ್ಚಾಗಿರುತ್ತಿತ್ತು. ಆದ್ದರಿಂದ ಸೈನಿಕರ ಯುದ್ಧ ಪದ್ಧತಿ ಯಲ್ಲಿ ಮಾತ್ರ ಬದಲಾವಣೆ ಕಂಡು ಬಂದಿತು.. ಕೊನೆಗೆ ಸೈನ್ಯದ ಕಾರ್ಯಕ್ಷಮ ತೆಯೂ ಕುಗ್ಗಿತು.''

-ದಕ್ಖನದ ಇತಿಹಾಸ

(ಗ್ರಿಬಲ್)

ಅ

೧. ಮಲಿಕ ಅಂಬರನು ನಿಜಾಮಶಾಹಿಯ ಉದ್ಧಾರಕನೆಂಬುದು ಹೇಗೆ ಎಂಬುದನ್ನು ವಿವರಿಸಿರಿ ?

೨. ನಿಜಾಮಶಾಹಿಯನ್ನು ರಕ್ಷಿಸಲು ಶಹಾಜಿಯು ಮಾಡಿದ ಪ್ರಯತ್ನಗಳಾವವು ?

೩. ಟಿಪ್ಪಣಿ ಬರೆಯಿರಿ:— (ಅ) ಮೀರ ಜುಮ್ಲಾ, (ಆ) ವಿಜಾಪುರದ ವೈಭವ, (ಇ) ಖಾನದೇಶದ ರಾಜ್ಯದ ಮಹತ್ವ, (ಈ) ಬಹಮನಿ ರಾಜ್ಯದ ಸುಲ್ತಾನರ ಕಾಲದ ಕಟ್ಟಡಗಳು.

೪. ನಿಜಾಮಶಾಹಿ, ಕುತುಬಶಾಹಿ ಮತ್ತು ಆದಿಲಶಾಹಿ ರಾಜ್ಯಗಳಲ್ಲಿ ಹಿಂದುಗಳಿಗೆ ಮಹತ್ವದ ಸ್ಥಾನವಿತ್ತು ಎಂಬುದನ್ನು ಸ್ಪಷ್ಟೀಕರಿಸಿರಿ. ಈ ಸುಲ್ತಾನರ ಧಾರ್ಮಿಕ ಧೋರಣದ ಸ್ವರೂಪವನ್ನು ಸ್ಪಷ್ಟಪಡಿಸುವ ಎರಡು ಉದಾಹರಣೆಗಳನ್ನು ಕೊಡಿರಿ ?

೫. ದಕ್ಷಿಣ ಭಾರತದಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸಬೇಕೆನ್ನುವ ಕಾರ್ಯದಲ್ಲಿ ದಿಲ್ಲಿಯ ಸುಲ್ತಾನರಿಗೆ ಯಶಸ್ಸೇಕೆ ದೊರೆಯಲಿಲ್ಲ ?

೬. ದಕ್ಷಿಣದಲ್ಲಿಯ ಮುಸಲ್ಮಾನಿ ರಾಜ್ಯದಲ್ಲಿಯ ಹಿಂದು ರೈತರ, ಜಮೀನದಾರರ ಸಾಮಾಜಿಕ ಹಾಗೂ ಧಾರ್ಮಿಕ ಜೀವನದ ವಿಷಯದಲ್ಲಿ 'ಗ್ರಿಬಲ್' ಎಂಬ ಗ್ರಂಥಕಾರನು ಏನು ಹೇಳಿದ್ದಾನೆ ?

## ೭ನೆಯ ಪಾಠ

## ಯುರೋಪದೊಳಗಿನ ವಿಕಾಸಯುಗ

**ಹೊಸಯುಗ :—** ಐತಿಹಾಸಿಕ ಸ್ಥಿತ್ಯಂತರಗಳ ಯೋಗ್ಯ ಆಕಲನವಾಗ ಬೇಕೆಂದು ನಾವು ನಮ್ಮ ಕಲ್ಪನೆಯ ಮೇರೆಗೆ ಇತಿಹಾಸದಲ್ಲಿ ಕಾಲ ಭಾಗಗಳನ್ನು ಮಾಡುತ್ತೇವೆ. ಮುಹಮ್ಮದ ಪೈಗಂಬರ ಮತ್ತು ಹರ್ಷವರ್ಧನ ಇವರ ಕಾಲದ ನಂತರ ಅಂದರೆ ೭ ನೆಯ ಶತಮಾನದ ಉತ್ತರಾರ್ಧದಿಂದ ಪ್ರಾಚೀನ ಕಾಲವು ಮುಗಿದು ಮಧ್ಯಯುಗವು ಸುರುವಾಗುತ್ತದೆ. ಸ್ಥೂಲಮಾನದಿಂದ ಸ. ೬೫೦ ರಿಂದ ೧೪೫೦ ರ ಅವಧಿಯು ಮಧ್ಯಯುಗವೆನಿಸುವದು. ೧೫ ನೆಯ ಶತಕದ ಆರಂಭದಲ್ಲಿ ಅನೇಕ ಶಾಸ್ತ್ರೀಯ ಮತ್ತು ಭೌಗೋಲಿಕ ಶೋಧಗಳಾಗಿ ಮಾನವೀ ಪ್ರಗತಿಯಲ್ಲಿ ಅತ್ಯಂತ ಮಹತ್ವದ ಘಟನೆಗಳು ಸಂಭವಿಸಿದವು. ಮಾನವೀ ಇತಿಹಾಸದಲ್ಲಿ ೧೫ ನೆಯ ಶತಕದಿಂದ 'ಶಾಸ್ತ್ರಯುಗ'ವು ಆರಂಭವಾಯಿತು. ಆಧುನಿಕ ಯುಗವು ಪ್ರಾರಂಭವಾಯಿತು. ಆಧುನಿಕ ಯುಗವು ಅಲ್ಲಿಂದಲೇ ಸುರುವಾಯಿತೆಂದು ಗ್ರಹಿಸುತ್ತಾರೆ. ಈ ದೃಷ್ಟಿಯಿಂದ ಭಾರತದ ಇತಿಹಾಸದಲ್ಲಿ ಬಾಬರನ ಆಗಮನದಿಂದ 'ಹೊಸ ಯುಗ'ವು ಪ್ರಾರಂಭವಾಯಿತು.

**ಮಧ್ಯಯುಗದೊಳಗಿನ ಏಶಿಯಾ :—** ಮಧ್ಯಯುಗದಲ್ಲಿ (೭ ರಿಂದ ೧೫ ನೆಯ ಶತಕ) ಏಶಿಯಾದೊಳಗಿನ ರಾಜಕೀಯ ಪರಿಸ್ಥಿತಿಯು ಯಾವ ಪ್ರಕಾರದ್ದಿತ್ತು ? ಮುಹಮ್ಮದ ಪೈಗಂಬರನ ತರುವಾಯ ಖಲೀಫನು ಉತ್ತರ ಆಫ್ರಿಕಾ, ಇಜಿಪ್ತ, ಸ್ಪೇನದಿಂದ ಏಶಿಯಾ ಮಾಯನರದವರೆಗಿನ ಭೂಮಧ್ಯ ಸಮುದ್ರಕ್ಕೆ ಹೊಂದಿಕೊಂಡ ಪ್ರದೇಶ ಮತ್ತು ಸಿಸಿಲಿ, ಕ್ರೀಟ ಮತ್ತು ರ್‍ಹೋಡ್ಸ ಈ ದ್ವೀಪಗಳ ಇಷ್ಟು ಭಾಗಗಳನ್ನು ಇಸ್ಲಾಮೀ ಸತ್ತೆಯ ಕೆಳಗೆ ತಂದನು. ಪೂರ್ವದ ಕಡೆಗೆ ಸಿಂಧ ಪ್ರಾಂತದವರೆಗೆ ಅವರ ಸತ್ತೆಯು ಸ್ಥಾಪಿತವಾಯಿತು. ಇಷ್ಟು ವಿಸ್ತೃತ ಸಾಮ್ರಾಜ್ಯದ ಮೂಲಕ ಕಾರ್ಡೋವ್ಹಾ, ಬಗದಾದ ಮತ್ತು ಕಾಯರೋ ಈ ಮೂರು

ಸ್ಥಳಗಳಲ್ಲಿ ಖಿಲಾಫತಗಳ ಸ್ಥಾಪನೆಯಾಯಿತು. ಮುಂದೆ ಸ. ೧೨೫೮ ರಲ್ಲಿ ಮಂಗೋಲಿಯನ ಆಕ್ರಮಕರು ಬಗದಾದವನ್ನು ವಿಧ್ವಂಸ ಮಾಡಿ ಅರಬರು ಸ್ಥಾಪಿಸಿದ್ದ ಇಸ್ಲಾಮೀ ಸಾಮ್ರಾಜ್ಯವನ್ನು ನಾಮಶೇಷ ಮಾಡಿದರು. ಮಂಗೋಲಿಯನರ ಮುಂದಾಳುವಾದ ಚಂಗೀಜಖಾನನು (ಸ. ೧೧೬೨–೧೨೨೭) ಚೀನ ಮತ್ತು ಮಧ್ಯ ಏಶಿಯಾದಲ್ಲಿ ವೈಭವಶಾಲಿಯಾದ ಮಂಗೋಲಿಯನ ಸಾಮ್ರಾಜ್ಯವನ್ನು ಸ್ಥಾಪಿಸಿದನು (ಸ. ೧೨೦೦ ಸುಮಾರಿಗೆ). ಚಂಗೀಜಖಾನನು ಚೀನೀ ಜನರಿಂದ ಬಂದೂಕಿನ ಮದ್ದಿನ ತಯಾರಿಕೆಯನ್ನು ಕಲಿತುಕೊಂಡಿದ್ದನು. ಆದರ ಬಲದಿಂದಲೇ ಅವನು ತನ್ನ ಶತ್ರುಗಳನ್ನು ಸೋಲಿಸಿದನು. ಅವನ ನಂತರದ ಕುಬ್ಲಾಯಿಖಾನನ (ಸ ೧೨೧೬ ರಿಂದ ೧೨೯೪) ಸಾಮ್ರಾಜ್ಯವು ಪ್ಯಾಸಿಫಿಕ್‌ದಿಂದ ಭೂಮಧ್ಯ ಸಮುದ್ರದ ವರೆಗಿನ ವಿಸ್ತೃತ ಪ್ರದೇಶದಲ್ಲಿ ಪಸರಿಸಿತ್ತು. ಆ ಕಾಲದಲ್ಲಿ ಮಂಗೋಲ ಸಾಮ್ರಾಜ್ಯದ ವೈಭವ ಮತ್ತು ಸಾಮರ್ಥ್ಯ ಇವು ಕಳಸಕ್ಕೆ ಮುಟ್ಟಿದ್ದವು. ಇಟಾಲಿಯನ ಪ್ರವಾಸಿ ಮಾರ್ಕೊ ಪೋಲೋ ಎಂಬವನು ಕುಬಲಾಯಿಖಾನನ ರಾಜ್ಯಕ್ಕೆ ಬಂದು ಅವನ ದರ್ಬಾರದಲ್ಲಿ ಅನೇಕ ವರ್ಷಗಳ ವರೆಗೆ ಇದ್ದನು. ಮಾರ್ಕೊಪೋಲೋನ ಪ್ರವಾಸ ವರ್ಣನೆಯಿಂದ ಚೀನ, ಜಪಾನ, ಮತ್ತು ಭಾರತ ಈ ದೇಶಗಳ ವಿಷಯಕ್ಕೆ ವಿಧವಿಧವಾದ ಮನೋರಂಜಕ ಸಂಗತಿಗಳು ತಿಳಿದಿವೆ. ಈ ಪೌರ್ವಾತ್ಯ ದೇಶಗಳೊಳಗಿನ ಧನಧಾನ್ಯ ಸಮೃದ್ಧಿ, ಬಂಗಾರ ಮತ್ತು ವಿವಿಧ ವಸ್ತ್ರಭೂಷಣಗಳ ವಿಪುಲತೆ ಇವುಗಳನ್ನು ಕಣ್ಣಾರೆ ನೋಡಿದ ಸತ್ಯ-ವೃತ್ತಾಂತವನ್ನು ಮಾರ್ಕೋ ಪೋಲೋನು ತನ್ನ ಯುರೋಪೀಯ ಬಂಧುಗಳ ಮುಂದೆ ಇಟ್ಟಿದ್ದಾನೆ. ಅಂದಿನಿಂದ ಪೂರ್ವದ ಕಡೆಯ ದೇಶಗಳ ವಿಷಯವಾಗಿ ಯುರೋಪಿ-ಯನ್ನರ ಕುತೂಹಲವು ಹೆಚ್ಚುತ್ತ ನಡೆಯಿತು.

**ಮಧ್ಯ ಯುಗದೊಳಗಿನ ಯುರೋಪದ ಆರ್ಥಿಕ ಜೀವನ:—** ಈ ಕುತೂಹಲವು ನಿಜವಾಗಿಯೂ ಈ ಮೊದಲೇ ಹುಟ್ಟಿದ್ದಿತು. ಹಿಂದೆ ಹೇಳಿದಂತೆ ಸಿಸಿಲಿ ಇತ್ಯಾದಿ ಭಾಗಗಳಲ್ಲಿ ಅರಬರು ವ್ಯಾಪಿಸಿದ ನಂತರ ಅರಬ ಜನರ ಮುಖಾಂತರ ಪೂರ್ವದ ಕಡೆಯ ದೇಶಗಳ ಮಾಹಿತಿಯು ಮುಂಚೆ ಇಟಾಲಿಯನ್ನರಿಗೆ ಆಗಿ ಕಾಲಾಂತರದಲ್ಲಿ ಅದು ಯುರೋಪದ ಇತರ ಭಾಗಗಳಿಗೆ ಪಸರಿಸಿತು. ಯುರೋಪದ ಮಾನದಿಂದ ನೋಡಿದರೆ ಮಧ್ಯ ಯುಗದಲ್ಲಿ ಪೂರ್ವದ ಕಡೆಯ ಚೀನ, ಭಾರತ ಇತ್ಯಾದಿ ದೇಶಗಳು ಎಷ್ಟೋ ಮುಂದುವರಿದಿದ್ದವು. ಆ ದೇಶದಿಂದ ಬರುವ ರೇಶಿಮೆ, ಬಟ್ಟೆ, ಹಸ್ತಿದಂತ, ಮತ್ತು ವಿಶೇಷವಾಗಿ ಮಸಾಲೆಯ ಸಾಮಾನು ಇವುಗಳಿಗೆ ಯುರೋಪದಲ್ಲಿ ಕಲ್ಪನಾತೀತವಾದ ಬೇಡಿಕೆ ಇದ್ದಿತು. ಪೂರ್ವದ ಕಡೆಯ ದೇಶ-ಗಳಿಂದ ಈ ಪದಾರ್ಥಗಳನ್ನು ತಂದು, ಆ ಮಾಲನ್ನು ಅರಬ ವ್ಯಾಪಾರಿಗಳು ವ್ಹೆನಿಸ, ಜಿನೋವಾ, ಇವುಗಳಲ್ಲಿಯ ಯುರೋಪಿಯನ್ ವ್ಯಾಪಾರಿಗಳಿಗೆ ಆ ಪದಾರ್ಥಗಳನ್ನು ಯುರೋಪದಲ್ಲೆಲ್ಲ ಮಾರುತ್ತಿದ್ದರು. ಈ ಪದಾರ್ಥಗಳ ಬೇಡಿಕೆಯು ದಿನದಿನಕ್ಕೆ ಹೆಚ್ಚುತ್ತ ನಡೆಯಿತು. ವ್ಹೆನಿಸ, ಮತ್ತು ಜಿನೋವಾ, ಇವುಗಳ ಅರಬ

ವ್ಯಾಪಾರಿಗಳು ಕಲ್ಪನಾತೀತವಾದ ಲಾಭ ಹೊಡೆಯಲು ಸುರುವು ಮಾಡಿದ್ದರು. ಮೂಲ ಬೆಲೆಯ ೬೦ ಪಟ್ಟು ತುಟ್ಟಿಯ ದರದಿಂದ ಈ ಪದಾರ್ಥಗಳನ್ನು ಯುರೋಪದ ಗಿರಾಕಿಗಳು ಕೊಂಡುಕೊಳ್ಳಬೇಕಾಗುತ್ತಿತ್ತು. ಆದ್ದರಿಂದ ಆರಬ ವ್ಯಾಪಾರಿಗಳ ಈ ಗುತ್ತಿಗೆಯನ್ನು ತಮ್ಮ ಹಸ್ತಗತ ಮಾಡಿಕೊಳ್ಳಲು ಇತರ ಯುರೋಪಿಯನ್ ಜನರು ವಿಶೇಷತಃ ಪೋರ್ತುಗೀಜ ಮತ್ತು ಸ್ಪಾನಿಶ್ ಜನರು ಸಿದ್ಧರಾದರು.

**ಯುರೋಪದೊಳಗಿನ ಜ್ಞಾನಯುಗ:**— ಪೂರ್ವದ ಕಡೆಯ ಈ ಲಾಭದಾಯಕ ವ್ಯಾಪಾರದಿಂದ ಇಟಲಿಯೊಳಗಿನ ವ್ಹೆನಿಸ, ಜಿನೋವಾ, ಫ್ಲಾರೆನ್ಸ ಮತ್ತು ಮಿಲಾನ ಈ ನಗರಗಳು ಅತ್ಯಂತ ಶ್ರೀಮಂತವಾದವು. ಪ್ರಾಚೀನ ಕಾಲದ ರೋಮನ್ ಸಾಮ್ರಾಜ್ಯದ ವೈಭವದ ಪುನರುತ್ಥಾನದ ಸುಖ ಸ್ವಪ್ನಗಳು ಇಲ್ಲಿಯ ಇಟಾಲಿಯನ್ ಜನರಿಗೆ ಬೀಳಹತ್ತಿದವು. ಸಮೃದ್ಧಿ ಮತ್ತು ಸ್ವಾಸ್ಥ್ಯ ಇವುಗಳಿಂದ ಪ್ರವಾಸ ಮಾಡಬೇಕು ಮತ್ತು ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕು ಎಂಬ ಇಚ್ಛೆಯು ಅವರಿಗೆ ಆಯಿತು. ಆದರೆ ಜ್ಞಾನೋಪಾಸನೆಗೆ ಬೇಕಾಗುವ ಗ್ರಂಥ ಸಂಪತ್ತಿಯು ದೊರಕುತ್ತಿದ್ದಿಲ್ಲ. ಅದಕ್ಕಾಗಿ ಹಳೆಯ ಲ್ಯಾಟಿನ್ ಮತ್ತು ಗ್ರೀಕ ವಾಙ್ಮಯದೊಳಗಿನ ಗ್ರಂಥಗಳ ಶೋಧವು ಸುರುವಾಯಿತು. ಆ ಕಾಲದ ಗ್ರಂಥಗಳು ಕೈಬರಹದವಿದ್ದವು. ಮುದ್ರಣ ಕಲೆಯು ಇನ್ನೂ ಯುರೋಪಿಯನ್ನರಿಗೆ ಗೊತ್ತಿರಲಿಲ್ಲ. ಕೈಯಿಂದ ಗ್ರಂಥಗಳನ್ನು ಬರೆಯಿಸಲು ಬಹಳ ವೇಳೆ ಮತ್ತು ಖರ್ಚು ಹತ್ತಿತು. ಈ ಕಾರಣದಿಂದ ಬೆಳೆಯುತ್ತಿರುವ ಜ್ಞಾನಲಾಲಸೆಯನ್ನು ತೃಪ್ತಿಗೊಳಿಸಲು ಗ್ರಂಥಗಳ ಅವಶ್ಯಕತೆಯುಂಟಾಯಿತು.

**ಮುದ್ರಣ ಕಲೆಯ ಶೋಧ:**— "ಅವಶ್ಯಕತೆಯೇ ಸಂಶೋಧನದ ಜನನಿಯು" ಎಂಬ ನಾಣ್ಣುಡಿಯ ನಿದರ್ಶನಗಳು ಈ ಅವಧಿಯಲ್ಲಿ ಬಂದವು. ಚೀನೀ ಜನರು ಗೊತ್ತು ಹಚ್ಚಿದ ಕಾಗದ ಮತ್ತು ಮುದ್ರಣ ಕಲೆ ಇವುಗಳ ಶೋಧವನ್ನು ಆರಬರ ಮುಖಾಂತರ ಯುರೋಪಿಯನ್ನರು ತಿಳಿದುಕೊಂಡು ಸ್ವಲ್ಪೇ ಅವಧಿಯಲ್ಲಿ ಅದನ್ನು ತಮ್ಮದನ್ನಾಗಿ ಮಾಡಿಕೊಂಡರು. ಕಾಗದದ ಶೋಧವು ಗೊತ್ತಾಗುವ ಮುಂಚೆ ಯುರೋಪಿಯನ್ ಜನರು ತಾವು ಕೂಡ ಹಾಕಿದ ನುಣುಪಾದ ತೊಗಟೆಯ ಮೇಲೆ ಬರೆಯುತ್ತಿದ್ದರು. ಈ ತೊಗಟೆಯ ಕಾಗದ ತಯಾರಿಸುವದು ಬಹಳ ತೊಂದರೆಯದೂ ಖರ್ಚಿನದೂ ಆಗಿತ್ತು. ಅದರ ಸ್ಥಳವನ್ನು ಪ್ರಚಲಿತ ಕಾಗದವು ಆಕ್ರಮಿಸುತ್ತಲೇ ಗ್ರಂಥ ನಿರ್ಮಾಣಕ್ಕೆ ಎಷ್ಟು ಚಾಲನೆಯು ದೊರಕಿರಬೇಕು! ಮುದ್ರಣ ಕಲೆಯಲ್ಲಿ ಮುಂಚೆ ಸ. ೧೪೫೦ ಸುಮಾರಿಗೆ ಜರ್ಮನಿಯಲ್ಲಿ ಜಾನ ಗಟೆನಬರ್ಗ ಎಂಬವನು ಯುರೋಪದೊಳಗೆ ಮೊದಲನೆಯ ಮುದ್ರಣಾಲಯವನ್ನು ತೆಗೆದನು. ಅವನು ಮೊದಲು ಲ್ಯಾಟಿನ್ ಭಾಷೆಯೊಳಗೆ ಬಾಯಬಲ್ ಗ್ರಂಥವನ್ನು ಮುದ್ರಿಸಿದನು. ಮುದ್ರಣ ಕಲೆಯು ಜರ್ಮನಿಯಿಂದ ಇಟಲಿಗೆ ಬಂದಿತು. ಅಲ್ಲಿ ಅದಕ್ಕೆ ಬಹಳ ಪ್ರೋತ್ಸಾಹನೆಯು ದೊರೆಯಿತು. ೧೫ನೆಯ ಶತಕದ ಕೊನೆಯಲ್ಲಿ ಕೇವಲ ವ್ಹೆನಿಸ ಒಂದರಲ್ಲಿಯೇ ಎರಡು ನೂರರ ಮೇಲೆ ಮುದ್ರಣಾಲಯಗಳು ಹೊರಟವು.

ಸ. ೧೪೭೭ರಲ್ಲಿ ವಿಲಿಯಮ್ ಕ್ಯಾಕ್ಸಟನ್ನನು ಇಂಗ್ಲಂಡದಲ್ಲಿ ಮೊದಲನೆಯ ಮುದ್ರಣಾಲಯವನ್ನು ತೆಗೆದನು. ಅವನ ಮುದ್ರಣಾಲಯವನ್ನು ನೋಡಲು ಜಿಜ್ಞಾಸುಗಳಾದ ಪ್ರೇಕ್ಷಕರ ಗುಂಪುಗಳು ಎಡೆಬಿಡದೆ ಬರುತ್ತಿದ್ದವು. ಒಂದು ದಿವಸಕ್ಕೆ ಒಂದು ಪುಸ್ತಕವು ಮುದ್ರಣ ಹೊಂದುತ್ತದೆಂಬುದು ಜನರಿಗೆ ಬಹಳ ಆಶ್ಚರ್ಯ-ವೆನಿಸಿತು. ಇಂಗ್ಲಂಡದ ರಾಜನಾದ ೪ನೆಯ ಎಡ್ವರ್ಡನು ಕೂಡ ಈ ಮುದ್ರಣಾ-ಲಯಕ್ಕೆ ಭೆಟ್ಟಿಯನ್ನಿತ್ತು ಕ್ಯಾಕ್ಸಟನ್ನನನ್ನು ಗೌರವಿಸಿದನು. ೧೪೯೦ ರಲ್ಲಿ ಕ್ಯಾಕ್ಸ-ಟನ್ನನು ಮರಣಹೊಂದಿದನು. ೧೪೭೭ ರಿಂದ ೧೪೯೦ ರ ವರೆಗಿನ ಅವಧಿಯಲ್ಲಿ ಅವನು ಸುಮಾರು ನೂರು ಪುಸ್ತಕಗಳನ್ನು ಮುದ್ರಿಸಿದ್ದನು. ಅವುಗಳಲ್ಲಿ ಗದ್ಯ, ಪದ್ಯ, ಬಾಲವಾಙ್ಮಯ ಇತ್ಯಾದಿ ವಿವಿಧ ಪ್ರಕಾರದ ವಾಙ್ಮಯವಿದ್ದಿತು



ಕ್ಯಾಕ್ಸಟನ್ನನ ಮುದ್ರಣಾಲಯ

ಮುದ್ರಣ ಕಲೆಯ ಶೋಧವೇ ಮಾನವೀ ಇತಿಹಾಸದೊಳಗಿನ ಅತ್ಯಂತ ಮಹತ್ವದ ಘಟನೆಯು. ಇಲ್ಲಿಯವರೆಗಿನ ಜ್ಞಾನದ ಪ್ರಸಾರವು ಕೇವಲ ಅಲ್ಪ-ಸಂಖ್ಯಾಕ ಧನವಂತರ ಮಟ್ಟಿಗೆ ಮರ್ಯಾದಿತವಾಗಿದ್ದಿತು. ಅಗ್ಗದರದ ಪುಸ್ತಕ-ಗಳು ಹೊರಟವು. ಆದ್ದರಿಂದ ಜ್ಞಾನಗಂಗೆಯು ದೀನದರಿದ್ರರ ಗುಡಿಸಲದ ವರೆಗೆ ಬಂದುಬಿಟ್ಟಿತು. ಅತ್ಯಂತ ದರಿದ್ರರಾದ ಬುದ್ಧಿವಂತರು ಮುಂದೆ ಬರಲು ಮಾರ್ಗವು ಸುಗಮವಾಯಿತು.

**ಜ್ಞಾನದ ಪುನರುಜ್ಜೀವನದ ತೆರೆಗಳು:—** ಶಿಕ್ಷಣಪ್ರಸಾರಕ್ಕೆ ಚಾಲನೆ ದೊರೆಯುವಂತಹ ಇನ್ನೊಂದು ಮಹತ್ವಪೂರ್ಣ ಘಟನೆಯು ಇದೇ ಸುಮಾರಿಗೆ ಘಟಿಸಿತು. ರೋಮನ್ ಸಾಮ್ರಾಜ್ಯದ ಪೂರ್ವ ಭಾಗದ ರಾಜಧಾನಿಯಾದ ಕಾನಸ್ಟೆಂಟಿನೋಪಲವು ಸ. ೧೪೫೩ ರಲ್ಲಿ ತುರ್ಕರ ವಶವಾಯಿತು. ತುರ್ಕರು ಧರ್ಮಾಂಧ

ಮುಸಲ್ಮಾನರಿದ್ದುದರಿಂದ ಅವರ ಅಂಜಿಕೆಗಾಗಿ ಈ ರಾಜಧಾನಿಯೊಳಗಿನ ಅನೇಕ ಕ್ರಿಸ್ತಿ ಪಂಡಿತರು ತಮ್ಮ ಲ್ಯಾಟಿನ್ ಮತ್ತು ಗ್ರೀಕ ಭಾಷೆಗಳೊಳಗಿನ ಗ್ರಂಥ-ಭಾಂಡಾರವನ್ನು ತೆಗೆದುಕೊಂಡು ಇಟಲಿ, ಫ್ರಾನ್ಸ್, ಜರ್ಮನಿ ಮತ್ತು ಇಂಗ್ಲಂಡ ದೇಶಗಳನ್ನು ಆಶ್ರಯಿಸಲು ಹೊರಟುಹೋದರು. ತಮ್ಮ ಹೊಟ್ಟೆ ಹೊರೆದುಕೊಳ್ಳಲು ಅವರು ಆ ದೇಶಗಳಲ್ಲಿ ಶಾಲೆಗಳನ್ನು ಸ್ಥಾಪಿಸಿದರು. ಪ್ಯಾರಿಸ, ಆಕ್ಸಫರ್ಡ, ಕೆಂಬ್ರಿಜ್, ಪ್ರಾಗ, ಹಾಯಡೆಲಬರ್ಗ ಇತ್ಯಾದಿ ವಿಶ್ವವಿದ್ಯಾಲಯಗಳಲ್ಲಿ ಪ್ರಾಧ್ಯಾಪಕರೆಂದು ಕೆಲಸ ಮಾಡಹತ್ತಿದರು. ಈ ಪಂಡಿತರು ಪ್ರಾರಂಭಿಸಿದ ಜ್ಞಾನಪ್ರಸಾರಕಾರ್ಯದ ಆರಂಭದಿಂದ ಈ ದೇಶದ ಜನರ ಜ್ಞಾನಲಾಲಸೆಗೆ ಹೆಚ್ಚು ಹೆಚ್ಚು ಚಾಲನೆಯು ದೊರೆಯಿತು ಪೂರ್ವದ ಕಡೆಯ ದೇಶಗಳ ಮತ್ತು ಜನರ ವಿಷಯವಾಗಿ ಅವರ ಕುತೂಹಲವು ಹೆಚ್ಚುತ್ತ ನಡೆಯಿತು. ಸಾಹಸಿಗಳಾದ ಪ್ರವಾಸಿಕರು ಹೊಸ ಭೂಮಿಯ ಶೋಧ ಮಾಡಿದ್ದರೆಂಬ ಸಂಗತಿಯು ಅವರಿಗೆ ಮುಟ್ಟುತ್ತಲೇ ಆ ದೇಶದ ಸಂಬಂಧವಾಗಿ ಹೆಚ್ಚು ವಿವರವನ್ನೂ ದೊರಕಿಸಬೇಕು, ಮತ್ತು ತಮ್ಮ ಜೀವನವನ್ನು ಹೆಚ್ಚು ಸಮೃದ್ಧ ಮತ್ತು ಸುಖಿಯಾಗಿ ಮಾಡಿಕೊಳ್ಳಬೇಕೆಂಬ ಆತುರತೆಯು ಸುರು-ವಾಯಿತು.

ಜ್ಞಾನದ ಪುನರುಜ್ಜೀವನದ ಈ ಓಘದ ಮೂಲಕ ಆ ಕಾಲಕ್ಕೆ ಭೌಗೋಲಿಕ ಸಂಶೋಧನೆಗೆ ಹೆಚ್ಚಿನ ಚಾಲನೆಯು ದೊರೆಯಿತು. ಆಫ್ರಿಕಾಖಂಡದ ನಾಕಷ್ಟು ವಿಸ್ತಾರವಾದ ಪ್ರದೇಶ, ಅಮೇರಿಕಾ ಮತ್ತು ಆಸ್ಟ್ರೇಲಿಯಾ ಖಂಡಗಳು; ಅದರಂತೆ ಅಟ್ಲಾಂಟಿಕ ಮತ್ತು ಪ್ಯಾಸಿಫಿಕ ಮಹಾಸಾಗರಗಳ ವಿಸ್ತಾರ, ಇವುಗಳ ಬಗ್ಗೆ ಯುರೋಪಿಯನ್ ಜನರು ಅಜ್ಞಾನಾಂಧಕಾರದಲ್ಲಿದ್ದರು. 'ಕ್ರುಸೇಡು'ಗಳ ಮೂಲಕ ಪೂರ್ವದ ಕಡೆಯ ದೇಶಗಳ, ಜನರ ಮತ್ತು ಅವರ ಐಹಿಕ ಪ್ರಗತಿ ಇವುಗಳ ಕಲ್ಪನೆಯು ಯುರೋಪಿಯನ್‌ರಿಗೆ ಆಗಿ, ಆ ಸಮೃದ್ಧ ದೇಶಗಳ ಪರಿಚಯವನ್ನು ಹೆಚ್ಚಾಗಿ ಮಾಡಿಕೊಳ್ಳಬೇಕೆಂಬ ಲವಲವಿಕೆಯುಂಟಾಯಿತು. ೧೫ನೆಯ ಶತಕದ ಕೊನೆಯ ಭಾಗದಲ್ಲಿ ಈ ಅಜ್ಞಾತ ಪ್ರದೇಶಗಳ ಸಂಶೋಧನೆ ಮಾಡಲು ಅನೇಕ ಸಾಹಸಿ ನಾವಿಕ ವೀರರು, ವಿಶೇಷವಾಗಿ ಪೋರ್ತುಗಾಲ ಮತ್ತು ಸ್ಪೇನ ದೇಶಗಳಲ್ಲಿ ಮುಂದೆ ಬಂದರು. ಈ ವೀರರು ಯಾವ ಉದ್ದೇಶದಿಂದ ಪ್ರೇರಿತರಾಗಿ ಈ ಕಾರ್ಯ ವನ್ನು ಮಾಡಿದರೆಂಬುದರ ವಿಚಾರವನ್ನು ನಾವು ಈಗ ಮಾಡೋಣ.

**ಭೌಗೋಲಿಕ ಸಂಶೋಧನೆಯ ಉದ್ದೇಶ :—** ಜ್ಞಾನಯುಗದ ಉದಯ-ದಿಂದ ಯುರೋಪೀಯ ಜನರಲ್ಲಿ ಸಂಪತ್ತು ಮತ್ತು ಕೀರ್ತಿ ಇವುಗಳ ಮಹತ್ವಾ-ಕಾಂಕ್ಷೆಯು ಜಾಗ್ರತವಾಗಿತ್ತು. ಧರ್ಮಸುಧಾರಣೆಯ ಚಳವಳಿಯ ಮೂಲಕ ಯುರೋಪದಲ್ಲಿ ರೋಮನ್ ಕ್ಯಾಥೊಲಿಕ್ ಧರ್ಮಪೀಠದ ಪ್ರತಿಭೆಗೆ ಇಳಿಗಾಲವು ಪ್ರಾಪ್ತವಾಗಿತ್ತು. ಈ ಧರ್ಮಪೀಠದ ಪುರಸ್ಕರ್ತರಿಗೆ, ತಾವು ಯುರೋಪದ ಹೊರಗಿನ ದೇಶಗಳಲ್ಲಿ ಕ್ರಿಸ್ತೀ ಧರ್ಮದ ಪ್ರಚಾರ ಮಾಡಿದರೆ ತಮ್ಮ ಕಳೆದುಹೋದ ಪ್ರತಿಷ್ಠೆಯು ಮರಳಿ ದೊರೆಯುವದೆಂದು ಅನಿಸಹತ್ತಿತು. ಪೋರ್ತುಗಾಲ ರಾಷ್ಟ್ರವು

ಕಟ್ಟಾ ರೋಮನ್ ಕ್ಯಾಥೊಲಿಕ್ ಪಂಥದ್ದಾಗಿದ್ದಿತು. ಆಫ್ರಿಕೆಯ ಉತ್ತರ ಭಾಗ ಮತ್ತು ಸ್ಪೇನ, ಪೋರ್ತುಗಾಲ ಇವುಗಳೊಳಗಿನ ಮುಸಲ್ಮಾನರನ್ನು ಹೊರದೂಡಲು ಪೋರ್ತುಗಾಲವು ಕಂಕಣಬದ್ಧವಾಗಿದ್ದಿತು. ಧರ್ಮಾಂಧರಾದ ಪೋರ್ತುಗೀಜರು ಕ್ರಿಸ್ತೀ ಧರ್ಮಪ್ರಸಾರ ಮಾಡಲು ತೀರ ಅಧೀರರಾಗಿದ್ದರು. ಅದಕ್ಕಾಗಿ ಹೊಸ ದೇಶಗಳನ್ನು ಶೋಧಿಸಿ ತೆಗೆದು ಅಲ್ಲಿ ಧರ್ಮಪ್ರಸಾರ ಮಾಡಲು ಈ ಸಮಯಕ್ಕೆ ಉದ್ಯುಕ್ತರಾಗಿದ್ದರು. ಆದರೆ ವ್ಯಾಪಾರಿ ಮಹತ್ವಾಕಾಂಕ್ಷೆಯೆಂಬ ಎಲ್ಲಕ್ಕಿಂತ ಪ್ರಬಲ-ವಾದ ಉದ್ದೇಶವೇ ಈ ಉದ್ಯೋಗಕ್ಕೆ ತಳಹದಿಯಾಗಿದ್ದಿತು. ಚೀನ, ಹಿಂದುಸ್ಥಾನ 'ಮಸಾಲೆಯ ನಡುಗಡ್ಡೆಗಳು', ಆದಿ ಸಮೃದ್ಧ ದೇಶಗಳಿಗೆಹೋಗುವ ಮಾರ್ಗಗಳನ್ನು ವಶಪಡಿಸಿಕೊಂಡು, ಅಲ್ಲಿಯ ಅರಬ ಮತ್ತು ಇಟಾಲಿಯನ್ ಜನರ ಕೈಯೊಳಗಿನ ವ್ಯಾಪಾರವನ್ನು ತಾವು ಹಸ್ತಗತ ಮಾಡಿಕೊಳ್ಳಬೇಕೆಂಬ ಹಿರಿಯ ಮಹತ್ವಾಕಾಂಕ್ಷೆ ವಿಶೇಷವಾಗಿ ಪೋರ್ತುಗಾಲ ದೇಶದ ಮನಸ್ಸಿನಲ್ಲಿ ಉದ್ಭವಿಸಿತ್ತು. ಮಧ್ಯ ಯುಗದ ಉತ್ತರಾರ್ಧದಲ್ಲಿ, ಪೂರ್ವದ ಕಡೆಯ ಹಸ್ತಿದಂತ, ಮುತ್ತು, ವಜ್ರ, ರೇಶಿಮೆ ಮತ್ತು ನೂಲಿನ ಬಟ್ಟೆ ಇವುಗಳಿಗೆ ಯುರೋಪದಲ್ಲಿ ಬಹಳ ಬೇಡಿಕೆ ಇದ್ದಿತು. ಮಸಾಲೆಯ ಪದಾರ್ಥಗಳಂತೂ ( ಮೆಣಸು, ಲವಂಗ, ದಾಲಚಿನ್ನಿ, ಶುಂಠಿ ಇತ್ಯಾದಿ ) ಬಂಗಾರದ ದರಕ್ಕೆ ಮಾರಲಾಗುತ್ತಿದ್ದವು. ಮಾಂಸವನ್ನು ಕಾಯ್ದಿರಿಸುವದಕ್ಕೂ, ಮಾಂಸ ಮತ್ತು ಮದ್ಯ ಇವುಗಳ ರುಚಿಯನ್ನು ಹೆಚ್ಚಿಸುವದಕ್ಕಾಗಿಯೂ ಔಷಧಗಳನ್ನು ತಯಾರಿಸುವ-ದಕ್ಕಾಗಿಯೂ ( ವಿಶೇಷವಾಗಿ ಯುರೋಪದ ಉತ್ತರ ಭಾಗದ ಜನರಿಗೆ ) ಈ ಪದಾರ್ಥ ಗಳು ಬಹಳ ಬೇಕಾಗುತ್ತಿದ್ದವು. ಪೂರ್ವದ ಕಡೆಯಿಂದ ಈ ಪದಾರ್ಥಗಳು ಯುರೋಪಕ್ಕೆ ಬರುವ ಮಾರ್ಗವು ಬಹಳ ದೂರದ್ದೂ ಅನನುಕೂಲವೂ ಮತ್ತು ಖರ್ಚಿನದೂ ಆಗಿದ್ದಿತು. ಮಾರ್ಗದಲ್ಲಿ ಕಳ್ಳಕಾರರ ಭಯವು ಬಹಳವಿತ್ತು. ಆದ್ದರಿಂದ ಈ ಪದಾರ್ಥಗಳು ಬಹಳ ತುಟ್ಟಿಯಾಗಿ ಮಾರುತ್ತಿದ್ದುದು ಸಹಜ. ಒಂದು ವೇಳೆ ಸಮೀಪದ ಮತ್ತು ನಿರ್ಭಯ ಮಾರ್ಗವು ದೊರೆತರೆ ಇವುಗಳ ಬೆಲೆಯಲ್ಲಿ ಕಡಿಮೆ-ಯಾಗುವದು ಸಾಧ್ಯವಿದ್ದಿತು. ಆದ್ದರಿಂದ ಹೊಸ ಮಾರ್ಗದ ಶೋಧನೆಗಾಗಿ ತೀವ್ರ ಲಾಲಸೆಯು ಮಧ್ಯಯುಗದ ಕೊನೆಯಲ್ಲಿ ಪಶ್ಚಿಮ ಕಡೆಯ ಯುರೋಪ ರಾಷ್ಟ್ರಗಳಲ್ಲಿ ಜಾಗ್ರತವಾಯಿತು. ಸ. ೧೪೫೩ರಲ್ಲಿ ತುರ್ಕರು ಕಾನಸ್ಟಂಟಿನೋಪಲವನ್ನು ವಶಪಡಿಸಿ-ಕೊಂಡು ಭೂಮಧ್ಯ ಸಮುದ್ರದಲ್ಲಿ ಯುರೋಪಿಯನ್ ವ್ಯಾಪಾರಿಗಳ ಅಡ್ಡಾಟ-ಗಳನ್ನು ಬಂದು ಮಾಡಿದರು. ಇದರಿಂದ ಹೊಸ ವ್ಯಾಪಾರಿ ಮಾರ್ಗವನ್ನು ಹುಡುಕಿ ತೆಗೆಯುವದು ಯುರೋಪಿಯನ್ನರ ಜೀವ ಸಾವಿನ ಸಮಸ್ಯೆಯಾಗಿ ಬಿಟ್ಟಿತು.

ಭೌಗೋಲಿಕ ಜ್ಞಾನ ಮತ್ತು ನೌಕಾಯಾನದ ವಿಷಯಕ ಮಹತ್ವಪೂರ್ಣ ಶೋಧಗಳೂ ಇದೇ ಸಮಯದಲ್ಲಿ ಆದವು. ಇದರಿಂದ ಪೂರ್ವದ ಕಡೆಗೆ ಹೋಗುವ ಹೊಸ ವ್ಯಾಪಾರೀ ಮಾರ್ಗವನ್ನು ಶೋಧಿಸುವ ಕೆಲಸವು ಸರಳವಾಯಿತು. ಈ ಕಾರ್ಯದಲ್ಲಿ ಮುಂದಾಳ್ತನವನ್ನು ಯಾರು ವಹಿಸಿದರು, ಹೇಗೆ ಪ್ರಗತಿಯನ್ನು ಹೊಂದಿದರು, ಮತ್ತು ಈ ಘಟನೆಗಳಿಂದ ಮಾನವೀ ಇತಿಹಾಸದ ಮೇಲೆ ಯಾವ

ಪರಿಣಾಮಗಳಾದವು ಎಂಬುದನ್ನು ತಿಳಿದುಕೊಳ್ಳುವದು ಒಂದು ಉದ್ಬೋಧಕ ವಿಷಯವೆನಿಸುವದು.



ಹೋಕಾಯಂತ್ರ

**ನೌಕಾಯಾನ-ಶಾಸ್ತ್ರದೊಳಗಿನ ಶೋಧಗಳು:**—ಅಜ್ಞಾತ ಪ್ರದೇಶಗಳನ್ನು ಶೋಧಿಸುವ ಈ ಇಚ್ಛೆಯು ಯಶಸ್ವಿಯಾಗಲು ನೌಕಾಯಾನ ವಿಷಯಕ ಅನೇಕ ಶೋಧಗಳು ಸಹಾಯಕಾರಿಯಾದವು. ಅವುಗಳಲ್ಲಿ ಹೋಕಾಯಂತ್ರಕ್ಕೆ ( ಮರಿನರ್ಸ ಕಂಪಾಸ ) ಅಗ್ರಸ್ಥಾನ ಕೊಡಬೇಕಾಗುವದು. ಎಷ್ಟೋ ಶತಕಗಳ ಪೂರ್ವದಲ್ಲಿ ಚೀನೀ ಜನರು ಹೋಕಾಯಂತ್ರದ ಕಲ್ಪನೆಯನ್ನು ಮಾಡಿದ್ದರು. ಚೀನೀ ಭಾಷೆ-ಯಲ್ಲಿ ' ತಿಂಗ-ನಾನ್-ಚಿಂಗ ' ( ದಕ್ಷಿಣ ದಿಕ್ಕನ್ನು ತೋರಿಸುವ ಸೂಜಿ ) ಎಂದು ಅನ್ನುತ್ತಿದ್ದರು. ಅರಬ ಜನರು ಚೀನೀ ಜನರ ಕಡೆಯಿಂದ 'ತಿಂಗ-ನಾನ್-ಚಿಂಗ'ದ ಕಲ್ಪನೆಯ ಮಾಹಿತಿಯನ್ನು ಅರಿತುಕೊಂಡರು. ಅರಬ ಜನರಿಂದ ಇಟಾಲಿಯನ್‌ರಿಗೆ ಮತ್ತು ಅವರಿಂದ ಪಶ್ಚಿಮ ಯುರೋಪದೊಳಗಿನ ಜನರಿಗೆ ' ಹೋಕಾಯಂತ್ರದ ಶೋಧವು ಗೊತ್ತಾಯಿತು. ಹೋಕಾಯಂತ್ರದಿಂದ ಅಪಾರವಾದ ಮಹಾಸಾಗರ ದೊಳಗೆ ದಿಕ್ಕುಗಳನ್ನು ಗುರುತಿಸುವದು ಸಾಧ್ಯವಾಯಿತು. ಈ ಮುಂಚೆ ಗಾಳಿಗಳ ದಿಕ್ಕುಗಳಿಂದ ನಕ್ಷತ್ರಗಳ ಸ್ಥಾನಗಳ ಮೇಲಿಂದ ಸಮುದ್ರದೊಳಗಿನ ನಾವಿಕರು ಅನುಮಾನದಿಂದ ದಿಕ್ಕುಗಳ ಅಂದಾಜು ಕಟ್ಟುತ್ತಿದ್ದರು. ಈ ಪದ್ಧತಿಯು ದೋಷ-ಯುಕ್ತವಾಗಿದ್ದುದರಿಂದ ಬಹಳ ಮೋಸಗೊಳಿಸುವಂತಾಗಿದ್ದಿತು. ಹೋಕಾಯಂತ್ರ ದಿಂದ ದಿಕ್ಕುಗಳ ನಿಶ್ಚಿತತೆಯು ತಿಳಿದು ದೂರದ ಪ್ರವಾಸವು ಸುಖಕರವಾಯಿತು. ಇದಲ್ಲದೆ ಅರಬರು ' ಅಸ್ಟ್ರೊಲೆಬ ' ಎಂಬ ಖಗೋಲ ವಿಷಯಕ ಸಾಧನವನ್ನು ಯುರೋಪಕ್ಕೆ ತಂದರು. ಅದರಿಂದ ಕ್ಷಿತಿಜದ ಮೇಲಿನ ಸೂರ್ಯನ ಎತ್ತರವನ್ನು

ಅಳೆದು ಅಕ್ಷಾಂಶ ರೇಖಾಂಶಗಳನ್ನು ಗೊತ್ತು ಹಚ್ಚಲು ಶಕ್ಯವಾಯಿತು. ಇದಲ್ಲದೆ ತಾಸುಗಳ ಅವಧಿಯನ್ನು ತೋರಿಸುವ ಕಾಜಿನ ಗಡಿಯಾರ ( Hour glass ) ಸೂರ್ಯ ನೆರಳಿನ ಗಡಿಯಾರ (Sun dial) ಮತ್ತು ' ಲಾಗ ' ದಲ್ಲಿ ಅಳೆಯುವ ಕಲ್ಪನೆ ಇವುಗಳ ಮೂಲಕ ಹಡಗುಗಳ ಗತಿಯನ್ನು ಗೊತ್ತು ಹಚ್ಚುವದು ಸಾಧ್ಯವಾಯಿತು.

**ಕೋಪರ್ನಿಕಸ : ವಿಜ್ಞಾನ ಯುಗದ ಜನಕ :—** ಈ ರೀತಿಯ ಶಾಸ್ತ್ರೀಯ ಶೋಧಗಳನ್ನು ಮಾಡಿದವರಲ್ಲಿ ಅಗ್ರಸ್ಥಾನಗಳಿಸಿದವನು ವೈಜ್ಞಾನಿಕನಾದ ನಿಕೋ-ಲಾಸ ಕೋಪರ್ನಿಕಸನು ( ಸ. ೧೪೭೩-೧೫೪೩ ). ಈತನು ಪೋಲಂಡದ ಓರ್ವ ಸಾಮಾನ್ಯ ರೊಟ್ಟಿ ಮಾಡುವವನ ಮಗನು. ಆಕಾಶದೊಳಗಿನ ಸೂರ್ಯ, ಚಂದ್ರ, ಇತ್ಯಾದಿ ತೇಜೋಗೋಲಗಳ ವಿಷಯವಾಗಿ ಬಾಲ್ಯದಿಂದಲೂ ಆತನಿಗೆ ವಿಲಕ್ಷಣವಾದ ಆಕರ್ಷಣೆ ಎನಿಸುತ್ತಿತ್ತು. ಖಗೋಲದೊಳಗಿನ ನಕ್ಷತ್ರಗಳ ನಿರೀಕ್ಷಣೆ ಮಾಡುವದ ರಲ್ಲಿ ಇಡೀ ರಾತ್ರಿಯನ್ನೆಲ್ಲ ಕಳೆಯುತ್ತಿದ್ದನು. ಅವನ ಹತ್ತನೆಯ ವಯಸ್ಸಿಗೆ ಅವನ ತಂದೆಯು ಮರಣ ಹೊಂದಿದನು. ಆಮೇಲೆ ಅವನ ಕಕ್ಕನು ಅವನನ್ನು ಜೋಪಾನ ಮಾಡಿದನು. ಮತ್ತು ಶಿಕ್ಷಣ ಕೊಡಿಸಿದನು. ವೈದ್ಯಕೀಯ ಶಾಸ್ತ್ರದ ಉಚ್ಚ ಶಿಕ್ಷಣ ವನ್ನು ಪಡೆದ ಕೋಪರ್ನಿಕಸನು, ಆ ವೃತ್ತಿಯನ್ನು ಕೈಕೊಳ್ಳದೆ ಶಿಕ್ಷಕ ವೃತ್ತಿಯನ್ನು ಸ್ವೀಕರಿಸಿದನು. ಸ. ೧೫೦೦ ರಲ್ಲಿ ರೋಮದೊಳಗಿನ ವಿದ್ಯಾಪೀಠದಲ್ಲಿ ಖಗೋಲ ಶಾಸ್ತ್ರದ ಪ್ರಾಧ್ಯಾಪಕನೆಂದು ನಿಯಮಿಸಲ್ಪಟ್ಟನು. ಸುಮಾರು ಮೂರು ವರ್ಷಗಳ ವರೆಗೆ ಈ ಕೆಲಸವನ್ನು ಅವನು ಮಾಡಿದನು. ಆ ಕಾಲದಲ್ಲಿ ಗ್ರೀಕ ಜ್ಯೋತಿಷಿ ಟೊಲೆಮಿಯ ಖಗೋಲ ವಿಷಯಕ ಸಿದ್ಧಾಂತವು ಸರ್ವಮಾನ್ಯವಾಗಿದ್ದಿತು. ಅದನ್ನ ನುಸರಿಸಿ ಪೃಥ್ವಿಯು ಸ್ಥಿರವಾಗಿದ್ದು ಅದರ ಸುತ್ತಲು ಸೂರ್ಯ ಚಂದ್ರ ಇತ್ಯಾದಿ ಗ್ರಹ ಗಳು ತಿರುಗುತ್ತವೆ ಎಂಬ ಟೊಲೆಮಿಯ ಸಿದ್ಧಾಂತದಿಂದ ನಕ್ಷತ್ರಗಳ ಸ್ಥಾನದ ಬದ ಲಾವಣೆ, ಗ್ರಹಣಗಳ ಕಾರಣ ಇವುಗಳ ಗೂಢವು ತಿಳಿಯುತ್ತಿದ್ದಿಲ್ಲ. ಆದ್ದರಿಂದ ಇಂಥ ತಪ್ಪು ಶಾಸ್ತ್ರವನ್ನು ಕಲಿಸಬಾರದೆಂಬ ವಿಚಾರದಿಂದ ಕೋಪರ್ನಿಕಸನು ಪ್ರಾಧ್ಯಾಪಕ ವೃತ್ತಿಯನ್ನು ಬಿಟ್ಟು ಪೋಲಂಡದೊಳಗಿನ ಫ್ರಾನಬರ್ಗ ಎಂಬ ಹಳ್ಳಿ-ಯಲ್ಲಿ ಧರ್ಮ ಗುರುವಿನ ದೀಕ್ಷೆ ತೆಗೆದುಕೊಂಡನು. ಈ ಹೊಸ ಉದ್ಯೋಗದಲ್ಲಿ ಅವನಲ್ಲಿರುವ ಭೂತದಯೆ ಮತ್ತು ವಿದ್ವತ್ತೆಗಳಿಗಾಗಿ ಎಲ್ಲ ಕಡೆಯಲ್ಲಿ ಅವನ ಪ್ರಸಿದ್ಧಿ-ಯಾಯಿತು. ಈ ಅವಧಿಯಲ್ಲಿ ಅವನು ಮೂವತ್ತು ವರ್ಷ ಸತತವಾಗಿ ಅಭ್ಯಾಸ ಮಾಡಿ ಟೊಲೆಮಿಗೆ ಬಿಡಿಸಲಸಾಧ್ಯವಾದ ಹಲವು ಸಮಸ್ಯೆಗಳನ್ನು ಬಿಡಿಸಿದನು. ಎರಡು ಸಾವಿರ ವರ್ಷಗಳ ಹಿಂದೆ ಪಾಯಥಾಗೋರಸನೆಂಬ ಗ್ರೀಕ ಗಣಿತಜ್ಞನು ಮಂಡಿಸಿದ ಸಿದ್ಧಾಂತದ ಆಧಾರದಿಂದ ಕೋಪರ್ನಿಕಸನು ಆತನ ಸಿದ್ಧಾಂತವನ್ನು ಮೂಲವಾಗಿರಿಸಿ ಅದರಿಂದ ಅನೇಕ ಉಪಸಿದ್ಧಾಂತಗಳನ್ನು ಮಂಡಿಸಿದನು. " ವಿಶ್ವದ ಮಧ್ಯಬಿಂಧುವು ಪೃಥ್ವಿಯಾಗಿರದೆ ಸೂರ್ಯನಾಗಿದ್ದಾನೆ. ಸೂರ್ಯನ ಸುತ್ತಲೂ ತಿರುಗುವ ಗ್ರಹಮಾಲಿಕೆಯಲ್ಲಿ ಪೃಥ್ವಿಯು ಒಂದು ಗ್ರಹವು. " ಎಂದು ಪಾಯಥಾ

ಗೋರಸನು ಅನ್ನುತ್ತಿದ್ದನು. ಗ್ರೀಕ ತತ್ವಜ್ಞ ಅರಿಸ್ಟಾಟಲನು ಇದರ ಉಪಹಾಸ-ವಾಡಿದ್ದನು. ಅರಿಸ್ಟಾಟಲನ ವಿರುದ್ಧ ಒಂದು ಶಬ್ದವನ್ನು ಉಚ್ಚರಿಸುವ ಧೈರ್ಯವು ಯಾರಿಗೂ ಇದ್ದಿಲ್ಲ. ಆದರೆ ಆ ಮನೋಧೈರ್ಯವನ್ನು ಕೋಪರ್ನಿಕಸನು ತೋರಿಸಿದನು.

ದೂರದರ್ಶಕಗಳಂತಹ ಆಧುನಿಕ ಸಾಧನಗಳು ಇರದಿದ್ದರೂ, ಕೇವಲ ನಿರೀ-ಕ್ಷಣೆ ಚಿಂತನೆ ಇವುಗಳ ಮೇಲಿಂದಲೇ ಆಕಾಶದೊಳಗಿನ ತೇಜೋಗೋಲಗಳ ಸಮಸ್ಯೆಗಳನ್ನು ಬಿಡಿಸಿದ ಕೋಪರ್ನಿಕಸನ ಅಲೌಕಿಕ ಬುದ್ಧಿಮತ್ತೆ, ಅಸಾಮಾನ್ಯ ಜಿಗಟುತನ, ಮತ್ತು ಲೋಕವಿಲಕ್ಷಣ ಮನೋಧೈರ್ಯ ಇವು ನಿಜವಾಗಿ ಅಪೂರ್ವ-ವಾದವುಗಳು. ಪಾಯಥಾಗೋರಸನು ಹೇಳಿದಂತೆ ಸೂರ್ಯನು ವಿಶ್ವದ ಮಧ್ಯ-ಬಿಂದುವಾಗಿದ್ದು ನಮ್ಮ ಪೃಥ್ವಿಯು ಅವನ ಸುತ್ತಲು ದ್ವಿವಿಧ ಪರಿಭ್ರಮಣ ಮಾಡುತ್ತದೆ. ಈ ದ್ವಿವಿಧ ಪರಿಭ್ರಮಣದ ಮೂಲಕವೇ ಹಗಲು 'ರಾತ್ರಿಗಳು ಮತ್ತು ಋತುಗಳಲ್ಲಿಯ ಬದಲಾವಣೆಗಳು ಆಗುತ್ತವೆ. ಪೃಥ್ವಿಯಂತೆ ಸೂರ್ಯನ ಸುತ್ತಲು ತಿರುಗುವ ಅನೇಕ ಗ್ರಹಗಳುಂಟು. ಅವುಗಳ ಗತಿಯು ನಿಶ್ಚಿತ ಸ್ವರೂಪದ್ದಿದೆ. ನಿರ್ದಿಷ್ಟ ವೇಳೆಯಲ್ಲಿ ನಿರ್ದಿಷ್ಟ ಸ್ಥಳಗಳಲ್ಲಿ ಪ್ರತಿಯೊಂದು ಗ್ರಹವು ಕಂಡುಬರುತ್ತದೆ. ಸೃಷ್ಟಿಯ ಈ ಕಾರ್ಯವು ಅತ್ಯಂತ ನಿಯಮಬದ್ಧವಾಗಿದೆ. ಇದರಿಂದ ಗ್ರಹಗಳ ನಿಶ್ಚಿತ ಸಮಯವನ್ನು ಹೇಳಲು ಬರುತ್ತದೆ. ಈ ಸಿದ್ಧಾಂತವನ್ನು ಕೋಪರ್ನಿಕಸನು ಮಂಡಿಸಿ ಆಧುನಿಕ ಖಗೋಲ ಶಾಸ್ತ್ರದ ಆರಂಭವನ್ನು ಮಾಡಿದನು. ಈ ಸಿದ್ಧಾಂತವು ಗ್ರಂಥರೂಪದಲ್ಲಿ ಪ್ರಸಿದ್ಧವಾದ ವರುಷವೇ ಅವನು ಮರಣ ಹೊಂದಿದನು. ( ಇ. ಸ. ೧೫೪೩ ).

**ಗೆಲಿಲಿಯೊ** ( ಇ. ಸ. ೧೫೬೪-೧೬೪೨ ):— ಕೋಪರ್ನಿಕಸನ ಬುದ್ಧಿ ಪ್ರಾಮಾಣ್ಯವಾದದ ಪರಂಪರೆಯನ್ನು ಮುಂದುವರಿಸಿದ ಇನ್ನೊಬ್ಬ ಶಾಸ್ತ್ರಜ್ಞನು ಇದೇ ಕಾಲದಲ್ಲಿ ಬೆಳಕಿಗೆ ಬಂದನು. “ಅರಿಸ್ಟಾಟಲನು ಹೀಗೆ ಹೇಳಿದ್ದಾನೆ; ಆದ್ದ-ರಿಂದ ಅದು ನಿಜ” ಎಂಬ ತತ್ಕಾಲೀನ ಅಂಧಶ್ರದ್ಧೆಗೆ ಆಘಾತವನ್ನುಂಟುಮಾಡಲು ಗೆಲಿಲಿಯೋನು, ಕೋಪರ್ನಿಕಸನು ನಡೆದ ದಾರಿಯನ್ನು ತುಳಿದನು. ಗೆಲಿಲಿಯೋನ ಚರಿತ್ರೆಯು ಬಹಳ ಚಿತ್ತಾಕರ್ಷಕವಾಗಿದೆ.

ಈತನು ಇಟಲಿಯೊಳಗಿನ ಪಿಸಾ ಎಂಬಲ್ಲಿಯ ಸಂಗೀತ ಶಿಕ್ಷಕನ ಮಗನು. ಆದರೆ ಇವನಿಗೆ ಮಾನವೀ ಸಂಗೀತಕ್ಕಿಂಲೂ ಆಕಾಶಸ್ಥ ತೇಜೋಗೋಲಗಳ ಸಂಗೀತವು ಮನಃಪೂರ್ವಕ ಸೇರುತ್ತಿತ್ತು. ಅವನು ಬಾಲ್ಯದಲ್ಲಿ ಎಷ್ಟೋ ತಾಸು-ಗಳನ್ನು ಆಕಾಶದೊಳಗಿನ ಗ್ರಹ ಮತ್ತು ನಕ್ಷತ್ರಗಳ ನಿರೀಕ್ಷಣೆ ಮಾಡುವದರಲ್ಲಿ ಕಳೆಯುತ್ತಿದ್ದನು. ಪುಸ್ತಕದಲ್ಲಿ ಏನು ಕೊಟ್ಟಿದೆ ಎಂಬುದನ್ನು ಓದದೆ ಅವನು ಸ್ವತಃ ಬೇರೆ ಬೇರೆ ಪ್ರಯೋಗಗಳನ್ನು ಮತ್ತು ನಿರೀಕ್ಷಣೆಯನ್ನು ಮಾಡುತ್ತಿದ್ದನು. ಅವನ ಅಭ್ಯಾಸದ ಕೋಣೆ ಎಂದರೆ ಒಂದು ಸಣ್ಣ ಪ್ರಯೋಗ ಶಾಲೆಯೇ ಆಗಿದ್ದಿತು. ವಯಸ್ಸಿನ ೧೭ನೆಯ ವರ್ಷದಲ್ಲಿಯೇ ಅವನಿಗೆ ಒಂದು ಅದ್ಭುತ ಕಲ್ಪನೆಯು ಹೊಳೆಯಿತು. ಪ್ರಾರ್ಥನಾ ಮಂದಿರದಲ್ಲಿ ಇತರರೊಡನೆ ಪ್ರಾರ್ಥನೆಗಾಗಿ ಬಗ್ಗಿದಾಗ

ಜೋತು ಬಿಟ್ಟ ಒಂದು ದೀಪವು ನಿಶ್ಚಿತ ಗತಿಯಿಂದ ಹಿಂದೆ ಮುಂದೆ ಅಲುಗಾಡ



ಗ್ಯಾಲಿಲಿಯೋ

ತ್ತಿರುವದನ್ನು ನೋಡಿ ಸೃಷ್ಟಿಯೊಳಗಿನ ನಿಯಮ ಬದ್ಧ ಭ್ರಮಣದ ಕಲ್ಪನೆಯು ಬಂದಿತು. ಕೂಡಲೆ ಮನೆಗೆ ಹೋಗಿ ಅಷ್ಟೇ ಉದ್ದಾದ ಎರಡು ದಾರ ಗಳಿಂದ ಅಷ್ಟಷ್ಟೇ ಭಾರವಾದ ಧಾತುಗಳ ತುಂಡು ಗಳನ್ನು ಕಟ್ಟಿ, ಅವುಗಳಿಗೆ ಬೇರೆ ಬೇರೆ ಅಂತರ ದಿಂದ ಗತಿಯನ್ನು ಕೊಟ್ಟನು. ಎರಡೂ ತುಂಡು ಗಳು ನೂರು ಸಲ ಹಿಂದೆ ಮುಂದೆ ಅಲುಗಾಡಿ ನಿಂತವು. ಇದನ್ನು ನೋಡಿ ಅವನ ಆನಂದವು ಗಗನಕ್ಕೇರಿತು! ಈ ಸಣ್ಣ ಪ್ರಯೋಗದಿಂದ ಸೃಷ್ಟಿಯೊಳಗಿನ ಲಯಬದ್ಧತೆಯ ವಿಷಯಕ ಸಿದ್ಧಾಂತವನ್ನು ಕಂಡುಹಿಡಿದನು. ಆದರಿಂದ ನಾಡಿಗಳ ಬಡಿತ, ಗಡಿಯಾರದೊಳಗಿನ ಕಾಲ ವಿಭಾಗವು, ಗ್ರಹಣಗಳ ಕಾಲ, ನಕ್ಷತ್ರಗಳ ಚಲನೆ ಇವುಗಳ ಗಣಿತವು ಸಿದ್ಧ ವಾಯಿತು.

ಯಾವಾಗಲೂ ಪ್ರಯೋಗವನ್ನು ಮಾಡುತ್ತಿರುವದೇ ಅವನ ಜೀವನಸರ್ವಸ್ವ ವಾಗಿತ್ತು. ಸಾಯುವ ವರೆಗೆ ಪ್ರಯೋಗಗಳನ್ನು ಮಾಡಿ ಅನೇಕ ಅಮೌಲ್ಯ ಸಿದ್ಧಾಂತ ಗಳನ್ನು ಮಂಡಿಸಿದನು. ಪ್ರಯೋಗದ ಈ ಹುಚ್ಚಿಗಾಗಿ ಜನರು ಅವನ ಉಪಹಾಸ ವನ್ನು ಅತಿಯಾಗಿ ಮಾಡುತ್ತಿದ್ದರು. ರೋಮದ ಕ್ಯಾಥೋಲಿಕ ಧರ್ಮಪೀಠವು ಅವ ನನ್ನು ಪಾಖಂಡಿ ಎಂದು ನಿಶ್ಚಯಿಸಿ ಕಾರಾವಾಸದಲ್ಲಿಟ್ಟಿತು. ಸನಾತನ ಸಿದ್ಧಾಂತ ವನ್ನು ಮನ್ನಿಸದೆ, ಮತ್ತು ಅರಿಸ್ಟಾಟಲನು ಸ್ಥಿರವೆಂದು ಹೇಳಿದ ಪೃಥ್ವಿಗೆ ಗತಿ ಯುಂಟೆಂದು ಸಿದ್ಧಮಾಡುವ ಬಂಡುಗಾರ ಗೆಲಿಲಿಯೋನು ರೋಮನ್ ಕ್ಯಾಥೋ ಲಿಕರ ಸಿಟ್ಟಿಗೆ ಬಲಿಯಾದುದರಲ್ಲಿ ಆಶ್ಚರ್ಯವಿಲ್ಲ., ಅವಹೇಳನೆ, ದಾರಿದ್ರ್ಯ ಮತ್ತು ಧರ್ಮಗುರುಗಳ ಪೀಡೆ, ಇವುಗಳನ್ನೆಲ್ಲ ಸಹಿಸಿಕೊಂಡು ಕೊನೆಯ ವರೆಗೆ ಗೆಲಿಲಿಯೋ ತನ್ನದನ್ನೇ ನಡೆಸಿದನು. ಅವನ ಬೆಲೆಯನ್ನು ಅರಿತ ಜನರೂ ಇದ್ದರು. ಅವರು ಅವ ನಿಗೆ " ಆ ಕಾಲದ ಆರ್ಕಿಮಿಡಿಸ "ಎಂಬ ಯೋಗ್ಯವಾದ ಪದವಿಯನ್ನು ಕೊಟ್ಟಿದ್ದರು.

ಗೆಲಿಲಿಯೋನು ಸ್ಥಾಪಿಸಿದ ಪ್ರಯೋಗ ಶಾಲೆಗೆ " ನಿರ್ವಾಸಿತರ ವಿದ್ಯಾಪೀಠ " ಎಂಬ ಅರ್ಥಪೂರ್ಣ ಹೆಸರನ್ನು ಅವರೇ ಕೊಟ್ಟಿದ್ದರು. ಅವನಂತಹ ಸ್ವತಂತ್ರ ಬುದ್ಧಿಯ ಅನೇಕ ಜಿಜ್ಞಾಸು ವಿದ್ಯಾರ್ಥಿಗಳು ಅವನ ಸುತ್ತಲೂ ಕೂಡಿದ್ದರು. ಗೆಲಿಲಿಯೋನು ತನ್ನ ಶಿಷ್ಯ ವೃಂದದ ಮುಂದೆ ಸಪ್ರಮಾಣವಾಗಿ ಮತ್ತು ಸಪ್ರಯೋಗ ವಾಗಿ ಮಂಡಿಸಿದ ಸಿದ್ಧಾಂತಗಳು ಈ ಬಗೆಯಾಗಿವೆ.

(೧) ಈ ಪೃಥ್ವಿಯ ಮೇಲೆ ಲೋಹ ಚುಂಬಕದ ಶಕ್ತಿಯು ವಿಪುಲವಾಗಿದೆ. (೨) ಅದರ ಬಲದಿಂದ ದಿಕ್ಕುಗಳನ್ನು ತೋರಿಸುವ ಹೋಕಾಯಂತ್ರವನ್ನು ( ಮರಿ

ನರ್ಸ ಕಂಪಾಸ ) ತಯಾರಿಸಲು ಬರುವದು. (೩) " ಥರ್ಮಾಮೀಟರ " ಎಂಬ ಸಾಧನದಿಂದ ಉಷ್ಣತಾಮಾನವನ್ನು ಅಳೆಯಲು ಬರುತ್ತದೆ. (೪) " ಟೆಲಿಸ್ಕೋಪ " ಸಹಾಯದಿಂದ ಅತಿ ದೂರವಿದ್ದ ಖಗೋಲದೊಳಗಿನ ನಕ್ಷತ್ರಗಳನ್ನು ಚನ್ನಾಗಿ ನೋಡಲು ಬರುತ್ತದೆ.

ಮರಿನರ್ಸ ಕಂಪಾಸ ಮತ್ತು ಟೆಲಿಸ್ಕೋಪ ಇವುಗಳ ಶೋಧವು ಮಧ್ಯ ಯುಗ ದೊಳಗಿನ ಭೌಗೋಲಿಕ ಸಂಶೋಧನೆಗೆ ಅತ್ಯಂತ ಉಪಕಾರಿಯಾಯ್ತು.

ಇಂಥ ದೊಡ್ಡ ವಿಜ್ಞಾನಿಯ ಗ್ರಂಥಗಳನ್ನು ರೋಮನ್ ಕ್ಯಾಥೋಲಿಕ ಧರ್ಮ ಪೀಠವು ಜಪ್ತ ಮಾಡಿತು. " ದಿ ಲಾಜ ಆಫ್ ಮೋಶನ್ಸ" (ಗತಿಯ ನಿಯಮ) ಎಂಬ ಕೊನೆಯ ಸರ್ವ ಶ್ರೇಷ್ಠ ಗ್ರಂಥವನ್ನು ಅವನು ಕಾರಾವಾಸದಲ್ಲಿ ಬರೆದು ಮುಗಿಸಿದನು. ಮತ್ತು ಅದನ್ನು ಗುಪ್ತ ಮಾರ್ಗದಿಂದ ಹಾಲಂಡಕ್ಕೆ ಕಳಿಸಿ ಪ್ರಕಾಶಿಸಿದನು. ತನ್ನ ಈ ಪ್ರೀತಿಯ ಗ್ರಂಥದ ಪ್ರತಿಯನ್ನು ತಬ್ಬಿಕೊಂಡು ಈ ಹಿರಿಯ ಶಾಸ್ತ್ರಜ್ಞನು ತನ್ನ ಪ್ರಾಣವನ್ನು ತೊರೆದನು. (ಜಾನೇವರಿ ೮, ೧೬೪೨).

**ಯುರೋಪಿಯನ್‌ರ ಭೌಗೋಲಿಕ ಸಂಶೋಧನಗಳು :—** ಯುರೋಪದ ಸಮುದ್ರಾಂತರ್ಗತ ವ್ಯಾಪಾರವನ್ನು ಹೆಚ್ಚಿಸುವ ಕೆಲಸದಲ್ಲಿ ಪೋರ್ತುಗಾಲ ಮತ್ತು ಸ್ಪೇನ ರಾಷ್ಟ್ರಗಳು ಮುಂದಾದವು. ೧೫ನೆಯ ಶತಕದ ಆರಂಭದಲ್ಲಿ ಪೋರ್ತುಗಾಲದ ರಾಜನಾದ ಹೆನ್ರಿಯು ( ಇವನಿಗೆ ' ಸಮುದ್ರಯಾನ ಕುಶಲ ' ಎಂಬ ಅರ್ಥದ " ನೆವ್ಹಿಗೇಟರ " ಎಂಬ ಪದವಿ ಇದ್ದಿತು.) ನಾವಿಕರ ಸಲುವಾಗಿ ಒಂದು ಶಾಲೆಯನ್ನು ತೆಗೆದು ಅಲ್ಲಿ ಸಮುದ್ರಯಾನದ ಶಾಸ್ತ್ರೀಯ ಶಿಕ್ಷಣ ಕೊಡುವದನ್ನು ಪ್ರಾರಂಭಿಸಿದನು ಅಲ್ಲಿಯ ಭಾವೀ ನಾವಿಕರು ಆಟಲಾಂಟಿಕ ಮಹಾಸಾಗರದಲ್ಲಿ ಅನೇಕ ಪ್ರವಾಸ ಗಳನ್ನು ಮಾಡಿ ಪಶ್ಚಿಮ ಆಫ್ರಿಕೆಯ ದಂಡೆಯ ತಿಳಿವಳಿಕೆ ಮಾಡಿಕೊಂಡರು. ಸ. ೧೪೭೮ ರಲ್ಲಿ ಹೆನ್ರಿಯ ಈ ಉದ್ಯೋಗಕ್ಕೆ ಸಂಪೂರ್ಣ ಯಶವು ದೊರೆಯಿತು. ಪೋರ್ತುಗೀಜ ಸಾಹಸಿ ನಾವಿಕ ಪ್ರಮುಖನಾದ ಬಾರ್ಥೋಲೊಮ್ಯು-ಡಾಯಿಝು ಎಂಬವನು ಆಫ್ರಿಕೆಯ ದಕ್ಷಿಣ ತುದಿಯ ವರೆಗೆ ಹೋಗಿ ಬಂದನು. ಆ ತುದಿಗೆ ಹೆನ್ರಿಯು " ದಿ ಕೇಪ ಆಫ್ ಗುಡ್ ಹೋಪ " ಎಂಬ ಅರ್ಥಪೂರ್ಣ ಹೆಸರನ್ನು ಕೊಟ್ಟನು. ಈ ಶೋಧದ ಲಾಭವನ್ನು ತೆಗೆದುಕೊಂಡು ಮುಂದೆ ಸರಿಯಾಗಿ ಹತ್ತು ವರ್ಷಕ್ಕೆ ಪೋರ್ತುಗೀಜ ನಾವಿಕ ಪ್ರಮುಖ ವಾಸ್ಕೋ-ದಿ-ಗಾಮಾನು ಒಬ್ಬ ಭಾರತೀಯ ಪ್ರವಾಸಿಯ ಸಹಾಯದಿಂದ ಭಾರತದ ಪಶ್ಚಿಮ ದಂಡೆಯ ಕಾಲಿಕತ್ತ ಬಂದರಕ್ಕೆ ಬಂದು ಇಳಿದನು (ಸ. ೧೪೯೮).

ಕ್ರಿಸ್ತೀ ಧರ್ಮದ ಪ್ರಚಾರ ಮಾಡುವ ಮತ್ತು ಮಸಾಲೆಯ ಪದಾರ್ಥಗಳ ವ್ಯಾಪಾರವನ್ನು ಹಸ್ತಗತ ಮಾಡಿಕೊಳ್ಳುವ ಉದ್ದೇಶಗಳಿಂದ ಪ್ರೇರಿತವಾದ ಪೋರ್ತುಗೀಜ ಜಲಪ್ರವಾಸಿಗಳು ಅಜ್ಞಾತ ಮಹಾಸಾಗರಗಳಲ್ಲಿ ಸಾಹಸ ಪೂರ್ಣ ಜಲಪರ್ಯಟನಗಳನ್ನು ಮಾಡಿದರು. ಈ ಸಮಯದಲ್ಲಿ ಸ್ಪೇನದ ಜನರೂ ಇದೇ ಉದ್ದೇಶದಿಂದ ಈ ಕಾರ್ಯದಲ್ಲಿ ತೊಡಗಿದರು. ಸ್ಪೇನದ ರಾಜನಾದ ಫರ್ಡಿನಂಡ ಮತ್ತು ರಾಣಿ

ಇಝಾಬೆಲಾ ಅವರು ಜಿನೋವಾದ ನಾಗರಿಕನಾದ ಕ್ರಿಸ್ತೋವರ ಕೋಲಂಬಸನಿಗೆ ಒಂದು ಸಣ್ಣ ಸುಸಜ್ಜಿತ ಗುಂಪನ್ನು ಕೊಟ್ಟು ಪಶ್ಚಿಮದ ಕಡೆಯ ದೇಶಗಳನ್ನು ಶೋಧಿಸಲು ಕಳಿಸಿಕೊಟ್ಟರು. ೧೪೯೨ನೆಯ ಆಗಸ್ಟದಲ್ಲಿ ಕೋಲಂಬಸನು ಸ್ಪೇನದ



ಕೋಲಂಬಸನು ದಂಡೆಯ ಮೇಲೆ ಇಳಿದನು

ದಂಡೆಯನ್ನು ಬಿಟ್ಟನು. ಮುಂದೆ ಎರಡು ತಿಂಗಳ ವರೆಗೆ ಸತತವಾಗಿ ಅಟಲಾಂಟಿಕ ಮಹಾಸಾಗರದಲ್ಲಿ ಪಶ್ಚಿಮದ ಕಡೆಗೆ ಪ್ರವಾಸ ಮಾಡಿದನು. ಆದರೂ ಭೂಮಿಯು ದೃಷ್ಟಿಗೆ ಬೀಳಲಿಲ್ಲ. ಅನೇಕ ದುಶ್ಚಿಹ್ನೆಗಳು ಕಂಡವು. ಆದರಿಂದ ಅವನ ಸಂಗಡ ಬಂದ ನಾವಿಕರ ಧೈರ್ಯವು ಕುಂದಿತು. ಮತ್ತು ಅವರು ತಿರುಗಿ ಹೋಗಲು ಆಗ್ರಹ ಪಟ್ಟರು. ಕೋಲಂಬಸನು ಬಹಳ ಪ್ರಯಾಸದಿಂದ ಅವರನ್ನು ಸಂಭಾಳಿಸಿದನು.

ಅಕ್ಟೋಬರ ತಿಂಗಳವು ಕಾಲಿಟ್ಟಿತು; ಕೋಲಂಬಸನ ಭಾಗ್ಯವು ತೆರೆಯಿತು. ಸಮುದ್ರದ ಮೇಲೆ ತೇಲಿ ಬರುವ ಗಿಡಗಳ ಟೊಂಗೆಗಳು, ಕಟ್ಟಿಗೆಯ ಬೊಡ್ಡೆಗಳು ಮತ್ತು ಮೇಲೆ ಆಕಾಶದಲ್ಲಿ ಹಾರಾಡುವ ಪಕ್ಷಿಗಳ ಗುಂಪುಗಳನ್ನು ನೋಡಿ ಕೋಲಂಬಸನಿಗೆ ತಾನು ಭೂಪ್ರದೇಶದ ಸಮೀಪಕ್ಕೆ ಬಂದಿರುವೆನೆಂಬ ಕಲ್ಪನೆಯಿಂದ ಆನಂದವಾಯಿತು. ೧೨ನೆಯ ಅಕ್ಟೋಬರ ೧೪೯೨ ರ ಪ್ರಭಾತ ಸಮಯಕ್ಕೆ ಕೋಲಂಬಸನಿಗೆ ಭೂಮಿಯು ಕಂಡಿತು. ಈ ದೇಶವು ಯಾವುದಿರಬಹುದೆಂಬುದು ಕೋಲಂಬಸನಿಗೆ ಸಮಸ್ಯೆಯಾಯಿತು. ಹಿಂದುಸ್ಥಾನವೋ, ಚೀನವೋ, ಅಥವಾ ಜಪಾನವೊ? ಅದು ವೆಸ್ಟ ಇಂಡೀಜ ನಡುಗಡ್ಡೆಗಳೊಳಗಿನ ಒಂದು ನಡುಗಡ್ಡೆಯಾಗಿತ್ತು. ಅದಕ್ಕೆ ಕೋಲಂಬಸನು 'ಸಾನ ಸಲ್ವಡೋರ' ಎಂಬ ಹೆಸರನ್ನಿತ್ತನು. ತಾನು ಬಂದುದು ಹಿಂದುಸ್ಥಾನದ ದಂಡೆಗೇ ಎಂದು ಕೋಲಂಬಸನಿಗೆ ಅನಿಸಿತು. ಅಲ್ಲಿಯ ಕೆಂಪು

ಬಣ್ಣದ ಜನರಿಗೆ ಕೋಲಂಬಸನು " ರೆಡ್ ಇಂಡಿಯನ್ನ * ಎಂದು ಕರೆದನು. ಕೆಲವು ತಿಂಗಳಗಳ ವರೆಗೆ ಇದ್ದು ಮತ್ತೆ ಕೆಲವು ನಡುಗಡ್ಡೆಗಳನ್ನು ಶೋಧಿಸಿ ೧೪೯೩ ನೆಯ ಫೆಬ್ರುವರಿಯಲ್ಲಿ ಕೋಲಂಬಸನು ಸುಖರೂಪವಾಗಿ ಸ್ಪೇನಕ್ಕೆ ಮರಳಿ ಬಂದನು. ಆವನು ತನ್ನ ಸಂಗಡ ತಂದ ಬಂಗಾರ, ಹತ್ತಿ, ಕೆಲವು ಪಶುಪಕ್ಷಿ, ಮತ್ತು ಇಬ್ಬರು " ರೆಡ್ ಇಂಡಿಯನ್ " ಇವರನ್ನು ನೋಡಿ ಸ್ಪೇನದ ಅರಸನಿಗೆ ಮತ್ತು ಜನತೆಗೆ ಬಹಳ ಆಶ್ಚರ್ಯವೆನಿಸಿತು. ಕೋಲಂಬಸನನ್ನು ಬಹಳ ಹೊಗಳಿದರು. ನಂತರ ಹೆಚ್ಚಿನ ಸಂಶೋಧನದ ಸಲುವಾಗಿ ಆವನಿಗೆ ಸ್ಪೇನದ ಅರಸನು ಸಾಕಷ್ಟು ಧನ ಸಹಾಯ ಮಾಡಿದುದು ಸಹಜ. ಕೋಲಂಬಸನು ಅದೇ ಪ್ರದೇಶದಲ್ಲಿ ಮತ್ತೆ ಮೂರು ಸಲ ಪ್ರವಾಸ ಮಾಡಿ ದಕ್ಷಿಣ ಆಮೇರಿಕೆಯ ಮುಖ್ಯ ಭೂಮಿಯ ವರೆಗೆ ಹೋದನು. ಆವನು ಹೊಂಡುರಾಸ ಮತ್ತು ಪನಾಮಾ ದಂಡೆಗಳ ಶೋಧ ಮಾಡಿದನು. ತಾನು ಒಂದು ಅಜ್ಞಾತ ಖಂಡದ ಶೋಧ ಮಾಡಿರುವೆನೆಂಬುದು ತಿಳಿಯುವ ಮೊದಲೇ ಆವನು ಮರಣಹೊಂದಿದನು.

ಈ ಪ್ರವಾಸದಲ್ಲಿ ಮಾನವತೆಗೆ ಕಲಂಕವನ್ನು ಹಚ್ಚುವ ಒಂದು ದುಷ್ಕೃತ್ಯವನ್ನು ಸ್ಪಾನಿಶ್ ಜನರು ಮಾಡಿದರು. ಐದು ಹಡಗುಗಳಲ್ಲಿ ' ರೆಡ್ ಇಂಡಿಯನ್ ' ರನ್ನು ತುಂಬಿಕೊಂಡು ಸ್ಪೇನಕ್ಕೆ ಒಯ್ದು, ಅಲ್ಲಿ ಅವರನ್ನು ಗುಲಾಮರೆಂದು ಮಾರಿದರು. ಈ ರೀತಿ ಗುಲಾಮರ ಅಮಾನುಷ ವ್ಯಾಪಾರವನ್ನು ಸ್ಪೇನವು ಸುರುವು ಮಾಡಿತು.

ಕೋಲಂಬಸನ ಸಂಶೋಧನೆಯ ಲಾಭವನ್ನು ತೆಗೆದುಕೊಳ್ಳಲು ಮತ್ತೆ ಎಷ್ಟೋ ಸಾಹಸೀ ನಾವಿಕರು ಮುಂದೆ ಬಂದರೆಂಬುದರಲ್ಲಿ ಆಶ್ಚರ್ಯವಿಲ್ಲ. ಸ. ೧೪೯೯ರಲ್ಲಿ ಅಮೇರಿಗೊ ವ್ಹೆಸ್‌ಪ್ಯುಸಿ ಎಂಬ ಇಟಾಲಿಯನ್ ನಾವಿಕನು ಸ್ಪೇನದ ಸಹಾಯದಿಂದ ಪಶ್ಚಿಮದ ಕಡೆಗೆ ಅನೇಕ ಜಲಪರ್ಯಟನಗಳನ್ನು ಮಾಡಿ ಒಂದು ಹೊಸ ಖಂಡವನ್ನು ಶೋಧ ಮಾಡಿದನು. ಈ ಹೊಸ ಖಂಡಕ್ಕೆ ಅವನ ಹೆಸರಿನ ಮೂಲಕ " ಅಮೇರಿಕಾ " ಎಂಬ ಹೆಸರು ಬಂದಿತು.

ಕೇಬ್ರಲ್ ಎಂಬ ಹೆಸರಿನ ಪೋರ್ತುಗೀಜ ನಾವಿಕನು ಆಫ್ರಿಕೆಯ ದಂಡೆಗುಂಟ ಪ್ರವಾಸ ಮಾಡುತ್ತಿರುವಾಗ್ಗೆ ಸಮುದ್ರದೊಳಗಿನ ಬಿರುಗಾಳಿಯಿಂದ ಅವನ ಗುಂಪಿನ ಫಜೀತಿಯಾಯಿತು ; ಕೇಬ್ರಲ್‌ನು ಅತ್ಯಂತ ಅಕಸ್ಮಿಕವಾಗಿ ಬ್ರಾಝಿಲದ ದಂಡೆಗೆ ಬಂದು ಹತ್ತಿದನು. ಸ. ೧೫೧೩ರಲ್ಲಿ ಬಲಬೋಆ ಎಂಬ ಸ್ಪ್ಯಾನಿಶ್ ನಾವಿಕನು ಪನಾಮಾ ಉಪಸಾಗರವನ್ನು ದಾಟಿ ಪ್ಯಾಸಿಫಿಕ ಮಹಾಸಾಗರವನ್ನು ಪ್ರವೇಶಿಸಿದನು.

ಈ ಸಂಶೋಧನ ಕಾರ್ಯಕ್ಕೆ ಕಳಸವಿಟ್ಟವನೆಂದರೆ ಫರ್ಡಿನಂಡ ಮೆಗೆಲಾನ-ನೆಂಬ ಪೋರ್ತುಗೀಜ ನಾವಿಕನು (ಸ. ೧೪೮೦—೧೫೨೧). ಅವನು ಕೂಡ ಸ್ಪೇನದ ನೌಕರನೇ ಆಗಿದ್ದನು. ಪೃಥ್ವಿಯು ದುಂಡಗಿರುವದರಿಂದ ಪೃಥ್ವಿಯ ಸುತ್ತಲು ಪ್ರವಾಸ ಮಾಡಿದರೆ ಪೂರ್ವದ ಕಡೆಯ ಹಿಂದುಸ್ಥಾನ, ಚೀನ ಇತ್ಯಾದಿ ದೇಶಗಳು ತಮಗೆ ನಿಶ್ಚಿತವಾಗಿ ಸಿಕ್ಕುವವೆಂಬ ವಿಶ್ವಾಸದಿಂದ ಆವನು ಪೃಥ್ವೀ ಪ್ರದಕ್ಷಿಣೆಯ

ಸಾಹಸದ ವಿಚಾರವನ್ನು ಮಾಡಿದನು. ಅವನು ಅಮೇರಿಕೆಯ ಪೂರ್ವ ದಂಡೆಯನ್ನು ಸುತ್ತು ಹಾಕಿ (ಅವನ ಹೆಸರಿನ) "ಮೆಗೆಲಾನದ" ಸಮುದ್ರಧುನಿಯೊಳಗಿಂದ ಪ್ಯಾಸಿಫಿಕ್ ಮಹಾಸಾಗರವನ್ನು ಪ್ರವೇಶಿಸಿದನು. ಆತನೇ ಈ ಪ್ರಶಾಂತವಾದ ಸಾಗರಕ್ಕೆ "ಪ್ಯಾಸಿಫಿಕ್" ಎಂಬ ಹೆಸರನ್ನು ಕೊಟ್ಟನು. ಪಶ್ಚಿಮದ ಕಡೆಗೆ ಸತತವಾಗಿ ೩೮ ದಿವಸ ಪ್ರವಾಸ ಮಾಡಿದ ಬಳಿಕ ಅವನಿಗೆ ಮೊದಲು ಗ್ವಾಮ, ನಂತರ ಫಿಲಿಪಾಯಿನ, ಈ ನಡುಗಡ್ಡೆಗಳು ಸಿಕ್ಕವು. ಈಗಾಗಲೇ ಅವನಬಳಿಯಲ್ಲಿಯ ಅನ್ನಸಾಮುಗ್ರಿಯು ಮುಗಿಯಲು ಬಂದಿದ್ದಿತು. ಅವನ ಜನರ ಧೈರ್ಯವು ಕಳೆದುಹೋಗಿದ್ದಿತು. "ಹಡಗಕ್ಕೆ ಕಟ್ಟಿದ ನುಲಿಯನ್ನೆ ತಿಂದು ದಿವಸ ಕಳೆಯುವೆ. ಆದರೆ ತಿರುಗಿ ಹೋಗಲಾರೆ" ನೆಂಬ ನಿರ್ಧಾರವನ್ನು ಮೆಗಲಾನನು ವ್ಯಕ್ತಪಡಿಸಿದನು. ಗ್ವಾಮ ನಡುಗಡ್ಡೆಯ ಜನರು ಬಹಳ ತುಡುಗರಿದ್ದರು. ಆದ್ದರಿಂದ ಮೆಗೆಲಾನನು ಆ ನಡುಗಡ್ಡೆಗೆ 'ಕಳ್ಳರ ನಡುಗಡ್ಡೆ' ಎಂಬ ಅರ್ಥದ 'ಲ್ಯಾಡ್ರೋನ ದ್ವೀಪ' ಎಂಬ ಹೆಸರನ್ನಿಟ್ಟನು. ಸೇಬ್ಯೂ ದ್ವೀಪದ ರಾಜನೊಡನೆ ಮೆಗೆಲಾನನ ಅತಿಯಾದ ಗೆಳೆತನವಾಯಿತು. ಆ ರಾಜನ ಪರವಾಗಿ ಯುದ್ಧಮಾಡುವಾಗ ಮೆಗಲಾನನು ಕೊಲ್ಲಲ್ಪಟ್ಟನು. ಅವನ ಕೆಲವು ಸಹಕಾರಿಗಳು ಬೋರ್ನಿಓ ನಡುಗಡ್ಡೆಯ ವರೆಗೆ ಪ್ರವಾಸ ಮಾಡಿದರು. ಅಲ್ಲಿಂದ ಹಿಂದೀ ಮಹಾಸಾಗರವನ್ನು ಸುತ್ತುವರಿದು ಆಫ್ರಿಕೆಯ ಪ್ರದಕ್ಷಿಣೆ ಹಾಕಿ ಈ ಸ್ಪಾನಿಶ್ ನಾವಿಕರು ಸ್ಪೇನಕ್ಕೆ ಮರಳಿ ಬಂದರು. ಈ ಪ್ರವಾಸದ ನಾಯಕನಾದ ಮೆಗಲಾನನು ಪ್ರಾಣವನ್ನು ಕಳೆದುಕೊಂಡನೆಂಬುದು ನಿಜ. ಆದರೆ ಪೃಥ್ವಿಯು ದುಂಡಗಿದೆ ಎಂಬ ಸಿದ್ಧಾಂತವು ಸತ್ಯವೆಂದು ತೋರಿಸಿದನು. ದಕ್ಷಿಣ ಅಮೇರಿಕೆ ಮತ್ತು ಏಶಿಯಾ ಇವು ಬೇರೆಯಾಗಿವೆ. ಮತ್ತು ಪೃಥ್ವಿಯ ಸುಮಾರು ಸುತ್ತಳತೆಯು ಎಷ್ಟಿರಬೇಕು ಎಂಬ ತಿಳಿವಳಿಕೆಯು ಮೆಗೆಲಾನನ ಪೃಥ್ವೀ ಪ್ರದಕ್ಷಿಣೆಯಿಂದ ದೊರಕಿದವು.


ಮೆಗೆಲಾನ

**ವಾಸ್ಕೋ-ದ-ಗಾಮಾ :**— ಈ ಹೆಸರು ನಮಗೆ ಪರಿಚಿತವಿದೆ. ಪೂರ್ವದ ಕಡೆಯಲ್ಲಿ ತಮ್ಮ ವ್ಯಾಪಾರವನ್ನು ಮತ್ತು ವಸಾಹತನ್ನು ಸ್ಥಾಪಿಸಿ ಕ್ರಿಸ್ತೀಧರ್ಮದ ಪ್ರಸಾರವನ್ನು ಕೂಡ ಮಾಡಬೇಕೆಂಬ ಹೇತುವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಭಾರತಕ್ಕೆ ಬಂದ ಮೊದಲನೆಯ ಪೋರ್ತುಗೀಜ ನಾವಿಕನೆಂದರೆ ಇವನೇ. ಬಾರ್ಥಿ-

ಲೋವ್ಯು-ಡಾಯಝನು ಶೋಧಿಸಿದ ಕೇಪ ಆಫ ಗುಡ್ ಹೋಪನ್ನು ಸುತ್ತುಹಾಕಿ ಆಫ್ರಿಕೆಯ ಪೂರ್ವದಂಡೆಯ ಮೇಲಿನ ಮೊಂಬಾಸಾದ ವರೆಗೆ ಹೋದನು. ಅಲ್ಲಿಂದ ಒಬ್ಬ ಭಾರತೀಯ ಪ್ರವಾಸಿಯ ಮಾರ್ಗದರ್ಶನದಲ್ಲಿ, ೧೪೯೮ ರಲ್ಲಿ ಆತನು ಕಾಲಿಕತ್ತಕ್ಕೆ ಬಂದು ಮುಟ್ಟಿದನು. ಹಿಂದುಸ್ಥಾನಕ್ಕೆ ಹೋಗುವ ಹೊಸ ಜಲ ಮಾರ್ಗವನ್ನು ಕಂಡು ಹಿಡಿದ ಶ್ರೇಯವನ್ನು ಆತನು ಗಳಿಸಿದನು.

ಸ. ೧೫೩೦ರಲ್ಲಿ ಬ್ರಾಝಿಲವು ಪೋರ್ತುಗೀಜರ ವಶಕ್ಕೆ ಬಂದಿತು. ಕಾರ್ಟೆಝ ಮತ್ತು ಪಿಝಾರೋ ಎಂಬ ಸ್ಪ್ಯಾನಿಶ್ ನಾವಿಕರು ಅನುಕ್ರಮವಾಗಿ ಮೆಕ್ಸಿಕೊ ಮತ್ತು ಪೇರು ಎಂಬ ದಕ್ಷಿಣ ಅಮೇರಿಕೆಯೊಳಗಿನ ದೇಶಗಳನ್ನು ಹುಡುಕಿ ತೆಗೆದರು. (ಸ. ೧೫೧೯—೩೨) ಈ ದೇಶದಲ್ಲಿ ಬೆಳಗುತ್ತಿರುವ ವೈಭವಸಂಪನ್ನ ಪ್ರಾಚೀನ ಸಂಸ್ಕೃತಿಯನ್ನು ಸ್ಪ್ಯಾನಿಶ್ ಆಕ್ರಮಕಾರರು ನಾಶಮಾಡಿ ಬಿಟ್ಟರು. ಇಲ್ಲಿಯ ಮೂಲ ನಿವಾಸಿಗಳನ್ನು ಸುಲಿದು ಅದರಲ್ಲಿ ಏನೂ ಉಳಿಯದಂತೆ ಮಾಡಿದರು. ಬಂಗಾರದಿಂದ ಸಂಪೂರ್ಣವಾಗಿ ತುಂಬಿದ ಅನೇಕ ನಾವೆಗಳನ್ನು ಅಲ್ಲಿಂದ ಸ್ಪೇನಕ್ಕೆ ಕಳಿಸಲಾಯಿತು. ಆ ಮೇಲೆ ೧೫೩೪ ರಲ್ಲಿ ಇಕ್ವೆಡೋರ, ೧೫೩೮ರಲ್ಲಿ ಬೊಲಿವ್ಹಿಯಾ ಮತ್ತು ೧೫೩೮ರಲ್ಲಿ ಚಿಲಿ ದೇಶಗಳು ಸ್ಪೇನದ ವಶವಾದವು. ಸ್ಪೇನವು ಈ ಪ್ರದೇಶಗಳ ಆರ್ಥಿಕ ಶೋಷಣೆಯನ್ನು ಅತಿ ಭಯಂಕರವಾಗಿ ಮಾಡಿ ಅಲ್ಲಿಯ ಜನರನ್ನು ಗುಲಾಮಗಿರಿ ಮತ್ತು ದಾರಿದ್ರ್ಯ ಇವುಗಳ ಕೂಪದಲ್ಲಿ ನೂಕಿತು. ಈ ರೀತಿ-ಯಾಗಿ ಪೋರ್ತುಗಾಲದ ಅರಸನಾದ ಹೆನ್ರಿ, ಮತ್ತು ಸ್ಪೇನದ ಫರ್ಡಿನಂಡ ಇಝಾಬೆಲಾ ಇವರ ಸಕ್ರಿಯ ಪ್ರೋತ್ಸಾಹನೆಯಿಂದ ಡಾಯಝು, ವಾಸ್ಕೊ-ದ-ಗಾಮಾ ಇತ್ಯಾದಿ ಜನರು ಪೂರ್ವದ ಕಡೆಯ ಹೊಸ ಜಲಮಾರ್ಗವನ್ನು ಹುಡುಕಿ ತೆಗೆದರು ( ೧೪೯೮ ). ಕೋಲಂಬಸ ಮತ್ತು ಅಮೇರಿಗೊ ವ್ಹೆಸ್ಪ್ಯುಸೀ ಇವರು ಹೊಸ ಜಗತ್ತಿನ ಶೋಧ ಮಾಡಿದರು. (ಸ. ೧೪೯೨). ಮೆಗಲಾನನು ಪೃಥ್ವಿಯ ಪರ್ಯಟನ ಮಾಡಿ ಪೃಥ್ವಿ ಪ್ರದಕ್ಷಿಣೆಯ ಮಾರ್ಗವನ್ನು ಜಗತ್ತಿನ ಮುಂದೆ ಇಟ್ಟನು ( ಸ. ೧೫೨೨ )

ಈ ಶೋಧವನ್ನು ಮಾಡಿದ ಸ್ಪೇನ ಮತ್ತು ಪೋರ್ತುಗಾಲ ರಾಷ್ಟ್ರಗಳು ಅಚ್ಚ ರೋಮನ ಕ್ಯಾಥೊಲಿಕ್ ಪಂಥದವು. ರೋಮದ ಪೋಪನು ತನ್ನ ಈ ಅನುಯಾಯಿ ರಾಷ್ಟ್ರಗಳಲ್ಲಿ ತಂಟೆ ಉದ್ಭವಿಸಬಾರದೆಂದು ಹೊಸ ಪ್ರದೇಶಗಳನ್ನು ಇವರಿ-ಬ್ಬರಲ್ಲಿ ಹಂಚಿಕೊಟ್ಟನು. ಅಟಲಾಂಟಿಕ ಮಹಾಸಾಗರದಲ್ಲಿ ಉದ್ದವಾದ ಒಂದು ಕಾಲ್ಪನಿಕ ರೇಷೆಯನ್ನು ಹಾಕಿ ಆ ರೇಷೆಯ ಪಶ್ಚಿಮದ ಕಡೆಯ ಪ್ರದೇಶವು ಪೋರ್ತುಗಾಲದ್ದು ಮತ್ತು ಪೂರ್ವದ ಕಡೆಯ ಪ್ರದೇಶವು ಸ್ಪೇನದ್ದು ಎಂದು ನಿರ್ಣಯಿಸಿದನು. ಪೋಪನ ಈ ಆಜ್ಞೆಯ ಮೂಲಕ ವಾಸ್ಕೊ-ದ-ಗಾಮಾನು ಶೋಧಿಸಿದ ಹೊಸ ಜಲಮಾರ್ಗವು ಸಂಪೂರ್ಣವಾಗಿ ಪೋರ್ತುಗಾಲದ ವಶವಾಯಿತು. ಅಟಲಾಂಟಿಕ ಮತ್ತು ಹಿಂದೀ ಮಹಾಸಾಗರಗಳ ಒಡೆತನವು ತಮ್ಮದೆಂಬ ಅಹಂಕಾರ ದಿಂದ ಪೋರ್ತುಗಾಲದ ಮುಂದಿನ ಚಟುವಟಿಕೆಗಳೆಲ್ಲ ನಡೆದವು.

ಸ. ೧೫೮೦ ನೆಯ ವರ್ಷದಲ್ಲಿ ಸ್ಪೇನದ ಎರಡನೆಯ ಫಿಲಿಪನು ಪೋರ್ತುಗಾಲವನ್ನು ಗೆದ್ದು ಸ್ಪೇನಕ್ಕೆ ಜೋಡಿಸಿದನು. ಇದರಿಂದ ಪೋರ್ತುಗಾಲವು ಮಾಡಿದ ಹೊಸ ಶೋಧಗಳ ಒಡೆತನವು ತನ್ನಿಂದ ತಾನೇ ಸ್ಪೇನಕ್ಕೆ ಹೋಯಿತು. ಆದರೆ ಸ್ಪೇನದ ಈ ಗುತ್ತಿಗೆಯು ಬಹಳ ದಿವಸ ಉಳಿಯಲಿಲ್ಲ. ಫ್ರೆಂಚ ಮತ್ತು ಇಂಗ್ಲಿಷ ಜನರು ಸ್ಪೇನಕ್ಕೆ ಶೀಘ್ರದಲ್ಲಿಯೇ " ಖೋ " ಕೊಟ್ಟರು. ಈ ವಿಷಯವನ್ನು

## ಅವತರಣಿಕೆ

೧. " ನಕ್ಷತ್ರಗಳಿಂದ ಹೊಳೆಯುವ ನಭೋಮಂಡಲವು ಸ್ಥಿರವಿದೆ. ಪೃಥ್ವಿಯು ಮಾತ್ರ ತನ್ನ ಸ್ವೈ ಸುತ್ತಲೂ ತಿರುಗುವದರಿಂದ ಗ್ರಹ ಮತ್ತು ನಕ್ಷತ್ರಗಳ ಉದಯಾಸ್ತಗಳು ಆಗುತ್ತವೆ. "

ಆರ್ಯ ಭಟ್ಟ ( ಇ. ಸ. ೬ನೆಯ ಶತಕ )

೨. ಗೆಲಿಲಿಯೋನು ತನ್ನ ಮಿತ್ರನಾದ ಯೋಲಿನಾರಿವೆವಿಂತಾ ಎಂಬವನಿಗೆ ಬರೆದ ಒಂದು ಪತ್ರದ ಆಶಯವನ್ನು ಕೆಳಗೆ ಕೊಟ್ಟಿದೆ :—

" ನನ್ನ ' ಸಾಯದಿರಿ-ಅಸನುನ್‌ಸಿಅಸ್ ( ನಕ್ಷತ್ರಗಳ ಸಂದೇಶವಾಹಕ ) ಎಂಬ ಪುಸ್ತಕವನ್ನು ನಾನು ಯಾವ ಉದ್ದೇಶದಿಂದ ಬರೆದೆನೆಂಬುದನ್ನು ಹೇಳುತ್ತೇನೆ ದುರ್ಬೀನಿನ ಸಹಾಯದಿಂದ ಆಕಾಶದೊಳಗಿನ ಹೊಳೆಯುವ ಗೋಲಗಳ ನಿರೀಕ್ಷಣೆ-ಯನ್ನು ಮಾಡಿದಾಗ ನನಗೆ ಕಂಡು ಬಂದ ಅದ್ಭುತ ಸಂಗತಿಗಳನ್ನು ನಮ್ಮ ತತ್ವಜ್ಞ ಹಾಗು ಗಣಿತಜ್ಞ ಜನರ ಮುಂದೆ ಇಡಬೇಕೆಂಬುದು ನನ್ನ ಉದ್ದೇಶವು. ಇಲ್ಲಿಯ ವರೆಗೆ ಇತರರಿಗೆ ಕಾಣದಿದ್ದ ಚಮತ್ಕೃತಿಪೂರ್ಣ ಸಂಗತಿಗಳನ್ನು ನನಗೆ ಮೊದಲು ತೋರಿಸಿದ್ದಕ್ಕಾಗಿ ನಾನು ದೇವರಿಗೆ ಅತ್ಯಂತ ಋಣಿಯಾಗಿದ್ದೇನೆ. ಚಂದ್ರನು ಪೃಥ್ವಿಯಂತೆಯೇ ಒಂದು ತೇಜೋಗೋಲವಾಗಿದೆ ಎಂಬುದನ್ನು ನಾನೇ ನಿಶ್ಚಯಿಸಿದ್ದೇನೆ. ಈ ಮುಂಚೆ ಕಾಣದಿದ್ದ ಅನೇಕ ಸ್ಥಿರತಾರಕಾಪುಂಜಗಳು ನನಗೆ ಕಂಡಿವೆ ಇದರ ಹೊರತಾಗಿ ಆಕಾಶಗಂಗೆಯ ಸ್ವರೂಪವನ್ನು ನಾನು ನಿಶ್ಚಿತಗೊಳಿಸಿದ್ದೇನೆ. ಹೀಗಿದ್ದರೂ ನನ್ನ ವಿಶೇಷ ಉಲ್ಲೇಖನೀಯ ಶೋಧವೆಂದರೆ ನಾಲ್ಕು ಅತ್ಯಂತ ಹೊಸ ಗ್ರಹಗಳು ನನಗೆ ಕಂಡು ಬಂದವು ಈ ಗ್ರಹಗಳು ಸೂರ್ಯನ ಸುತ್ತಲು ತಿರುಗುತ್ತವೆ ಎಂಬದನ್ನು ನಾನು ನೋಡಿದ್ದೇನೆ".

## ಅಭ್ಯಾಸ

೧. **ಮುದ್ರಣಕಲೆಯ ಶೋಧದ ಪ್ರಸಾರವು ಯುರೋಪದಲ್ಲಿ ಹೇಗೆ ಆಯಿತು? ಈ ಶೋಧದ ಮಹತ್ವವೇನು?**

೨. **ಯುರೋಪದಲ್ಲಿ ಜ್ಞಾನದ ಪುನರುಜ್ಜೀವನವಾಗಲು ಯಾವ ಪರಿಸ್ಥಿತಿಯು ಕಾರಣೀಭೂತವಾಯಿತು?**




ಜಾನ ಕೆಬಟನ ಜಲಪರ್ಯಟನ ಸ. ೧೪೯೭

ಕೊಲಂಬಸನ ಮೊದಲನೇ ಜಲಪರ್ಯಟನ ಸ. ೧೪೯೨

ವಾಸ್ಕೋ-ದ-ಗಾಮನ ಮೊದಲನೇ ಜಲಪರ್ಯಟನ ಸ. ೧೪೯೭-೯೮

ಕೆಬ್ರಲನ ಜಲಪರ್ಯಟನ ಸ. ೧೫೦೦

ಮೆಗೆಲನನ ಜಲಪರ್ಯಟನ ಸ. ೧೫೧೯-೨೨

ಡ್ರೇಕನ ಜಲಪರ್ಯಟನ ಸ. ೧೫೭೭-೮೦

ಟಾಮ್ಸನನ ಜಲಪರ್ಯಟನ ಸ. ೧೮೭೨-೭೬

ಪ್ರಮುಖ ಸ್ಪೇನಿಶ ವಸಾಹತುಗಳು ಸ. ೧೫೫೦

ಸ್ಪೇನಿಶ ವಸಾಹತುಗಳಲ್ಲಿನ ವೃದ್ಧಿ ಸ. ೧೬೫೦

ಪ್ರಮುಖ ಪೋರ್ತುಗೀಜ ವಸಾಹತುಗಳು ಸ. ೧೫೫೦

ಪ್ರಮುಖ ಡಚ ವಸಾಹತುಗಳು ಸ. ೧೭೫೦

ಪ್ರಮುಖ ಬ್ರಿಟಿಶ ವಸಾಹತುಗಳು ಸ. ೧೭೫೦

ಪ್ರಮುಖ ಫ್ರೆಂಚ ವಸಾಹತುಗಳು ಸ. ೧೭೫೦

ಸ್ಪೆ–ಸ್ಪೇನಿಶ ಪ–ಪೋರ್ತುಗೀಜ ಡ–ಡಚ ಬ–ಬ್ರಿಟಿಶ ಫ–ಫ್ರೆಂಚ

೩. ಯುರೋಪಿಯನ್ ಜನರು ಮಾಡಿದ ಭೌಗೋಲಿಕ ಶೋಧಗಳ ಬುಡದಲ್ಲಿ ಯಾವ ಉದ್ದೇಶವಿದ್ದಿತು ?

೪. ನೌಕಾಯಾನ ಶಾಸ್ತ್ರದೊಳಗಿನ ಯಾವ ಶೋಧಗಳು ಭೌಗೋಲಿಕ ಸಂಶೋಧನೆಗೆ ಸಹಾಯಕಾರಿಯಾದವು ? ಅವುಗಳನ್ನು ಯಾರು ಶೋಧಿಸಿದರು ?

೫. ಕೋಪರ್ನಿಕಸನು ಮಾಡಿದ ಶೋಧದ ಮಾಹಿತಿಯನ್ನು ಸ್ವಲ್ಪದರಲ್ಲಿ ಕೊಡಿರಿ. ಈ ಕಾರ್ಯದ ವೈಶಿಷ್ಟ್ಯವೇನು ?

೬. ಸತತ ಪ್ರಯೋಗ ಮಾಡುತ್ತ ಇರುವದೇ ಗೆಲಿಲಿಯೋನ ಜೀವನಸರ್ವಸ್ವವಿದ್ದಿತು ಎಂಬ ಮಾತನ್ನು ಸ್ಪಷ್ಟೀಕರಿಸಿರಿ.

೭. ಡಾಯಝು, ವಾಸ್ಕೊ-ದ-ಗಾಮಾ, ಕೋಲಂಬಸ, ಅಮೇರಿಗೊ ವ್ಹೆಸ್ಪೂಸಿ ಮತ್ತು ಮೇಗೆಲಾನ ಇವರು ಮಾಡಿದ ಭೌಗೋಲಿಕ ಶೋಧಗಳನ್ನು ಹೇಳಿರಿ.



ಕಾಕ್ಸ್ಟನ್ನನ ಟ್ರೇಡಮಾರ್ಕ

# ೮ನೆಯ ಪಾಠ

## ರೋಮನ್ ಕೆಥಾಲಿಕ್ ಸಂಘಟನೆ

**'ಪೋಪ' ಧರ್ಮಗುರುವಿನ ಉದಯ:—** ಇ. ಸ. ೪೭೬ರಲ್ಲಿ ರೋಮನ್ ಸಾಮ್ರಾಜ್ಯವು ಇಟಲಿಯಲ್ಲಿ ಅಸ್ತವಾಯಿತು. ಆ ಕಾಲದಲ್ಲಿ ಹುಂಬ ವಿಜೇತನಾದ ಓಡೋಆಸರನು ರೋಮ್ಯೂಲಸ್ ಆಗಸ್ಟಸನನ್ನು ರೋಮದಿಂದ ಹೊರತಳ್ಳಿದನು. ಬಳಿಕ ಕಾನಸ್ಟಾಂಟಿನೋಪಲವು ಇ. ಸ ೧೪೫೩ ರಲ್ಲಿ ತುರ್ಕರ ಕೈಯಲ್ಲಿ ಬೀಳುವ ವರೆಗೂ ಒಂದು ಸಾವಿರ ವರ್ಷ ರೋಮನ್ ಸಾಮ್ರಾಜ್ಯವು ಪೂರ್ವ ಭಾಗದಲ್ಲಿ ನೆಲವಿಡಿದು ನಿಂತಿತು. ಈ ಎರಡು ಸಂಗತಿಗಳ ನಡುವಿನ ಅವಧಿಯಲ್ಲಿ ಯುರೋಪ ದಲ್ಲಿ ಅನೇಕ ಸಣ್ಣ ಸಣ್ಣ ರಾಜ್ಯಗಳು ನಿರ್ಮಾಣವಾದವು. ಈಗಿನ ಜರ್ಮನ್ ಮತ್ತು ಫ್ರೆಂಚ ಜನರ ಹಿಂದುಳಿದ ಪೂರ್ವಜರು ಈ ಸಣ್ಣ ರಾಜ್ಯಗಳ ಅಧೀನ ರಾಗಿದ್ದರು. ಅವರಲ್ಲಿ ಫ್ರಾನ್ಸ ಮತ್ತು ಜರ್ಮನಿಗಳ ಮೇಲೆ ಅರಸುಗೈಯುತ್ತಿದ್ದ ಫ್ರ್ಯಾಂಕ ಜನರು ವಿಶೇಷ ಮಹತ್ವದವರಾಗಿದ್ದರು. ಶಾರ್ಲಮೆನ್ ಎಂಬವನು ಅವರಲ್ಲಿ ಎಲ್ಲರಿಗಿಂತ ದೊಡ್ಡ ಅರಸು. ಅವನು ಖಲೀಫ ಹರೂನ–ಅಲ್–ರಶೀದ (ಸ. ೭೬೮–೮೧೪) ನ ಸಮಕಾಲೀನನಾಗಿದ್ದನು. ಅವನ ಮರಣದ ನಂತರ ಅವನ ಸಾಮ್ರಾಜ್ಯವು ಆತನ ಜರ್ಮನ್ ಮತ್ತು ಫ್ರೆಂಚ ದಾಯಾದರಲ್ಲಿ ಹಂಚಿಹೋಯಿತು. ಕಾಲಾಂತರದಿಂದ ಈ ಜರ್ಮನ್–ಫ್ರೆಂಚ ರಾಜ್ಯಗಳು ಶಾಶ್ವತವಾಗಿಬಿಟ್ಟವಲ್ಲದೆ, ಅವುಗಳ ಪರಸ್ಪರ ವಿರೋಧಿ ಕಟ್ಟುಗಳೂ ಸಿದ್ಧವಾದವು. ರೋಮನ್ ಸಾಮ್ರಾಜ್ಯದ ವಿನಾಶವಾದ ನಂತರ ಯುರೋಪಿನ ರಾಜಕೀಯ ಪರಿಸ್ಥಿತಿಯ ವಿಚಾರವನ್ನು ನಾವಿಲ್ಲಿ ಮಾಡುವದಿಲ್ಲ. ರಾಜಕೀಯ ಐಕ್ಯದ ಅಭಾವ, ಅವಿರತ ಯುದ್ಧಗಳು, ಮತ್ತು ಅಸ್ವಸ್ಥತೆ ಈ ಮೂರು ಸಂಗತಿಗಳಲ್ಲಿಯ ಆ ಕಾಲದ ಪರಿಸ್ಥಿತಿಯನ್ನು ಸಾರಾಂಶವಾಗಿ ಹೇಳಬಹುದು. 'ಗಿಲ್ಡ' 'ಟೌನ್ ಕಾರ್ಪೋರೇಶನ್' ಎಂಬ ಹೆಸರುಳ್ಳ ಮಧ್ಯಯುಗೀನ ಸ್ಥಾನಿಕ ಸಂಸ್ಥೆಗಳು ಹಾಗು ರೋಮನ್ ಕೆಥಾಲಿಕ್ ಚರ್ಚ ಇವುಗಳ ಮೂಲಕ ಯುರೋಪೀಯ ಸಂಸ್ಕೃತಿಯು ರಾಜಕೀಯ ಅಸ್ವಸ್ಥತೆಯ ಕಾಲದಲ್ಲಿಯೂ ಗಟ್ಟಿಯಾಗಿ ಉಳಿಯಿತು. ಮಧ್ಯಯುಗದಲ್ಲಿ ಭಾರತದ ಮೇಲೆ ತುರ್ಕರ ದಾಳಿಗಳಾಗಿ ರಾಜಕೀಯ ಅಲ್ಲೋಲಕಲ್ಲೋಲಗಳುಂಟಾದರೂ ಭಾರ ತೀಯ ಸಂಸ್ಕೃತಿಯನ್ನು ಗಟ್ಟಿಯಾಗಿ ಉಳಿಸಿಕೊಳ್ಳುವ ಕಾರ್ಯವನ್ನು ಜಾತಿಸಭೆ, ಗ್ರಾಮಸಭೆಗಳು ಮಾಡಿದವು. ಹಾಗೆಯೇ ಗಿಲ್ಡ ಮತ್ತು ಕಾರ್ಪೋರೇಶನ್ ಎಂಬ ಯುರೋಪದಲ್ಲಿಯ ಸ್ಥಾನಿಕ ಸಂಸ್ಥೆಗಳೂ ಸಂಸ್ಕೃತಿಯ ರಕ್ಷಣೆಯ ಕಾರ್ಯವನ್ನು ಯುರೋಪದಲ್ಲಿ ಮಾಡಿದವು.

ಈ ರಾಜಕೀಯ ಗೊಂದಲದ ಕಾಲದಲ್ಲಿ ರೋಮನ್ ಕೆಥಾಲಿಕ್ ಚರ್ಚಗಳು ಕೂಡ ಯುರೋಪಿಯ ಸಂಸ್ಕೃತಿ ರಕ್ಷಣೆಯ ಕಾರ್ಯವನ್ನು ಹೇಗೆ ಮಾಡಿದವೆಂಬು ದನ್ನು ನಾವು ಈ ಪಾಠದಲ್ಲಿ ಓದುವವರಿದ್ದೇವೆ.

ರೋಮುದಲ್ಲಿಯ ಸಂತ ಪೀಟರನ ಧರ್ಮಪೀಠದ ಉಲ್ಲೇಖವು ಹಿಂದೆ ಬಂದಿದೆ. ರೋಮವು ಕ್ರಿಸ್ತೀ ಧರ್ಮದ ಮುಖ್ಯ ಕೇಂದ್ರವಿದ್ದು ಅದರ ಅಧ್ಯಕ್ಷ 'ಪೋಪ' (ಅಂದರೆ ತಂದೆ) ನಿದ್ದನು. "ನಾನು ತೋರಿಸಿದ ದಿನ್ನೆಯ ಮೇಲೆ ಸಂತ ಪೀಟರನು ಭೂತಲದ ಮೇಲಿನ ಯಾರನ್ನು ಪಾಪಮುಕ್ತರನ್ನಾಗಿ ಮಾಡುವನೋ ಅವರು ಸ್ವರ್ಗಲೋಕಕ್ಕೆ ಹೋಗುವರು" ಎಂದು ಯೇಸೂ ಕ್ರಿಸ್ತನು ಬಹಿರಂಗವಾಗಿ ಹೇಳಿದನು.

ಇದರಿಂದ ಮತ್ತು ರೋಮನ್ ಸಮ್ರಾಟರ ಅಸ್ತಾವಾದುದರಿಂದ ರೋಮುದಲ್ಲಿ ಪೋಪನ ಮಹತ್ವವು ಬೆಳೆಯತೊಡಗಿತು. "ಆಕಾಶದಲ್ಲಿಯ ದೈವೀ ತೇಜೋಗೋಲ ದಲ್ಲಿ ಸೂರ್ಯಚಂದ್ರರಿಗೆ ವಿಶೇಷ ಮಹತ್ವವಿದ್ದಂತೆ ಈ ಜಗತ್ತಿನಲ್ಲಿ ಪೋಪನ ಪ್ರಭುತ್ವಕ್ಕೂ ರಾಜಸತ್ತೆಗೂ ಹೆಚ್ಚಿನ ಮಹತ್ವದ ಸ್ಥಾನವಿದೆ"ಯೆಂದು ಎಂಟನೆಯ ಗ್ರೆಗರಿ ಎಂಬ ಪೋಪನು ಸಾರಿದನು. ಅಲ್ಲದೆ "ರಾಜಸತ್ತೆಗಿಂತ ಪೋಪನ ಪ್ರಭು-ತ್ವವು ಶ್ರೇಷ್ಠ; ಯಾಕಂದರೆ ರಾಜನಿಗೆ ಆತನ ಅಧಿಕಾರಗಳು ಪೋಪನಿಂದಲೇ ದೊರೆಯುತ್ತವೆ. ಪರಮೇಶ್ವರೀ ನ್ಯಾಯದಾನ ಸಮಯದಲ್ಲಿ ರಾಜನ ಕೃತಿಗಳ ಬಗೆಗೆ ಪರಮೇಶ್ವರನ ಮುಂದೆ ಹೇಳಿಕೆಯನ್ನು ಕೊಡುವ ಪ್ರಸಂಗವು ನನಗೆ (ಪೋಪನಿಗೆ) ಬರುತ್ತದೆ" ಎಂದೂ ಪ್ರಕಟಿಸಿದನು.

ಮೊದಲನೆಯ ಫ್ರಾಂಕ ವಂಶೀಯ ರಾಜರಿಗೆ ತಮ್ಮ ಪ್ರಭುತ್ವವನ್ನು ಸ್ಥಿರ ಪಡಿಸಿಕೊಳ್ಳಲು ಪೋಪನ ಆಶೀರ್ವಾದದ ಮತ್ತು ಬೆಂಬಲದ ಅವಶ್ಯಕತೆಯೆನಿಸಿತು. ಅವರಲ್ಲಿಯ ಸೌಹಾರ್ದದ ಸಂಬಂಧವು ಮುಂದೆ ಹೆಚ್ಚು ದೃಢವಾಗಿ ಪಟ್ಟಕ್ಕೆ ಬರುವ ರಾಜನಿಗೆ ಪೋಪನಿಂದಲೇ ರಾಜ್ಯಾಭಿಷೇಕವಾಗತೊಡಗಿತು. ಕ್ರಿ. ಶ. ೮೦೦ ರಲ್ಲಿ ಚಾರ್ಲಸ್ ದಿ ಗ್ರೇಟ ಎಂಬ ಅರಸನ ರಾಜ್ಯಾರೋಹಣ ವಿಧಿಯು ಮೂರನೇ ಲುಯಿ ಎಂಬ ಪೋಪನ ಹಸ್ತದಿಂದಲೇ ಆಯಿತು. ಆ ಕಾಲಕ್ಕೆ "ದೈವೀ ರಾಜರ ಮುಕುಟ ವನ್ನು ಧಾರಣ ಮಾಡುವ ಚಾರ್ಲಸ್ ಆಗಸ್ಟಸ್, ರೋಮನ್ ಜನರ ಶಾಂತತಾ ಪ್ರಿಯ ಸಮ್ರಾಟ" ಎಂಬ ವಿಶೇಷಣಗಳಿಂದ ಆತನನ್ನು ಗೌರವಿಸಲಾಯಿತು. ಇದ ರಿಂದಲೇ "ಪವಿತ್ರ ರೋಮನ್ ಸಾಮ್ರಾಜ್ಯ" ದ ಕಲ್ಪನೆಯು ಉದ್ಭವಿಸಿತು.

ವಾಸ್ತವಿಕವಾಗಿ ಸಾಮ್ರಾಜ್ಯವೇ ಇದ್ದಿಲ್ಲ. ರೋಮನ್‌ರೂ ಇದ್ದಿಲ್ಲ. ಪವಿತ್ರ ವಂತೂ ಇದ್ದೇ ಇಲ್ಲ. ಈ ಸಮ್ರಾಟರು ಕೇವಲ ಐಹಿಕ ಪ್ರಭುತ್ವಾಧೀಶರಾಗಿದ್ದು ದರಿಂದ ಅವರ ಸಾಮ್ರಾಜ್ಯವು ಪವಿತ್ರವಾಗಿರುವದು ಶಕ್ಯವೇ ಇದ್ದಿಲ್ಲ. ಈ ಸಮ್ರಾಟರು ಫ್ರಾಂಕ ಅಥವಾ ಜರ್ಮನರಿದ್ದುದರಿಂದ ಅವರು ರೋಮನ್ನರೇ ಆಗಿ ದ್ದಿಲ್ಲ. ಶಾರ್ಲಮೇನನ ತರುವಾಯ ಒಡೆದು ಹೋಳು ಹೋಳಾದ ಸಾಮ್ರಾಜ್ಯವು ಎಂತಹ ಸಾಮ್ರಾಜ್ಯವು ?

**ಪೋಪ ಮತ್ತು ರಾಜರ ಜಗಳ** :— ಕ್ರಿಸ್ತಿಧರ್ಮೀಯ ಜಗತ್ತಿನಲ್ಲಿ ಪೋಪನ ಅಧಿಕಾರವು ಸರ್ವಶ್ರೇಷ್ಠವಾಗಿತ್ತು. ಅವನ ಕೈಕೆಳಗೆ ಧರ್ಮಾಧಿಕಾರಿಗಳ ಒಂದು ದೊಡ್ಡ ಮಾಲಿಕೆಯೆ ಇತ್ತು: ಆರ್ಚಡೀಕನ್, ಡೀಕನ್, ಆರ್ಚಬಿಶಪ್,

ಬಿಶಪ್ ಇತ್ಯಾದಿ. ಪ್ರಾರ್ಥನಾ ಮಂದಿರದಲ್ಲಿ ಪುರೋಹಿತ (ಪ್ಯಾರೀಶ್ ಪ್ರೀಸ್ಟ್) ಮತ್ತು ಆತನ ಕೈಕೆಳಗಿನ ಸೇವಕವರ್ಗವು ಈ ಮಾಲಿಕೆಯಲ್ಲಿ ಕೊನೆಗೆ ಬರುತ್ತದೆ. ಮಧ್ಯಯುಗೀನ ಕಾಲದಲ್ಲಿ ಇವರಿಗೆಲ್ಲ ಚರ್ಚದ 'ಕ್ಲಾರ್ಕ್ಸ' ಅಥವಾ 'ಕ್ಲೆರಿಕಲ್ಸ್' (ಪ್ರಾರ್ಥನಾ ಮಂದಿರದಲ್ಲಿಯ ಪುರೋಹಿತವರ್ಗವೆಂಬ ಅರ್ಥದಲ್ಲಿ) ಎಂದೆನ್ನುತಿದ್ದರು. ಪೋಪನ ಬೆಂಬಲದಿಂದ ಈ ಪುರೋಹಿತ ವರ್ಗಕ್ಕೆ ವಿಶಿಷ್ಟ ಸವಲತ್ತುಗಳೂ, ಅಧಿಕಾರಗಳೂ ದೊರೆತಿದ್ದವು. ಪ್ರಾರ್ಥನಾ ಮಂದಿರದ ಒಡೆತನದಲ್ಲಿ ದೊಡ್ಡ ದೊಡ್ಡ ಹೊಲಗಳೂ ಆಸ್ತಿಪಾಸ್ತಿಗಳೂ ಇದ್ದವು ಅವುಗಳ ವಸೂಲಿಯನ್ನು ಧರ್ಮಾಧಿಕಾರಿಗಳೇ ಮಾಡುತ್ತಿದ್ದರು. ಕ್ರಿಸ್ತ ಸಮಾಜದಿಂದ ಈ ಮಂದಿರಗಳಿಗೆ ದತ್ತಿಗಳೂ ಕೊಡುಗೆಗಳೂ ದೊರೆಯುತ್ತಿದ್ದವು ಅಲ್ಲದೆ ತಮ್ಮ ಉತ್ಪನ್ನದಲ್ಲಿ ಹತ್ತರಲ್ಲಿ ಒಂದು ಭಾಗವನ್ನು 'ಧರ್ಮದ ಋಣ' (ಅದಕ್ಕೆ 'ಟಾಯಿಥ್' ಎನ್ನುತ್ತಿದ್ದರು) ವೆಂದು ಕೊಡುತ್ತಿದ್ದರು. ಇದರಿಂದ ಕ್ರಿಸ್ತೀ ಧರ್ಮ ಮಂದಿರಗಳು ಬಹಳ ಶ್ರೀಮಂತವಾದವು. ರಾಜರಿಗಿಂತ ಪೋಪರು ಬಲಾಢ್ಯರಾದರು. ರಾಜನಿಗೆ ಆತನ ದೇಶದ ಮಟ್ಟಿಗೆ ಮಾನ ಸನ್ಮಾನಗಳು ದೊರೆತರೆ ಪೋಪನಿಗೆ ಎಲ್ಲೆಡೆಯಲ್ಲಿಯೂ ಸನ್ಮಾನವಾಗತೊಡಗಿತು. ತಥಾಕಥಿತ "ಪವಿತ್ರ ರೋಮನ್ ಸಮ್ರಾಟ" ನಿಗೆ ಒಂದು ಬಗೆಯ ಹೆಚ್ಚಿನ ದರ್ಜೆಯು ಪ್ರಾಪ್ತವಾದುದರ ಕಾರಣವೆಂದರೆ ಪೋಪನಿಂದ ರಾಜ್ಯಾಭಿಷೇಕವಾಗುತ್ತಿದ್ದುದು. "ಚಂದ್ರನು ತನ್ನ ತೇಜವನ್ನು ಸೂರ್ಯನ ಕಡೆಯಿಂದ ದೊರಕಿಸುವಂತೆ ರಾಜಮಹಾರಾಜರು ತಮ್ಮ ಅಧಿಕಾರವನ್ನು ಪೋಪನಿಂದ ಪಡೆಯುವರು ಆದರೆ ಸೂರ್ಯನ ತೇಜಸ್ಸಿನಂತೆ ಪೋಪನ ಅಧಿಕಾರವು ಯಾವಾಗಲೂ ಅಬಾಧಿತವಿರುತ್ತದೆ" ಎಂದು ೭ನೆಯ ಗ್ರೇಗರಿ ಎಂಬ ಪೋಪನ ಶಬ್ದಗಳಲ್ಲಿ ಹೇಳಬಹುದು. ಆದರೆ ಇದೇನೂ ಕೇವಲ ರಾಜಕೀಯ ದರ್ಜೆಯ ಪ್ರಶ್ನೆಯಿದ್ದಿಲ್ಲ. ಆರ್ಥಿಕ ದೃಷ್ಟಿಯಿಂದ ಚರ್ಚದ ಲಾಭವಾವುದೋ ಅದು ರಾಜಸತ್ತೆಯ ಹಾನಿ ಎಂಬ ಪರಿಸ್ಥಿತಿಯಿತ್ತು. ಚರ್ಚದ ಒಡೆತನದ ಆಸ್ತಿಪಾಸ್ತಿಗಳ ಮೇಲೆ ಸರಕಾರಿ ಕರಗಳಿದ್ದಿಲ್ಲ. ಅಪ್ರಾಮಾಣಿಕ ಜನರು ತಮ್ಮ ಆಸ್ತಿಪಾಸ್ತಿಯನ್ನು ಹೆಸರಿಗೆ ಮಾತ್ರ ಚರ್ಚಕ್ಕೆ ಒಪ್ಪಿಸಿ ಸರಕಾರೀ ಕರಗಳನ್ನು ತಪ್ಪಿಸಿಕೊಳ್ಳುತ್ತಿದ್ದರು. ಚರ್ಚದ ಸೇವಕ ವರ್ಗದಲ್ಲಿ ಅತ್ಯಂತ ಕೆಳದರ್ಜೆಯ ಸೇವಕರು ಕೂಡ ಪುರೋಹಿತ ವರ್ಗದ ವಿಶಿಷ್ಟ ಸವಲತ್ತುಗಳ ಹಕ್ಕನ್ನು ಹೇಳುತ್ತಿದ್ದರು. ಅದರಿಂದ ರಾಜಸತ್ತೆಯ ಕಾಯದೆಗಳು ಪುರೋಹಿತ ವರ್ಗಕ್ಕೆ ಬಂಧನಕರವಿಲ್ಲೆಂಬ ಅರ್ಥವಾಗತೊಡಗಿತು. ಇದರ ಮೂಲಕ ನೀಚ ಅಪರಾಧಿಗಳಿಗೆ ಕೂಡ ಚರ್ಚದ ಆಶ್ರಯವನ್ನು ತೆಗೆದುಕೊಂಡು ರಾಜನ ಕಾಯದೆಗಳ ಹಿಡಿತದಿಂದ ಪಾರಾಗಲು ಶಕ್ಯವಾಗಿಬಿಟ್ಟಿತು. ಈ ಪರಿಸ್ಥಿತಿಯು ಸ್ವಾಭಾವಿಕವಾಗಿಯೆ ಎಲ್ಲ ರಾಜರಿಗೂ ಅಸಹ್ಯವೆನಿಸಿತು. ಅದರಿಂದ ಧರ್ಮದ ಪ್ರಮುಖರ ಹಾಗು ರಾಜ್ಯದ ಪ್ರಮುಖರ ಪರಸ್ಪರ ಅಧಿಕಾರ ಕ್ಷೇತ್ರಗಳನ್ನು ನಿಶ್ಚಿತಗೊಳಿಸುವ ವಿಷಯವಾಗಿ ಜಗಳಗಳು ಆರಂಭವಾದವು. ಅವರಲ್ಲಿ ಯಾರೂ ಎರಡನೆಯವರ ಶ್ರೇಷ್ಠತ್ವವನ್ನು ಮನ್ನಿಸಲು ಸಿದ್ಧರಿದ್ದಿಲ್ಲ.

ಧರ್ಮಗುರುಗಳನ್ನು ಸರಿಯಾದ ದಾರಿಗೆ ತರಲು ರಾಜರು ಸೈನ್ಯಬಲವನ್ನು ಉಪಯೋಗಿಸಿದರೆ ಅವರನ್ನು ಬಹಿಷ್ಕೃತಗೊಳಿಸುವ ಶಸ್ತ್ರವು ಧರ್ಮಗುರುಗಳ ಕೈಯಲ್ಲಿತ್ತು. ಆ ಕಾಲವು ಧಾರ್ಮಿಕ ಶ್ರದ್ಧೆಯ ಕಾಲವಾಗಿದ್ದುದರಿಂದ ಈ ಜಗಳದಲ್ಲಿ ವಿಜಯವು ಪೋಪನಿಗೆ ದೊರೆಯುತ್ತಿತ್ತು. ಆತನ ಆಶೀರ್ವಾದವಿಲ್ಲದೆ ಯಾವ ವಿವಾಹವೂ ಪವಿತ್ರವೆನಿಸುತ್ತಿದ್ದಿಲ್ಲ. ಯಾವದೇ ಹುಡುಗನಿಗೆ ಕ್ರಿಸ್ತೀ ಧರ್ಮದ ದೀಕ್ಷೆಯು ದೊರೆಯುತ್ತಿದ್ದಿಲ್ಲ. ಪೋಪನ ಆಶೀರ್ವಾದವಿರದಿದ್ದರೆ ಮರಣೋನ್ಮುಖ ಮನುಷ್ಯನಿಗೆ ಸ್ವರ್ಗದಲ್ಲಿ ಪ್ರವೇಶವು ದೊರೆಯದೆ ಅವನು ನರಕದ ಹಾದಿಯನ್ನು ಹಿಡಿಯಬೇಕಾಗುತ್ತಿತ್ತೆಂದು ಜನರ ನಂಬಿಕೆಯಿತ್ತು. ಈ ದೈವೀ ರಾಜ್ಯದ ( ಸ್ವರ್ಗದ ) ಕೀಲೀಕೈಗಳು ಸಂತ ಪೀಟರನ ಪೀಠಕ್ಕೆ ಬಂದ ಧರ್ಮಗುರುಗಳ ಕೈಯಲ್ಲಿದ್ದವು.

**ಧರ್ಮಗುರುಗಳ ಮಠ :—** ಜೈನರಲ್ಲಿ ಶ್ರಾವಕರು ಮತ್ತು ಯತಿಗಳಿದ್ದಂತೆ ಕ್ರಿಸ್ತೀ ಧರ್ಮದ ಅನುಯಾಯಿಗಳಲ್ಲಿಯೂ ಸಾಮಾನ್ಯ ಜನರು ಮತ್ತು ಧರ್ಮಗುರುಗಳು ಎಂದು ಎರಡು ಪ್ರಕಾರಗಳಿವೆ. ನಮ್ಮಲ್ಲಿ ಸನ್ಯಾಸಿಗಳಿದ್ದಂತೆ ಕ್ರಿಸ್ತೀ ಧರ್ಮದಲ್ಲಿ ' ಮಂಕ್ಸ ' ಮತ್ತು ' ಫ್ರಾಯರ್ಸ ' ಎಂಬ ಸನ್ಯಾಸಿಗಳಿರುವರು. ಅವರ ಸಂಸ್ಥೆಗಳು ಮಧ್ಯಯುಗೀನ ಯುರೋಪದಲ್ಲಿ ಪ್ರಬಲವಾಗಿದ್ದವು. ' ಮಂಕ್ಸ 'ರು ಮಠಗಳಲ್ಲಿದ್ದರೆ ' ಫ್ರಾಯರ್ಸ 'ರು ನಮ್ಮಲ್ಲಿಯ ಪರಿವ್ರಾಜಕರಂತೆ ಧರ್ಮ ಪ್ರಚಾರದ ಕಾರ್ಯವನ್ನು ಮಾಡಲು ಸಂಚಾರ ಮಾಡುತ್ತಿದ್ದರು. ಸರ್ವಸಾಧಾರಣ ಪುರೋಹಿತರ ಗಣನೆಯು ಐಹಿಕ ಜನರಲ್ಲಿ ಆಗುತ್ತಿತ್ತು. ಯಾಕಂದರೆ ಅವರು ಸರ್ವಸಾಮಾನ್ಯ ಜನರಲ್ಲಿ ಬೆರೆತು ನಡೆದುಕೊಳ್ಳುತ್ತಿದ್ದರು. ಮತ್ತು ಜನತೆಯ ಸೇವೆಯನ್ನು ಮಾಡುತ್ತಿದ್ದರು.

' ಮಂಕ ' ಎಂಬ ಮಠವಾಸಿ ಸನ್ಯಾಸಿಗಳ ದಿನಚರ್ಯೆಯು ಬಹಳ ಕಠಿಣವಾಗಿದ್ದಿತು. ಅವರ ಮಠಗಳು ನಿವಾಂತ ಸ್ಥಳಗಳಲ್ಲಿರುತ್ತಿದ್ದವು. ' ಫ್ರಾಯರ್ಸ ' ಎಂಬ ಪರಿವ್ರಾಜಕರ ದಿನಕ್ರಮವೂ ಬಹಳ ನಿಯಮಬದ್ಧವಾಗಿರುತ್ತದೆ. ಆದರೆ ಅವರು ಸಮಾಜದಿಂದ ಇಷ್ಟು ಅಲಿಪ್ತರಾಗಿರುತ್ತಿದ್ದಿಲ್ಲ. ಯೇಸುವಿನ ಆದರ್ಶವನ್ನು ಮುಂದಿಟ್ಟುಕೊಂಡು ಅವರು ರೋಗಪೀಡಿತರ ಹಾಗು ದುಃಖಿಗಳ ಸಾಂತ್ವನವನ್ನು ಮಾಡುತ್ತ ಅಲೆದಾಡುವರು. ಅವರ ಈ ಪರಂಪರೆಯು ಮಧ್ಯಯುಗದಿಂದಲೂ ನಡೆದು ಬಂದಿದೆ.

ಮಧ್ಯಯುಗೀನ ' ಮಂಕ 'ರು ತಮ್ಮ ಕಾಲವನ್ನು ಬರೀ ಧರ್ಮಚಿಂತನೆಯಲ್ಲಿಯೆ ಕಳೆಯುತ್ತಿದ್ದಿಲ್ಲ. " ಕಾಯಕವೇ ಕೈಲಾಸ "ವೆಂಬುದು ಅವರ ಧ್ಯೇಯವಾಗಿತ್ತು. ( ನಮ್ಮಲ್ಲಿಯೂ ' ಆಶ್ರಮ 'ವೆಂಬ ಸಂಸ್ಥೆಯು ಅವಿಶ್ರಾಂತ ಶ್ರಮ ಮಾಡುವವರದೇ ಆಗಿದ್ದಿತು. ) ನಸುಕಿನಲ್ಲಿ ಬೇಗನೆ ಎದ್ದು ಅವರು ಬಹಳ ದುಡಿಯುತ್ತಿದ್ದರು. ಹಾಗೆಯೆ ಪ್ರಾರ್ಥನೆಯನ್ನೂ ಚಿಂತನೆಯನ್ನೂ ಮಾಡುತ್ತಿದ್ದರು. ಅವರು ಮೇಲಿಂದ ಮೇಲೆ ಉಪವಾಸ ಜಾಗರಣೆಗಳನ್ನು ಮಾಡುತ್ತಿದ್ದರು. ಧಾರ್ಮಿಕ ಗ್ರಂಥಗಳ ಅಭ್ಯಾಸ ಅಥವಾ ಗ್ರಂಥ ಲೇಖನ, ಶಾಸ್ತ್ರೀಯ ಪ್ರಯೋಗವನ್ನು ಮಾಡಿ ನೋಡು

ವದು ಇವೇ ಮೊದಲಾದ ಕಾರ್ಯಗಳಲ್ಲಿಯೂ ಅವರು ಕಾಲಕಳೆಯುತ್ತಿದ್ದರು. 'ಸರಲ ಜೀವನ ಮತ್ತು ಉದಾತ್ತ ವಿಚಾರಸರಣಿ' ಯ ಆದರ್ಶವನ್ನು ಇತರರಿಗೆ ಹಾಕಿ ಕೊಡುವುದಕ್ಕೆ ಅವರು ಒಕ್ಕಲಿಗರ, ಬಡಿಗರ, ನೇಕಾರರ ಮತ್ತು ಕುಂಬಾರರ ಕಾಯಕಗಳನ್ನು ಮಾಡುತ್ತಿದ್ದರು. ಮತ್ತು ತಮ್ಮ ಅವಶ್ಯಕತೆಗಳನ್ನು ತಾವೇ ಪೂರೈಸಿಕೊಳ್ಳುತ್ತಿದ್ದರು. ಒಬ್ಬ ಲೇಖಕನು ಹೇಳಿದಂತೆ "ಅಜ್ಞಾನ ಮತ್ತು ಪಾಶವೀವೃತ್ತಿ ಇವುಗಳ ರುಕ್ಷ ಮರಳುಗಾಡಿನಲ್ಲಿ 'ಮಠ' ವು ಸುಧಾರಣೆಯ ಹಾಗು ಪ್ರೇಮಭಾವದ ಪ್ರಾಣಸ್ಥಳವಾಗಿತ್ತು. ದಣಿದ ದಾರಿಕಾರರಿಗೆ ವಿಶ್ರಾಂತಿಯು ಅಲ್ಲಿಯೆ ದೊರೆಯುತ್ತಿತ್ತು. ಬೇನೆಯಿಂದ ಬಳಲುತ್ತಿದ್ದವರ ಶುಶ್ರೂಷೆಯು ಅಲ್ಲಿಯೆ ಆಗುತ್ತಿತ್ತು. ಅಶಿಕ್ಷಿತರಿಗೆ ಶಿಕ್ಷಣವು ಅಲ್ಲಿಯೆ ದೊರೆಯುತ್ತಿತ್ತು. ಹಸಿದವರಿಗೆ ಅನ್ನ, ವಸ್ತ್ರಹೀನರಿಗೆ ವಸ್ತ್ರ ದೊರೆಯುವ ಸ್ಥಳವು ಇದೇ ಆಗಿತ್ತು." ಈ ಮಠಗಳು ಆಗಿನ ಕಾಲದ ಶಾಲಾಗೃಹಗಳೂ ರುಗ್ಣಾಲಯಗಳೂ ವಾಙ್ಮಯ ಕೇಂದ್ರಗಳೂ ಆಗಿದ್ದವು.

ಮಹತ್ವದ ಗ್ರಂಥಗಳ ಪ್ರತಿಗಳನ್ನು ಮಾಡುವ ಕಾರ್ಯವನ್ನು ಧಾರ್ಮಿಕ ಕಾರ್ಯವೆಂಬ ಭಾವನೆಯಿಂದ ಮಠನಿವಾಸಿಗಳು ಮಾಡುತ್ತಿದ್ದರು. ಕೈಯಿಂದ ತೆಗೆದ ಸುಂದರ ಚಿತ್ರಗಳಿಂದ ಅವರು ತಮ್ಮ ಹಸ್ತಲಿಖಿತಗಳ ಶೋಭೆಯನ್ನು ಬೆಳೆಸುತ್ತಿದ್ದರು. ಮುದ್ರಣಕಲೆಯ ಶೋಧವಾಗುವವರೆಗೆ ಜ್ಞಾನದ ಅಮೌಲ್ಯ ಇಡುಗಂಟುಗಳನ್ನು ಅವರೇ ಕಾಯ್ದು ಇಟ್ಟರು. ಮಧ್ಯಯುಗೀನ ಮಠನಿವಾಸಿಗಳು ವೇಳೆಯನ್ನು ತಿಳಿದುಕೊಳ್ಳಲು ಜಲಘಟಿಕಾ ಯಂತ್ರ ಮತ್ತು ಸೂರ್ಯನ ನೆಳಲಿನ ಗಡಿಯಾರಗಳನ್ನು ಉಪಯೋಗಿಸುತ್ತಿದ್ದರು. ಈ ಗಡಿಯಾರಗಳಂತೆ ಅವರು ಅತ್ಯಂತ ನಿಯಮಿತವಾಗಿ ನಡೆದುಕೊಳ್ಳುತ್ತಿದ್ದರು. ಆಧುನಿಕ ಯಾಂತ್ರಿಕ ಸಾಮಾಜಿಕ ಜೀವನದ ಉದ್ಭವವು ಈ ಘಟಿಕಾಯಂತ್ರದಿಂದಲೇ ಆಗಿದೆ. ಮಧ್ಯಯುಗೀನ ಕ್ರಿಸ್ತೀ ಧರ್ಮೋಪದೇಶಕರಲ್ಲಿ ಆಸೀಸಿಯಲ್ಲಿಯ ಸಂತ ಫ್ರಾನ್ಸಿಸ್‌ನು ನಮ್ಮಲ್ಲಿಯ ಸಂತ ತುಕಾರಾಮನಿಗೆ ಸರಿದೊರೆಯಾದ ಸಾಧು ಪುರುಷನಾಗಿದ್ದನು. ಕ್ರಿ. ಶ. ೧೧೮೨ರಿಂದ ೧೨೨೬ರ ವರೆಗಿನ ಅವಧಿಯಲ್ಲಿ ಅವನು ಆಗಿಹೋದನು. ಅವನು ಇಟಲಿಯಲ್ಲಿ ಇರುತ್ತಿದ್ದನು. "ಯೇಸೂಕ್ರಿಸ್ತನ ಜೀವನಕ್ರಮ ಮತ್ತು ಆತನ ವಿರಕ್ತಿ ಇವುಗಳ ಅನುಕರಣವನ್ನು ಮಾಡುವ ಇಚ್ಛೆಯು ನನಗಿದೆ. ಕೊನೆಯವರೆಗೆ ಈ ಮಾರ್ಗದಿಂದಲೇ ಹೋಗುವ ನಿರ್ಧಾರವು ನನ್ನದಿದೆ. ಯೇಸೂಪ್ರಣೀತ ವಿರಕ್ತಿಯ ಪವಿತ್ರ ಮಾರ್ಗದಿಂದಲೇ ಹೋಗಿರಿ ಮತ್ತು ಜಿಗುಟುತನ ಬಿಡಬೇಡಿರಿ ಎಂಬುದೇ ನನ್ನ ಆಗ್ರಹಪೂರ್ವಕ ಹೇಳಿಕೆಯಾಗಿದೆ" ಎಂದು ಆತನು ಅನ್ನುತ್ತಿದ್ದನು.

**ಧರ್ಮ ಯುದ್ಧಗಳು :—** ಇಸ್ಲಾಮದ ಉದಯ ಮತ್ತು ಪ್ರಸಾರ ಇವುಗಳ ಮೂಲಕ ಕ್ರಿಸ್ತೀ ಧರ್ಮಕ್ಕೆ ದೊಡ್ಡ ಗಂಡಾಂತರವು ನಿರ್ಮಾಣವಾಗಿದ್ದಿತು. ಇ. ಸ. ೭೧೭ರಲ್ಲಿ ಕಾನ್‌ಸ್ಟಾಂಟಿನೋಪಲದಲ್ಲಿ ಮತ್ತು ೭೩೨ರಲ್ಲಿ ಟೂರ್ಸದಲ್ಲಿ ಇಸ್ಲಾಮಿ ಆಕ್ರಮಕರನ್ನು ತಡೆಹಿಡಿಯಲಾಯಿತೆಂಬ ಸಂಗತಿಯನ್ನು ನಾವು ಓದಿರುವೆವು.

ತುರ್ಕರು ಇಸ್ಲಾಮ ಧರ್ಮವನ್ನು ಸ್ವೀಕರಿಸಿ ಅದರ ಪ್ರಸಾರವನ್ನು ಹುಮ್ಮಸಿನಿಂದ ಆರಂಭಿಸಿದರು. ಆಗ ಮಾತ್ರ ಪೂರ್ವದ ಕಡೆಗೆ ಇಸ್ಲಾಮ ಧರ್ಮೀಯ ಮತ್ತು ಕ್ರಿಸ್ತೀಜನರಲ್ಲಿಯ ಜಗಳಗಳು ವಿಕೋಪಕ್ಕೆ ಹೋದವು. ಯೇಸೂಕ್ರಿಸ್ತನ ಸಮಾಧಿಯು ಜೆರೂಸಲೇಮದಲ್ಲಿ ಇದ್ದುದರಿಂದ ಅದು ಕ್ರಿಸ್ತೀ ಜನರಿಗೆ ಪರಮ ಪೂಜ್ಯವಾಗಿರುವ ಮೂಲಕ ಅದನ್ನು ವಶಪಡಿಸಿಕೊಳ್ಳಲು ಕ್ರಿಸ್ತಿ ಮತ್ತು ಇಸ್ಲಾಮಿ ಸೇನೆಗಳು ಹೋರಾಡಿದವು. ಪೆಲೆಸ್ಟಾಯಿನವನ್ನು ಮುಸಲ್ಮಾನರು ಗೆದ್ದಂದಿನಿಂದ ಯುರೋಪದಲ್ಲಿಯ ಕ್ರಿಸ್ತಿ ಸತ್ತಾಧೀಶರು ತಮ್ಮ ಜೇರೂಸಲೇಮದಂತಹ ಪವಿತ್ರ ಸ್ಥಳಗಳನ್ನು ಮರಳಿ ಪಡೆದುಕೊಳ್ಳಲು ನಿರ್ಧರಿಸಿದರು. ಈ ಜಗಳವು ಅನೇಕ ಶತಕಗಳವರೆಗೆ ನಡೆದಿದ್ದಿತು. ಕೊನೆಗೆ ತುರ್ಕರು ಪೂರ್ವ ಭಾಗದಲ್ಲಿಯ ರೋಮನ್ ಸಾಮ್ರಾಜ್ಯದಲ್ಲಿ ರಾಜಧಾನಿಯಾದ ಕಾನ್‌ಸ್ಟಂಟಿನೋಪಲವನ್ನು ವಶಪಡಿಸಿ ಕೊಂಡರು ಇ. ಸ. ೧೦೭೬ರಲ್ಲಿ ಸೆಜಲುಕ ತುರ್ಕರು ಜೇರೂಸಲೇಮವನ್ನು ವ್ಯಾಪಿಸಿ ದರು. ಸ. ೧೦೭೬ರಿಂದ ಸ. ೧೪೫೩ರ ವರೆಗೆ ಮುಸಲ್ಮಾನರ ಹಾಗು ಕ್ರಿಶ್ಚನ್ನರ ಜೇರೂಸಲೇನು ಮೊದಲಾದ ಪವಿತ್ರ ಸ್ಥಳಗಳ ವಶದ ಬಗೆಗೆ ಆದ ಯುದ್ಧಗಳಿಗೆ 'ಕ್ರುಸೇಡ್ಸ' ಎಂಬ ಹೆಸರುಂಟು. 'ಕ್ರುಸೇಡ' ಎಂದರೆ 'ಕ್ರಾಸ್' ಸಲುವಾಗಿ ಮಾಡಿದ ಯುದ್ಧ. ಮುಸಲ್ಮಾನರ 'ಜೀಹಾದ' ದಂತೆ ಕ್ರಿಶ್ಚನ್ನರ 'ಕ್ರುಸೇಡ'.

ಈ ಧರ್ಮಯುದ್ಧಗಳ ವಿವರಗಳಲ್ಲಿ ಸೇರದೆ ಅವುಗಳ ಸಂಬಂಧದ ಅತ್ಯಂತ ಸ್ವಲ್ಪ ಸಂಗತಿಗಳನ್ನು ನಾವು ನೋಡುವವರಿದ್ದೇವೆ. ಮೊದಲನೆಯ ಧರ್ಮ ಯುದ್ಧವು ಇ. ಸ. ೧೦೯೫ ರಲ್ಲಿ ಆಯಿತು 'ಪೀಟರ ದಿ ಹರ್ಮಿಟ್' ಎಂಬ ಹೆಸ ರಿನ ಕ್ರಿಸ್ತಿ ಧರ್ಮಪ್ರಚಾರಕನ ಉಪದೇಶದಿಂದ ಈ ಯುದ್ಧಕ್ಕೆ ಉತ್ತೇಜನವು ದೊರೆ ಯಿತು. ಆತನ ವಕ್ತೃತ್ವದ ಪ್ರಭಾವದಿಂದ ಬೇರೆ ಬೇರೆ ಕ್ರಿಸ್ತೀ ಧರ್ಮದ ದೇಶ ಗಳಿಂದ ೩೦,೦೦೦ ಧರ್ಮವೀರರ ಸೇನೆಯು ಸಿದ್ಧವಾಗಿ ಸೇರಿತು. ಈ ಸೇನೆಯು 'ಈಶ್ವರೀ ಸೇನೆ' ಎಂಬ ಹೆಸರನ್ನಿಟ್ಟುಕೊಂಡಿತು. ತಮಗೆ ಪವಿತ್ರವಾದ ಜೆರೂಸ- ಲೇಮವನ್ನು ಕೈವಶ ಮಾಡಿಕೊಳ್ಳುವಲ್ಲಿ ಈ ಸೇನೆಯು ಯಶಸ್ವಿಯಾದರೂ ಅದರ ಮೇಲಿನ ತನ್ನ ಹಿಡಿತವನ್ನು ಬಹುಕಾಲವಿಟ್ಟುಕೊಳ್ಳಲು ಶಕ್ಯವಾಗಲಿಲ್ಲ. ಸ. ೧೧೪೭ ರಲ್ಲಿ ಜೊಡೇಸಾದಲ್ಲಿ ತುರ್ಕರು ೩೦ ಸಾವಿರ ಕ್ರಿಶ್ಚನ್ನರನ್ನು ಪರಂಧಾಮಕ್ಕೆ ಅಟ್ಟಿ ದರು. ಇದರಿಂದ ಎರಡನೆಯ ಧರ್ಮಯುದ್ಧವು ಉದ್ಭವಿಸಿತು. ಜರ್ಮನಿಯ ಮೂರನೆಯ ಕಾನ್‌ರ್‍ಯಾಡ್ ಮತ್ತು ಫ್ರಾನ್ಸಿನ ಏಳನೆಯ ಲುಯಿ ಇವರು ಈ ಎರಡನೆಯ ಯುದ್ಧದಲ್ಲಿ ಮುಂದಾಳ್ತನವನ್ನು ವಹಿಸಿದ್ದರು. ಆದರೂ ಸ. ೧೧೮೭ ರಲ್ಲಿ ಪ್ರಸಿದ್ಧ ಮುಸಲ್ಮಾನ ವಿಜೇತನಾದ ಸಲಾವುದ್ದೀನನು ಜೇರೂಸಲೇಮವನ್ನು ಮರಳಿ ಗೆದ್ದುಕೊಂಡನು. ಸಲಾಉದ್ದೀನನ ಈ ಆಹ್ವಾನವನ್ನು ಆಗಿನ ಕಾಲದ ಅನೇಕ ಕ್ರಿಸ್ತೀ ರಾಜ್ಯಕರ್ತರು ಅಂಗೀಕರಿಸಿದರು. ಜರ್ಮನಿಯ ಫ್ರೆಡರಿಕ್, ಫ್ರಾನ್ಸಿನ ಎರಡನೆಯ ಫಿಲಿಪ್ ಮತ್ತು ಇಂಗ್ಲಂಡಿನ 'ಸಿಂಹ ಹೃದಯಿ' ರಿಚರ್ಡ್ ಇವರು ಪ್ರಮುಖರಾಗಿದ್ದರು. ಇವರಲ್ಲಿ ಫ್ರೆಡರಿಕ್‌ನು ದಾರಿಯಲ್ಲಿಯೆ ಅಪಮೃತ್ಯು-

ವಿಗೀಡಾದನು. ಮತ್ತು ಫಿಲಿಪ್ ಹಾಗು ರಿಚರ್ಡ ಇವರಲ್ಲಿ ಅಂತಃಕಲಹವು ಉಂಟಾಯ್ತು. ಇದರ ಪರಿಣಾಮವಾಗಿ ಸಲಾಉದ್ದೀನನು ಕ್ರಿಸ್ತೀ ವಿರೋಧಕರ ಮೇಲೆ ಮತ್ತೊಮ್ಮೆ ಪ್ರಚಂಡ ವಿಜಯವನ್ನು ಸಂಪಾದಿಸಿದನು. ೨ನೆಯ ಇನೋಸಂಟ ಎಂಬ ಹೆಸರುಳ್ಳ ಪೋಪನ (೧೨೦೨-೧೨೦೪) ಕಳಕಳಿಯ ಆದೇಶದ ಮೇರೆಗೆ ನಾಲ್ಕನೆಯ ಧರ್ಮಯುದ್ಧವು ಜರುಗಿತು. ಆದರೆ ಅದರಲ್ಲಿಯೂ ಕ್ರಿಸ್ತೀ ಜನರಿಗೆ ಅಪಜಯವೇ ಉಂಟಾಯಿತು. ಕ್ರಿಸ್ತೀ ಧರ್ಮವೀರರು ತುರ್ಕರೊಡನೆ ಹೋರಾಡಿ ಎರಡು ಕೈ ನೋಡುವದನ್ನು ಬಿಟ್ಟು ಕ್ರಿಸ್ತೀ ನಗರವಾದ ಕಾನ್‌ಸ್ಟಂಟಿನೋಪಲ್ಲಿನ ಮೇಲೆಯೆ ದಾಳಿಯನ್ನು ಮಾಡಿದರು. ಇ. ಸ. ೧೨೧೨ರಲ್ಲಿ ಆದ 'ಬಾಲಕರ ಧರ್ಮಯುದ್ಧ' ವಂತೂ ಅತ್ಯಂತ ಹಾಸ್ಯಾಸ್ಪದವಾಗಿಬಿಟ್ಟಿತು. "ಮಕ್ಕಳ ಮುಖ ದಲ್ಲಿ ಮಹಾಶಕ್ತಿಯಿರುತ್ತದೆ" ಎಂಬ ಯೇಸುವಿನ ವಚನದ ಆಧಾರವನ್ನು ತೆಗೆದು ಕೊಂಡು ಕೆಲ ಬುದ್ಧಿಗೇಡಿ ಕ್ರಿಶ್ಚನ್ನರು ಈ ಯುದ್ಧದ ಗುಲ್ಲನ್ನೆಬ್ಬಿಸಿದರು. ಬೇರೆ ಬೇರೆ ದೇಶಗಳಿಂದ ೨೦ ಸಾವಿರ ವರೆಗೆ ಬಾಲಕರನ್ನು ಕೂಡಿಸಿ ಜೆರುಸಲೇಮವನ್ನು ತೆಗೆದುಕೊಳ್ಳಲೋಸುಗ ಕಳಿಸಿಕೊಡಲಾಯ್ತು! ಅವರಲ್ಲಿ ಕೆಲವರನ್ನು ಸ್ವಾರ್ಥಾಂಧ ಕ್ರಿಶ್ಚನ್ ವ್ಯಾಪಾರಿಗಳು ಗುಲಾಮರೆಂದು ದಾರಿಯಲ್ಲಿಯೆ ಮಾರಿಬಿಟ್ಟರು. ಮೂರನೆಯ ಇನೋಸಂಟ ಎಂಬ ಪೋಪನ ಮಧ್ಯಸ್ಥಿಯ ಮೂಲಕ ಉಳಿದವರನ್ನು ಮರಳಿ ತರಲಾಯ್ತು!

ಒಟ್ಟಿನಲ್ಲಿ ಧರ್ಮಯುದ್ಧಗಳು ದುಃಖದಾಯಕ ಸಂಗತಿಗಳಾಗಿ ಬಿಟ್ಟವು. ತುರ್ಕರ 'ಅಪವಿತ್ರ' ಕೈಯಿಂದ ಜೆರೂಸಲೇಮವನ್ನು ಬಿಡಿಸಿಕೊಳ್ಳುವ ಧ್ಯೇಯ ವೇನೂ ಕೈಗೂಡಲಿಲ್ಲ. ಆದರಿಂದ ಅಗಣಿತ ದ್ರವ್ಯಹಾನಿಯೂ ಮನುಷ್ಯಹಾನಿಯೂ ಮಾತ್ರ ಆದವು. ಆದರೆ ಒಂದು ದೊಡ್ಡ ಲಾಭವಾಯ್ತು. ಯುರೋಪಿನಲ್ಲಿ ಬೇರೆ ಬೇರೆ ಕ್ರಿಸ್ತಿ ಧರ್ಮದ ರಾಷ್ಟ್ರಗಳಲ್ಲಿ ಐಕ್ಯಭಾವವು ನಿರ್ಮಾಣವಾಯ್ತು. ಕ್ರಿಸ್ತಿ ಧರ್ಮದ ಪವಿತ್ರ ಸ್ಥಳಗಳನ್ನು ವಶಪಡಿಸಿಕೊಳ್ಳುವದಕ್ಕಾಗಿ ಆ ಪ್ರಯತ್ನಗಳಾಗಿದ್ದು ದರಿಂದ ಪೋಪನ ಸಾಮರ್ಥ್ಯಕ್ಕೂ ಲೌಕಿಕಕ್ಕೂ ಕಳೆಯೇರಿತು. ಪೂರ್ವ ಮತ್ತು ಪಶ್ಚಿಮಗಳಲ್ಲಿಯ ಈ ಜಗಳಗಳ ಅತ್ಯಂತ ಮಹತ್ವದ ಪರಿಣಾಮವು ಅಪ್ರತ್ಯಕ್ಷ ರೀತಿಯಿಂದ ಆಯಿತು.

ಇ. ಸ. ೧೪೫೩ರಲ್ಲಿ ಕಾನ್‌ಸ್ಟಂಟಿನೋಪಲ್‌ವನ್ನು ತುರ್ಕರು ವಶಪಡಿಸಿಕೊಂಡ ದ್ದರಿಂದ ಹೊಸ ವ್ಯಾಪಾರೀ ಮಾರ್ಗವನ್ನು ಶೋಧಿಸುವ ಕಾರ್ಯಕ್ಕೆ ಚಾಲನೆಯು ದೊರೆಯಿತು. ಈ ಸಂಗತಿಯನ್ನು ಹಿಂದಿನ ಪಾಠದಲ್ಲಿ ನಾವು ಓದಿರುವೆವು. ಧರ್ಮ ಯುದ್ಧಗಳಲ್ಲಿ ಹೋರಾಡಿದ ಸೈನಿಕರ, ಅನೇಕ ಅಪರಿಚಿತ ದೇಶಗಳ ಮತ್ತು ಅಲ್ಲಿಯ ಜನರ ಪರಿಚಯವು ಆಯ್ತು. ಆದರಿಂದ ಮಧ್ಯಯುಗೀನ ಯುರೋಪಿಯನ್ನರ ಅಲಿಪ್ತ ವೃತ್ತಿಯು ಅಳಿದುಹೋಯಿತು. ಪೂರ್ವದ ಕಡೆಗಿನ ಯುದ್ಧಭೂಮಿಯಿಂದ ಮರಳಿ ಬಂದ ಸೈನಿಕರು ಪೂರ್ವ ದಿಕ್ಕಿನ ದೇಶಗಳಿಂದ ಅನೇಕ ಹೊಸ ವಸ್ತುಗಳನ್ನು ತಮ್ಮೊಡನೆ ತೆಗೆದುಕೊಂಡುಬಂದರು. ಆದರಿಂದ ಪೂರ್ವ ಪಶ್ಚಿಮಗಳ ವ್ಯಾಪಾರಕ್ಕೆ

ಉತ್ತೇಜನವು ದೊರೆಯಿತು. ಯುರೋಪಿನಲ್ಲಿಯ ಉದ್ಯೋಗ ವ್ಯವಸಾಯ, ಕಲಾ-ಕೌಶಲ್ಯ ಮತ್ತು ವೈಚಾರಿಕ ಜೀವನ ಮುಂತಾದ ಕ್ಷೇತ್ರಗಳಲ್ಲಿ ನವಚೈತನ್ಯವುಂಟಾ-ಯಿತು. ಯುರೋಪದಲ್ಲಿ ಜ್ಞಾನಸಂವರ್ಧನ ತರಂಗಗಳೆದ್ದವು; ಯುರೋಪೀಯ ಸಂಸ್ಕೃತಿಯ ಪುನರುಜ್ಜೀವನವಾಯ್ತು. ಅದರ ತಿಳಿವಳಿಕೆಯನ್ನು ಮುಂದಿನ ಪಾಠ-ದಲ್ಲಿ ಮಾಡಿಕೊಡುವೆವು.

## ಅವತರಣಿಕೆ

ಯುರೋಪದಲ್ಲಿ ಮಧ್ಯಯುಗೀನ ಕ್ರಿಸ್ತೀ ಮಠಗಳ ವಿಷಯವಾಗಿ ರಾಬಿನ್ಸನ್ ಎಂಬ ಲೇಖಕನು ವ್ಯಕ್ತಪಡಿಸಿದ ವಿಚಾರಗಳನ್ನು ಇದರಡಿಯಲ್ಲಿ ಕೊಡಲಾಗಿದೆ. ಅವು ನಿಜವಾಗಿ ಮನನೀಯವಾಗಿವೆ:—

"ಮಂಕರು ಮತ್ತು ತತ್ಸಮ ಇತರ ಕ್ರಿಸ್ತಿ ಸನ್ಯಾಸಿಗಳು ಯುರೋಪದಲ್ಲಿ ಮಾಡಿದ ಮನನೀಯ ಕಾರ್ಯದ ಪ್ರಭಾವವು ಶತಕಾನುಶತಕಗಳ ವರೆಗೆ ಉಳಿಯಿತು. ಅದರಲ್ಲಿ 'ಬೆನಿಡಿಕ್ಟಾಯಿನ್', 'ಫ್ರಾನ್ಸಿಸ್ಕನ್', 'ಡಾಮಿನಿಕನ್' ಮತ್ತು 'ಜೇಸೂಯಿಟ್' ಪಂಥಗಳಲ್ಲಿ ಅನೇಕ ದೊಡ್ಡ ಜನರು ಆಗಿಹೋದರು. ದೊಡ್ಡ ದೊಡ್ಡ ತತ್ವಜ್ಞರು, ಶಾಸ್ತ್ರಜ್ಞರು, ಇತಿಹಾಸಕಾರರು, ಕಲಾಕಾರರು, ಕವಿಗಳು ಮತ್ತು ರಾಜಕಾರಣಿಗಳು ಇವರಲ್ಲಿ ಆಗಿಹೋದರು. ಅವರಲ್ಲಿ ಬಾನಿಫೇಸ್, ಬೇಕನ್, ಲ್ಯೂಥರ್, ಇರ್ಯಾಸ್ಮಸ್ ಮುಂತಾದವರ ಹೆಸರುಗಳು ಜಗದ್ವಿಖ್ಯಾತ-ವಾಗಿವೆ. ಅವರು ಧಾರ್ಮಿಕ ಕ್ಷೇತ್ರದ ಜೊತೆಯಲ್ಲಿ ಐಹಿಕ ಪ್ರಗತಿಯ ವಿವಿಧ ಕ್ಷೇತ್ರಗಳಲ್ಲಿಯೂ ಮುಂದಾಳಾಗಿದ್ದರು."

## ಅಭ್ಯಾಸ

೧. ರೋಮನ್ ಸಾಮ್ರಾಜ್ಯದ ವಿನಾಶದ ನಂತರ ಯುರೋಪದಲ್ಲಿ ಯಾವ ಬಗೆಯ ಪರಿಸ್ಥಿತಿಯುಂಟಾಯಿತು?
೨. ಈ ಪರಿಸ್ಥಿತಿಯಲ್ಲಿ ಯುರೋಪೀಯ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಕಾರ್ಯ-ವನ್ನು ಯಾರು ಮಾಡಿದರು?
೩. ಪೋಪ ಮತ್ತು ಯುರೋಪದಲ್ಲಿಯ ಅರಸರ ನಡುವಿನ ಜಗಳದ ಕಾರಣಗಳನ್ನು

೪. ಮಧ್ಯಯುಗದಲ್ಲಿಯ ಕ್ರಿಸ್ತಿ ಸನ್ಯಾಸಿ ವರ್ಗದ ಕಾರ್ಯದ ವಿವರವನ್ನು ಕೊಡಿರಿ.
೫. ಧರ್ಮಯುದ್ಧದ ಕಾರಣಗಳನ್ನು ಮತ್ತು ಪರಿಣಾಮವನ್ನು ಸ್ವಲ್ಪದರಲ್ಲಿ ಹೇಳಿರಿ.

# ೯ನೆಯ ಪಾಠ

## ಯುರೋಪದಲ್ಲಿಯ ಸಾಂಸ್ಕೃತಿಕ ಪುನರುಜ್ಜೀವನ

**ವಿಷಯ ಪ್ರವೇಶ :—** ಹದಿನೈದನೆಯ ಶತಕದ ಕೊನೆಗೆ ಕೋಲಂಬಸನು ಅಮೇರಿಕೆಯ ಮಾರ್ಗವನ್ನು ಕಂಡುಹಿಡಿದನಾದರೆ ವಾಸ್ಕೋ-ದ-ಗಾಮಾನು ಹಿಂದುಸ್ಥಾನಕ್ಕೆ ಹೋಗುವ ಹೊಸ ದಾರಿಯನ್ನು ಆರಂಭಿಸಿದನು. ಹೊಸ ಮಾರ್ಗಗಳನ್ನು ಶೋಧಿಸಿ ತೆಗೆಯುವ ಈ ಪ್ರಯತ್ನಗಳನ್ನು ಯುರೋಪಿಯನ್ನರು ವ್ಯಾಪಾರೀ ಅವಶ್ಯಕತೆಗಳ ಮೂಲಕ ಮಾಡಿದರು. ಧರ್ಮಯುದ್ಧಗಳ ಪರ್ಯವಸಾನವು ಕೊನೆಗೆ ಕಾನಸ್ಟಂಟಿನೋಪಲವನ್ನು ೧೪೫೩ರಲ್ಲಿ ತುರ್ಕರಿಗೆ ಬಿಟ್ಟುಕೊಡುವಲ್ಲಿ ಆಯಿತು. ಇದೊಂದು ದೊಡ್ಡ ಆಪತ್ತಿಯೆ ಬಂದೊದಗಿತೆಂದು ಕೆಲಕಾಲ ಯುರೋಪಿಯನ್ನರಿಗೆ ಅನಿಸಿದರೂ ಕೊನೆಗೆ ಅದು ಸುಫಲದಾಯಕವಾಗಿಯೇ ಪರಿಣಮಿಸಿತು; "ಅವಶ್ಯಕತೆಯು ಶೋಧದ ಜನನಿ" ಎಂಬ ಮಾತು ನಿಜ. ಯುರೋಪಿಯನ್ನರ ವ್ಯಾಪಾರಿ ಅವಶ್ಯಕತೆಗಳ ಮೂಲಕವೇ ಅನೇಕ ಅಜ್ಞಾತ ದೇಶಗಳು ಹಾಗು ಹೊಸ ವ್ಯಾಪಾರಿ ಮಾರ್ಗಗಳು ಶೋಧಿಸಲ್ಪಟ್ಟವು. ಈ ಕೆಲಸದಲ್ಲಿ ಹೋಕಾಯಂತ್ರವು (ಮರೀನರ್ಸ ಕಂಪಾಸ್) ಅವರಿಗೆ ಬಹಳ ಉಪಯುಕ್ತವಾಯ್ತು. ಅದರ ಜೆನ್ನಾಜಿನ್ನು ತುಪಾಕಿಯ ಗುಂಡುಗಳು, ಕಾಗದ ಮತ್ತು ಮುದ್ರಣ ಕಲೆ ಇವುಗಳ ಶೋಧವಾಯ್ತು. ಈ ಎಲ್ಲ ಶೋಧಗಳನ್ನು ಚೀನವು ಮೊದಲು ಮಾಡಿತು. ಸಾಹಸಿಗರಾದ ಯುರೋಪಿಯನ್ನರು ಈ ಎಲ್ಲ ಶೋಧಗಳನ್ನು ಆತ್ಮಸಾತ್ ಮಾಡಿಕೊಂಡು ಅವುಗಳಲ್ಲಿ ಬೇಗನೆ ಹೆಚ್ಚಿನ ಸುಧಾರಣೆಗಳನ್ನು ಮಾಡಿದರು. ಅರಬರು ಈ ಶೋಧಗಳ ಜ್ಞಾನವನ್ನು ಯುರೋಪದಿಂದ ಏಶಿಯದಲ್ಲಿ ಹರಡಿದರು: ಈ ಸಂಗತಿಯನ್ನು ನಾವು ಮುಂಚೆಯೆ ತಿಳಿದುಕೊಂಡಿದ್ದೇವೆ. ಅರಬರು ಇದಕ್ಕಿಂತಲೂ ಹೆಚ್ಚು ಮಹತ್ವದ ಕಾರ್ಯವನ್ನು ಯುರೋಪಿಗಾಗಿ ಮಾಡಿದರು. ಪ್ರಾಚೀನ ಗ್ರೀಸದ ಜ್ಞಾನಭಾಂಡಾರವನ್ನು ಅವರೇ ರಕ್ಷಿಸಿದರು. ಮಧ್ಯಯುಗದಲ್ಲಿ ಅರಬರು ಯುರೋಪಿನ ಗುರುಸ್ಥಾನದಲ್ಲಿದ್ದರು. ಕಾನ್‌ಸ್ಟಂಟಿನೋಪಲದ ಪತನವಾದ ಬಳಿಕ ಅನೇಕ ಗ್ರೀಕ ಪಂಡಿತರು ತಮ್ಮ ಜೀವವನ್ನು ಉಳಿಸಿಕೊಳ್ಳುವದಕ್ಕಾಗಿ ಇಟಲಿ ಮತ್ತು ಪಶ್ಚಿಮ ಯುರೋಪದಲ್ಲಿಯ ದೇಶಗಳಿಗೆ ಓಡಿಹೋದರು. ಅವರು ಅಲ್ಲಿ ಹೋದುದರಿಂದ ಪ್ರಾಚೀನ ಗ್ರೀಕ ಜ್ಞಾನದ ವಿಷಯವಾಗಿ ಜನರಲ್ಲಿಯ ಜಿಜ್ಞಾಸೆಯು ಜಾಗ್ರತವಾಯ್ತು. ಈ ಎಲ್ಲ ಘಟನೆಗಳ ಮೂಲಕ ಯುರೋಪದ ಸಾಂಸ್ಕೃತಿಕ ಜೀವನದಲ್ಲಿ ಸರ್ವಾಂಗೀಣ ಕ್ರಾಂತಿಯು ಸಂಭವಿಸಿತು. ಈ ಸಾಂಸ್ಕೃತಿಕ ಕ್ರಾಂತಿಗೇ "ಜ್ಞಾನದ ಪುನರುಜ್ಜೀವನ" (ಆಂಗ್ಲಭಾಷೆಯಲ್ಲಿ 'ರೆನೆಸಾನ್ಸ') ಎಂದು ಹೆಸರುಂಟು. ಪ್ರಾಚೀನ ಕಾಲದಲ್ಲಿಯ ಗ್ರೀಕ ಹಾಗೂ ರೋಮನ್ ಸಂಸ್ಕೃತಿಗಳ ಪುನರುಜ್ಜೀವನವು ಈ ಕಾಲದಲ್ಲಿ ಆಯ್ತು. ಅದರಿಂದ ಯುರೋಪದ ಸಾಂಸ್ಕೃತಿಕ ಜೀವನದಲ್ಲಿ ನವಚೈತನ್ಯವುಂಟಾಯ್ತು. ಅವರ

ಸುಪರಿಣಾಮವು ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಮತ್ತು ಆರ್ಥಿಕ ಕ್ಷೇತ್ರಗಳಲ್ಲೆಲ್ಲ ಕಂಡು ಬಂದಿತು. ಆಧುನಿಕ ಯುರೋಪೀಯ ಸುಧಾರಣೆಯು 'ರೆನೆಸಾನ್ಸ್' ದೊಳಗಿಂದಲೇ ಆಗಿದೆ. ಈ ಪಾಠದಲ್ಲಿ ನಾವು ಸಾಂಸ್ಕೃತಿಕ ಪ್ರಗತಿಯ ವಿಚಾರವನ್ನಷ್ಟೇ ಮಾಡಲಿರುವೆವು.

**ಹೊಸ ಕ್ಷಿತಿಜಗಳು :—** ಈ ಕಾಲದಲ್ಲಿ ಭೌಗೋಲಿಕ ಕ್ಷೇತ್ರದಲ್ಲಿ ಕೋಲಂಬಸ್, ವಾಸ್ಕೋ–ದ–ಗಾಮಾ ಮೊದಲಾದ ಸಂಶೋಧಕರು ನವೀನ ಪ್ರದೇಶಗಳನ್ನು ಶೋಧಿಸಿದರು. ಬೌದ್ಧಿಕ ಕ್ಷೇತ್ರದಲ್ಲಿ ಅವಿಸ್ಮರಣೀಯವಾದ ಕಾರ್ಯವನ್ನು ಮಾಡಿದರು. ದೊಡ್ಡ ದೊಡ್ಡ ಪಂಡಿತರು ಈ ಕಾಲದಲ್ಲಿಯೇ ಆಗಿಹೋದರು. ೧೩ ನೆಯ ಶತಕದಿಂದಲೇ ಈ ಕಾರ್ಯವು ಆರಂಭವಾಗಿತ್ತು. ಜಗತ್ಪ್ರಸಿದ್ಧ 'ದಿ ಡಿವ್ಹಿನಾಕಾಮೆಡಿಯಾ' ಎಂಬ ಮಹಾಕಾವ್ಯದ ಲೇಖಕನಾದ ದಾಂತೆಯು ಇ. ಸ. ೧೨೬೫ರಲ್ಲಿ ಇಟಲಿಯಲ್ಲಿಯ ಫ್ಲಾರೆನ್ಸ ನಗರದಲ್ಲಿ ಹುಟ್ಟಿದನು. ನವಯುಗದ ಆಗಮನದ ಪೂರ್ವಸೂಚನೆಯನ್ನು ಅವನು ಕೊಟ್ಟನು. ಹಳೆಯ ಅಸ್ತಮಾನಯುಗ ಮತ್ತು ಉದಯೋನ್ಮುಖ ನವಯುಗ ಇವುಗಳನ್ನು ಹೊಂದಿಸುವಲ್ಲಿ ದಾಂತೆಯು ಸುವರ್ಣಸೇತುವಾಗಿದ್ದನು.

**ಪಿತ್ರಾರ್ಕ :—**( ೧೩೦೪–೭೪ ) ಇವನು ನವಯುಗದ ಅರುಣೋದಯವನ್ನು ಸಾರಿದನು. "ಪಿತ್ರಾರ್ಕನ ವಿಚಾರಗಳನ್ನು ತಿಳಿದುಕೊಳ್ಳುವದೆಂದರೆಯೆ ನವಯುಗದ ಪರಿಚಯವನ್ನು ಮಾಡಿಕೊಳ್ಳುವದು" ಎಂದು ಒಬ್ಬ ಲೇಖಕನು ಅಂದಿರುವನು. ಮಾನವತೆಯು ಆತನ ಕಾವ್ಯದ ಜೀವಾಳವಾಗಿತ್ತು. ಹಳೆಯ ವಾಙ್ಮಯದಲ್ಲಿ ಪರಮೇಶ್ವರನಿಗೆ ಪ್ರಾಧಾನ್ಯವಿದ್ದರೆ ಹೊಸ ವಾಙ್ಮಯವು 'ಮಾನವ'ನಲ್ಲಿಯೇ ಕೇಂದ್ರಿತವಾಗಿತ್ತು. ಮೊದಲಿನ ವಾಙ್ಮಯವು ಲ್ಯಾಟಿನ್ ಭಾಷೆಯಲ್ಲಿ ಬರೆಯಲ್ಪಟ್ಟಿತು; ಆದರೆ ನವೀನ ವಾಙ್ಮಯವು ಇಟಾಲಿಯನ್ ಮತ್ತು ಇತರ ಪ್ರಾಕೃತ ಭಾಷೆಗಳಲ್ಲಿ ರಚಿಸಲ್ಪಟ್ಟಿತು. ಕಾಸಿಮೋ ಮತ್ತು ಲಾರೆಂಝೋ ಎಂಬ ದಾಮೇದಿಚಿ ಈ ಬಂಧುಗಳು ಪಿತ್ರಾರ್ಕಪ್ರಣೀತವಾದ ನವಯುಗದ ಸಂದೇಶವನ್ನು ಹರಡುವಲ್ಲಿ ಮುಂದಾಗಿದ್ದರು. 'ಆಂಗ್ಲಭಾಷೆಯ ಜನಕ'ನೆಂದು ಕರೆಯಲ್ಪಡುವ ಚಾಸರನು ಆಂಗ್ಲಭಾಷೆಗೆ ಹೊಸ ಉಡಿಗೆಯನ್ನು ಉಡಿಸಿದನು. ಆಧುನಿಕ ಮರಾಠಿ ವಾಙ್ಮಯದಲ್ಲಿಯ ಜ್ಞಾನೇಶ್ವರನ ಪ್ರಾಕೃತದಷ್ಟಾದರೂ ಚಾಸರನ ಆಂಗ್ಲಭಾಷೆಯು ಆಧುನಿಕವಾಗಿದ್ದಿಲ್ಲ. ಆದರೆ ಆತನ "ಕ್ಯಾಂಟರ್ಬರಿ ಟೇಲ್ಸ" ಎಂಬ ಕಥಾಸಂಗ್ರಹದಲ್ಲಿ ಮಾನವೀ ಮತ್ತು ಐಹಿಕ ಅಂಶಗಳಿಗೆ ಕೊಡಲಾದ ಪ್ರಾಧಾನ್ಯವು ಈ ಕಾಲದ ವಾಙ್ಮಯದ ವೈಶಿಷ್ಟ್ಯವಾಗಿತ್ತು.

**ರೋಜರ ಬೇಕನ್ :–** (೧೨೧೪-೧೨೯೪) ಈತನು ಒಬ್ಬ ಆಂಗ್ಲ ಪಂಡಿತನು. ಈ ಯುಗದ ಇನ್ನೊಬ್ಬ ಹೆಸರಾದ ಪ್ರತಿನಿಧಿಯು. 'ಓಪುಸ್ ಮೇಯುಸ್' ಎಂಬ ಗ್ರಂಥವನ್ನು ಇವನು ಲ್ಯಾಟಿನ್ ಭಾಷೆಯಲ್ಲಿ ಬರೆದನು. ನವಯುಗದ ಉದಯ

ವಾಗುವ ಮುಂಚೆ ಜಾಗ್ರತವಾಗಿದ್ದ ಜ್ಞಾನಲಾಲಸೆಯ ಅಥವಾ ಜಿಜ್ಞಾಸೆಯ ವೃತ್ತಿಯ ನಿದರ್ಶನವು ಈ ಗ್ರಂಥದಲ್ಲಿ ದೊರೆಯುತ್ತದೆ. ( ಈ ಪಾಠದ ಕೊನೆಯಲ್ಲಿ ಈ ಗ್ರಂಥದಲ್ಲಿಯ ಒಂದು ಅವತರಣಿಕೆಯನ್ನು ಕೊಟ್ಟಿದೆ. ) ಯುಕ್ತಿವಾದ ಮತ್ತು ಪ್ರಯೋಗ ಇವುಗಳಲ್ಲಿ ಬೇಕನ್ನನ ಒಲವೆಲ್ಲ ಪ್ರಯೋಗದ ಕಡೆಗೆ ಇತ್ತು. ಆತನ ವಿಚಾರಸರಣಿಯು ಅತ್ಯಾಧುನಿಕವಾಗಿತ್ತು. ಆದರಿಂದ ರೋಜರ ಬೇಕನ್ನನು ಪ್ರಯೋಗಾತ್ಮಕ ಚಿಕಿತ್ಸಾಪದ್ಧತಿಯ ಆದ್ಯ ಪ್ರವರ್ತಕನೆಂದು ತಿಳಿಯಲ್ಪಟ್ಟನು



ಲೇನಾರ್ದೋ ದಾ ವಿಂಚಿ

ಕೋಪರ್ನಿಕಸ್‌ನೆಂಬ ಪೋಲಂಡದ ನಿವಾಸಿ ( ೧೪೭೩–೧೫೪೩ ) ಟಾಯಕೋ ಬ್ರಾಹೇ ಎಂಬ ಡೆನ್ಮಾರ್ಕದ ನಾಗರಿಕ ( ೧೫೪೬–೧೬೦೧ ) ಕೆಪ್ಲರ ಎಂಬ ಜರ್ಮನ್ (೧೫೭೧–೧೬೩೦) ಮತ್ತು ಗ್ಯಾಲಿಲಿಯೋ ಎಂಬ ಇಟಾಲಿಯನ್ (೧೫೬೪–೧೬೪೨), ಈ ಪ್ರಕಾರ ಅನೇಕ ಸಂಶೋಧಕರು ವಿಜ್ಞಾನಕ್ಷೇತ್ರದಲ್ಲಿ ಬೆಳಗಿಹೋದರು. ಹಿಂದಿನ ಪಾಠಗಳಲ್ಲಿ ಕೋಪರ್ನಿಕಸ್ ಹಾಗು ಗ್ಯಾಲಿಲಿಯೋ ಇವರ ಬಗೆಗೆ ನೀವು ಓದಿರುವಿರಿ.

ಈ ಜ್ಞಾನಯುಗವು ಎಷ್ಟು ಸರ್ವಾಂಗೀಣವಾಗಿತ್ತೆಂಬ ಸಂಗತಿಯು ಕಲ್ಪ-ನೆಯು ಮಾಯಕೇಲ ಆಂಜಲೋ (ಸ. ೧೪೭೫-೧೫೬೪) ಮತ್ತು ಲೇನಾರ್ದೋ ದಾ ವಿಂಚಿ (ಸ. ೧೪೫೨-೧೫೧೯) ಎಂಬ ಇಬ್ಬರು ಕಲಾವಂತರ ಕಾರ್ಯದಿಂದ ಆಗ ಬಲ್ಲದು. ಅವರಿಬ್ಬರೂ ಶ್ರೇಷ್ಠ ಕಲಾವಂತರಾಗಿದ್ದರಲ್ಲದೆ ಉತ್ತಮ ತರಗತಿಯ ಕಾಯದೆ ಪಂಡಿತರೂ ಆಗಿದ್ದರು. ರಾಫೇಲ್ (೧೪೮೩-೧೫೨೦) ಎಂಬ ಅತ್ಯಂತ ಲೋಕಪ್ರಿಯ ಕಲಾಕಾರನು ಈ ಕಾಲದಲ್ಲಿಯೇ ಆಗಿಹೋದನು. ಟಿಶಿಯನ್ (೧೪೭೭-೧೫೭೬) ಎಂಬ ಅತ್ಯಂತ ಲೋಕಪ್ರಿಯ ಇನ್ನೊಬ್ಬ ಶ್ರೇಷ್ಠ ಚಿತ್ರಕಾರನಾಗಿ ಹೋದನು. ಆ ಕಾಲದಲ್ಲಿ ಹೆಸರಾದ ವ್ಯಕ್ತಿಗಳ ತದ್ರೂಪ ಪ್ರತಿಮೆಗಳನ್ನು ಟಿಶಿಯನ್ನನು ಸಿದ್ಧಪಡಿಸಿದನು. ಆದರಿಂದ ಆ ವ್ಯಕ್ತಿಗಳ ಮೂರ್ತಿಮಂತ ದರ್ಶನವು ನಮಗೆ ಇಂದಿಗೂ ಆಗುವಂತಾಗಿದೆ.

ಶಿಲ್ಪಕೃತಿಯ ಕ್ಷೇತ್ರದಲ್ಲಿ ಅವಜಡವಾದ ರೋಮನ್ ಶಿಲ್ಪಕಲೆಯ ಸ್ಥಳವನ್ನು ಕೋಮಲ ಗಾಥಿಕ್ (ಗ್ರೀಕ) ಶಿಲ್ಪವು ತೆಗೆದುಕೊಂಡಿತು. ಈ ಪದ್ಧತಿಯ ಕಟ್ಟಡ-ಗಳಲ್ಲಿ ರೋಮದಲ್ಲಿಯ ಸಂತ ಪೀಟರನ ಚರ್ಚ ಮತ್ತು ಲಂಡನ್ನಿನಲ್ಲಿಯ ಸಂತ ಪಾಲನ ಚರ್ಚ ಇವು ಜಗದ್ವಿಖ್ಯಾತವಾಗಿವೆ. ವ್ಹೇನೀಸದಲ್ಲಿಯ "ಡೋಜ ಪ್ರಾಸಾದ"ವು ಐಹಿಕ ಸ್ವರೂಪದ ಕಟ್ಟಡಗಳಲ್ಲಿ ಸುಪ್ರಸಿದ್ಧವಾಗಿದೆ

ಕ್ರಿಸ್ತಿ ಮತ್ತು ಇಸ್ಲಾಮಿ, ಹಳೆಯ ಮತ್ತು ಹೊಸ ಪಾಶ್ಚಾತ್ಯ ಮತ್ತು ಪೌರ್ವಾತ್ಯ ಕಲ್ಪನೆಗಳ ಸುಂದರ ಸಮನ್ವಯವು ಈ ಕಟ್ಟಡಗಳ ಕಾರ್ಯದಲ್ಲಿ ಕಂಡು ಬರುತ್ತದೆ. ಹಳೆಯ ರೋಮನ್ ಕಟ್ಟಡಗಳು ಅಂಚುಗಳುಳ್ಳ ಮಡಿಕೆಗಳಂತೆ ಕಾಣುತ್ತಿದ್ದವು. ಜ್ಞಾನಯುಗದಲ್ಲಿಯ ನವಕಲ್ಪನೆಗಳ ಮೂಲಕ ಆ ಹಳೆಯ ಕಲೆಯಲ್ಲಿ ಹೊಳಪು ಮತ್ತು ವರ್ಣಸಂಗತಿಗಳ ಪ್ರವೇಶವಾಯ್ತು. ಮೂರು ಜನರ ವಿವಿಧ ಬಣ್ಣಗಳ ಕಾಜಿನ ಕಿಡಕಿಗಳ ಕಲ್ಪನೆಯನ್ನು ಎತ್ತಿಕೊಂಡಿದ್ದರಿಂದ ಈ ಪರಿ-ಣಾಮವು ಸಂಭವಿಸಿತು. ವರ್ತುಲಾಕಾರದ ಕಮಾನುಗಳನ್ನು ಅರಬರು ಆರಂಭಿಸಿ-ದರು. ಕೊನೆಗೆ ಗಾಥಿಕ್ ಶಿಲ್ಪಿಗಳು ಸಣ್ಣಾಗುತ್ತ ಹೋಗುವ ಶಿಖರಗಳನ್ನು ಕಟ್ಟಿ ಈ ಕಲೆಗೆ ಕಳಸವಿಟ್ಟರು. "ಎಲ್ಲ ಕಟ್ಟಡಗಳು ಸಂಗಮರವರೀ ಕಲ್ಲಿನವಿದ್ದವು. ಗ್ರೀಕ ಮತ್ತು ಪೌರ್ವಾತ್ಯ ಪದ್ಧತಿಯ ಕಂಬಗಳು, ರೋಮನ್ ಮತ್ತು ಗಾಥಿಕ್ ಕಮಾನು-ಗಳು, ಪೌರ್ವಾತ್ಯ ಪದ್ಧತಿಯ ಶಿಖರಗಳು, ಮೂರ್ ಜನರ ಕುಸುರಿನ ಮತ್ತು ಬಣ್ಣದ ಕೆಲಸ ಇವುಗಳ ಅಪೂರ್ವ ಸಂಯೋಗವು ಈ ಕಾಲದ ಕಟ್ಟಡದ ಕೆಲಸಗಳಲ್ಲಿ ಆಗಿತ್ತು. ಅವು ಕೇವಲ ಪೌರ್ವಾತ್ಯ, ಕೇವಲ ಗಾಥಿಕ್ ಇಲ್ಲವೆ ಕೇವಲ ಪ್ರಾಚೀನ ಪದ್ಧತಿಯುವಿದ್ದಿಲ್ಲ. ಸಮೃದ್ಧ ಸೌಂದರ್ಯಾವಿಷ್ಕರಣ ಮತ್ತು ಬಹುಪ್ರತಿನಿಧಿತ್ವ ಇವುಗಳು ಈ ಕಲೆಯ ವೈಶಿಷ್ಟ್ಯಗಳಾಗಿದ್ದವು" ಎಂದು ಓರ್ವ ತಜ್ಞನು ಅಭಿ-ಪ್ರಾಯಪಟ್ಟಿರುವನು. ಕ್ರಿಸ್ತೀಕಲೆ ಮತ್ತು ಪೌರ್ವಾತ್ಯಕಲೆ ಇವುಗಳ ಸುಂದರ ಸಮನ್ವಯವು ಈ ಕಲೆಯಲ್ಲಾಗಿತ್ತು.

**ಯುಗದರ್ಪಣ :—** ರಿಬೆಲೆ ಎಂಬ ಫ್ರೆಂಚ, ಸರ್ವ್ಹಾಂಟಿಸ್ ಎಂಬ

ಸ್ಪಾನಿಶ್ ಮತ್ತು ಶೇಕ್ಸ್‌ಪಿಯರ ಎಂಬ ಆಂಗ್ಲ ಹೀಗೆ ಮೂವರು ಈ ಜ್ಞಾನ-ಯುಗದಲ್ಲಿ ಅತ್ಯಂತ ಮಹತ್ವದ ವ್ಯಕ್ತಿಗಳಾಗಿರುವರು. ಮಾಂಟೇನೆಂಬ ಫ್ರೆಂಚ ಲೇಖಕನು ಅತ್ಯಂತ ಲೋಕಪ್ರಿಯನಾಗಿದ್ದನು. "ವ್ಯಕ್ತಿಯು ತನ್ನ ಸಹಜ ಪ್ರವೃತ್ತಿ-ಗನುಸಾರವಾಗಿ ತನ್ನ ವಿಕಾಸವನ್ನು ಹೇಗೆ ಮಾಡಿಕೊಳ್ಳಬೇಕೆಂಬುದನ್ನು ಅರಿತು-ಕೊಳ್ಳುವದೇ ಈ ಜಗತ್ತಿನಲ್ಲಿಯ ಬಹಳ ಮಹತ್ವಪೂರ್ಣ ಸಂಗತಿಯಾಗಿದೆ" ಎಂದು ಆತನು ಅಂದಿರುವನು. ಚಾಸರ ಮತ್ತು ಶೇಕ್ಸ್‌ಪಿಯರ ಇವರಿಗೆ ಇಂಗ್ಲಂಡಿನಲ್ಲಿದ್ದ ಸ್ಥಾನವು ಸ್ಪೇನದಲ್ಲಿ ಸರ್ವಾಂಟಿಸನಿಗಿತ್ತು. "ಅರೇಬಿಯನ್ ಸುರಸ ಕಥೆ"ಗಳಷ್ಟೇ ಲೋಕಪ್ರಿಯತೆಯು ಆತನ 'ಡಾನ ಕ್ವಿಕ್ಸೋಟ' ಕಥೆಗೆ ದೊರೆಯಿತು. ಜ್ಞಾನಯುಗವು ಜಗತ್ತಿನ ವಾಙ್ಮಯಕ್ಕೆ ಕೊಟ್ಟ ಅಮೌಲ್ಯ ಕಾಣಿಕೆಯೆಂದು 'ಡಾನ್ ಕ್ವಿಕ್ಸೋಟ' ಕಥೆಯನ್ನು ಬಣ್ಣಿಸಿದುದು ಯಥಾಯೋಗ್ಯವಾಗಿದೆ.

## ಅವತರಣಿಕೆ

೧. ರೋಜರ ಬೇಕನ್ ಎಂಬ ಯುರೋಪೀಯ ಶಾಸ್ತ್ರಜ್ಞನು ಸುಮಾರ ಆರೂವರೆ ನೂರು ವರ್ಷಗಳ ಹಿಂದೆ ಆಗಿಹೋದನು. ಆ ಕಾಲದಲ್ಲಿ ಆತನ ವೈಜ್ಞಾನಿಕ ದೃಷ್ಟಿಯು ಎಷ್ಟು ದೂರದ ವರೆಗೆ ಹರಿದಿತ್ತೆಂಬ ಸಂಗತಿಯು ಕೆಳಗೆ ಕೊಡಲಾದ ಆತನ ಒಂದು ಲೇಖದಿಂದ ಕಂಡುಬರುತ್ತದೆ.

"ಹುಟ್ಟುಗಳಿಲ್ಲದೆ ಯಂತ್ರದ ಸಹಾಯದಿಂದ ಹಡಗುಗಳನ್ನು ನಡೆಸುವದು ಶಕ್ಯವಿದೆ. ಆದರಿಂದ ದೊಡ್ಡ ದೊಡ್ಡ ನದಿಗಳಲ್ಲಿಯೂ ಸಮುದ್ರಗಳಲ್ಲಿಯೂ ಒಬ್ಬ ಮನುಷ್ಯನ ನಿಯಂತ್ರಣದಿಂದಲೇ ನಡೆಸಬಲ್ಲ ಹಾಗು ಬಹಳ ವೇಗವುಳ್ಳ ನೌಕೆ-ಗಳನ್ನು ಕಟ್ಟಬಹುದು. ಹಾಗೆಯೆ ಜನಾವರಗಳನ್ನು ಹೂಡದೆ ನಡೆಸಬಲ್ಲ ವಾಹನಗಳನ್ನು ಸಿದ್ಧಪಡಿಸಬಹುದು.

"ಪಕ್ಷಿಗಳು ತಮ್ಮ ಪಕ್ಕಗಳ ಸಹಾಯದಿಂದ ಹವೆಯಲ್ಲಿ ಹಾರಾಡುವಂತೆ ಕೃತ್ರಿಮ ಪಕ್ಕಗಳ ಸಹಾಯದಿಂದ ಒಬ್ಬ ಮನುಷ್ಯನ ನಿಯಂತ್ರಣದಿಂದಲೇ ಹಾರಾ-ಡುವ ಆಕಾಶಯಾನಗಳನ್ನು ಸಿದ್ಧಗೊಳಿಸಬಹುದು."

## ಅಭ್ಯಾಸ

**೧. ೧೫ ನೆಯ ಶತಕದ ಕೊನೆಗೆ ಯುರೋಪದ ಸಾಂಸ್ಕೃತಿಕ ಜೀವನದಲ್ಲಿ ಕ್ರಾಂತಿ-ಯನ್ನುಂಟು ಮಾಡಿದ ಸಂಗತಿಗಳು ಯಾವವು?**

**೨. (ಅ) ದಾಂತೆ, (ಆ) ಪಿತ್ರಾರ್ಕ (ಇ) ಚಾಸರ, (ಈ) ರೋಜರ ಬೇಕನ್ ಇವರಲ್ಲಿ ಪ್ರತಿಯೊಬ್ಬರ ಕಾರ್ಯಗಳನ್ನು ಕುರಿತು ಎರಡು ಮೂರು ಸಾಲುಗಳಲ್ಲಿ ಟಿಪ್ಪಣಿ ಬರೆಯಿರಿ.**

**೩. ಗಾಥಿಕ್ ಶಿಲ್ಪದ ವೈಶಿಷ್ಟ್ಯಗಳನ್ನು ಹೇಳಿರಿ.**

**೪. ರೋಜರ ಬೇಕನ್‌ನ ವೈಜ್ಞಾನಿಕ ದೃಷ್ಟಿಯು ಎಷ್ಟು ದೂರಗಾಮಿಯಾಗಿದ್ದಿತೆಂಬುದರ ಎರಡು ಉದಾಹರಣೆಗಳನ್ನು ಕೊಡಿರಿ.**

## ೧೦ ನೆಯ ಪಾಠ

# ಯುರೋಪದಲ್ಲಿಯ ಧಾರ್ಮಿಕ ಕ್ರಾಂತಿ

**ಪ್ರಾರಂಭ :**—ಇಲ್ಲಿಯ ವರೆಗೆ ಯುರೋಪದಲ್ಲಿಯ ಸಾಂಸ್ಕೃತಿಕ ಕ್ರಾಂತಿಯ ತಿಳಿವಳಿಕೆಯನ್ನು ನೀವು ಮಾಡಿಕೊಂಡಿರಿ. ಈ ಸಾಂಸ್ಕೃತಿಕ ಪ್ರಗತಿಯಿಂದಲೇ ಧಾರ್ಮಿಕ ಸುಧಾರಣೆಗಳ ತೆರೆಗಳು ಯುರೋಪದಲ್ಲಿ ಹಬ್ಬಿದವು. ಜ್ಞಾನಯುಗದಲ್ಲಿಯ ಲೇಖಕರ ವಿಚಾರಗಳು ಪಸರಿಸಿದಂತೆ ಜನರ ಲಕ್ಷ್ಯವು ಪರಮಾರ್ಥ ಚಿಂತನದಿಂದ ಐಹಿಕ ಪ್ರಗತಿಯ ಕಡೆಗೆ ಹೊರಳಿತು. ಆ ಕಾಲದಲ್ಲಿಯೆ ಹೊಸ ದೇಶಗಳು ಶೋಧಿಸಲ್ಪಟ್ಟು ಐಹಿಕ ಉತ್ಕರ್ಷದ ಹೊಸ ಕ್ಷೇತ್ರಗಳು ತೆರವಾದವು. ಹೊಸ ಜ್ಞಾನದ ಮೂಲಕ ಜನರು ಶ್ರದ್ಧೆಗಿಂತಲೂ ಬುದ್ಧಿ ಪ್ರಾಮಾಣ್ಯವನ್ನು ಹೆಚ್ಚು ಅವಲಂಬಿಸತೊಡಗಿದರು. ಸೃಷ್ಟಿಯ ಉತ್ಪತ್ತಿಯ ಬಗೆಗೆ ಬಾಯಬಲ್ಲಿನಲ್ಲಿ ಕೊಡಲಾದ ಕಥೆಗೂ ಸಾಹಸಿ ಸಂಶೋಧಕರು ಕಂಡು ಹಿಡಿದ ಭೌಗೋಲಿಕ ಶೋಧಕ್ಕೂ ಮಹದಂತರವಿರುವದನ್ನು ನೋಡಿ ಜನರ ಮನಸ್ಸಿನಲ್ಲಿ ಶಂಕೆಗಳು ಹುಟ್ಟಿದವು. ಗ್ರೀಕ ಗ್ರಂಥಗಳ ಅಭ್ಯಾಸದ ಮೂಲಕ ವಿದ್ವಾಂಸರು ಮೂಲ ಬೈಬಲ್ಲನ್ನು* ಚಿಕಿತ್ಸಕ ಪದ್ಧತಿಯಿಂದ ಅಭ್ಯಾಸ ಮಾಡತೊಡಗಿದರು. ಈ ದೃಷ್ಟಿಯು ಅವರಿಗೆ ಗ್ರೀಕ ಗ್ರಂಥಗಳ ವಾಚನದಿಂದ ದೊರೆಯಿತು. ಯೇಸೂಕ್ರಿಸ್ತನ ಉದಾತ್ತ ಉಪದೇಶ ಹಾಗು ಆ ಕಾಲದ ಧರ್ಮಗುರುಗಳ ಆಚರಣ ಇವುಗಳಲ್ಲಿ ಮಹದಂತರವುಂಟೆಂಬ ಸಂಗತಿಯು ಈ ಚಿಕಿತ್ಸಕ ಅಭ್ಯಾಸಿಗಳಿಗೆ ಗೊತ್ತಾಯ್ತು. ಒಬ್ಬ ಹಳ್ಳಿಯ ಪುರೋಹಿತನಿಂದ ಮೊದಲ್ಮಾಡಿಕೊಂಡು ನೇರವಾಗಿ ಪೋಪನ ವರೆಗೆ ಎಲ್ಲ ಧರ್ಮಗುರುಗಳೂ ಮಹತ್ವಾಕಾಂಕ್ಷಿಗಳೂ, ವಿಲಾಸಿಗಳೂ ಆಗಿದ್ದರು. ರಾಜ್ಯದ ಪ್ರಮುಖರು (ರಾಜರು) ಮತ್ತು ಧರ್ಮದ ಪ್ರಮುಖರು (ಪೋಪ) ಇವರಲ್ಲಿ ಅಧಿಕಾರ ಹಾಗೂ ಶ್ರೇಷ್ಠತ್ವಗಳ ಬಗೆಗೆ ಜಗಳವಾರಂಭವಾಯಿತು. ಆದರಿಂದ ಅವರಲ್ಲಿ ಯಾರಿಗೆ ನಿಷ್ಠರಾಗಿರಬೇಕೆಂಬ ಮಹತ್ವದ ಪ್ರಶ್ನೆಯು ಜನತೆಯ ಮುಂದೆ ಧುತ್ತೆಂದು ನಿಂತುಬಿಟ್ಟಿತು. ಒಂದೇ ಕಾಲಕ್ಕೆ ಇಬ್ಬರಿಗೂ ನಿಷ್ಠರಾಗಿರುವದು ಅವ್ಯವಹಾರ್ಯವಾಗಿತ್ತು. ರಾಜನ ಬಗೆಗೆ ಹಾಗೆ ನಿಷ್ಠೆಯನ್ನು ತೋರಿದರೆ ಧರ್ಮಗುರುವಿಗೆ ಸಿಟ್ಟು ಬರುತ್ತಿತ್ತು. ಹಾಗೆಯೇ ಧರ್ಮಗುರುವಿನ ಮಾತನ್ನು ಕೇಳಿದರೆ ಅರಸನ ಕೋಪಕ್ಕೆ ಆಹುತಿಯಾಗಬೇಕಾಗಿತ್ತು. ಹೀಗೆ ಇಕ್ಕಟ್ಟಿನಲ್ಲಿ ಜನತೆಯು ಸಿಕ್ಕು ಬಿದ್ದಿತು.

ಪೋಪನು ಇಟಾಲಿಯನ್ನನಾಗಿದ್ದನು. ಆದರಿಂದ ಅವನ ಪ್ರಭುತ್ವವೆಂದರೆ ಪರಕೀಯ ಪ್ರಭುತ್ವವೆಂದು ಜರ್ಮನ್, ಆಂಗ್ಲ ಹಾಗು ಇತರರಿಗೆ ಅನಿಸತೊಡಗಿತು.

---

* ಮೂಲ ಬಾಯಬಲ್ಲವು ಅರೇಮೋಯಿಕ್ (ಹಿಬ್ರೂ) ಭಾಷೆಯಲ್ಲಿತ್ತು. ಅದು ಗ್ರೀಕ ಭಾಷೆಯಲ್ಲಿ ಮೊದಲು ಪ್ರಚಾರದಲ್ಲಿ ಬಂತು.

ಪೋಪನನ್ನು ಪರಕೀಯನೆಂದೆಣಿಸುವಲ್ಲಿ ಸ್ವದೇಶಾಭಿಮಾನದ ಭಾವನೆಯು ಆದರಡಿಯಲ್ಲಿ ಇತ್ತು. ಈ ವಿಚಾರಮಂಥನದಿಂದ ಧರ್ಮಸುಧಾರಣೆಯ ಚಳವಳಿಯು ನಿರ್ಮಿತವಾಯ್ತು. ೧೫ ನೆಯ ಮತ್ತು ೧೬ ನೆಯ ಶತಮಾನಗಳಲ್ಲಿ ಕ್ರಿಸ್ತಿ ಧರ್ಮಾನುಯಾಯಿಗಳ ಧಾರ್ಮಿಕ ಜೀವನವನ್ನು ಸುಧಾರಿಸುವ ಪ್ರಯತ್ನವು ಈ ಚಳವಳಿಯಲ್ಲಿತ್ತು. "ರೋಮನ್ ಕ್ಯಾಥೋಲಿಕ ಚರ್ಚ" (ರೋಮದ ಪೋಪನು ಪ್ರಮುಖನಾಗಿದ್ದ ಧರ್ಮಪೀಠ)ದ ಅಧಿಕಾರಿ ಹಾಗು ಆ ಚರ್ಚದ ಧರ್ಮಗುರುಗಳ ದುರಾಚಾರ ಇವುಗಳನ್ನು ಖಂಡತುಂಡವಾಗಿ ನಿಷೇಧಿಸುವ ಧರ್ಮ ಸುಧಾರಕರು ಮುಂದೆ ಬಂದರು. ಅವರೇ ಪ್ರೊಟೆಸ್ಟಂಟರು. ಮಾರ್ಟಿನ್ ಲ್ಯೂಥರನೆಂಬ ಜರ್ಮನ್ ಸುಧಾರಕನು ಈ ಚಳವಳಿಯ ಮುಂದಾಳಾಗಿದ್ದನು. ಆತನಿಗಿಂತ ಮುಂಚೆಯೂ ಕೆಲ ಧರ್ಮ ಸುಧಾರಣಾವಾದಿ ವ್ಯಕ್ತಿಗಳೂ ಆಗಿ ಹೋದರು. ಅವರ ವಿಷಯಕವಾದ ತಿಳಿವಳಿಕೆಯೂ ಉದ್ಬೋಧಕವಾಗಿದೆ.

**ಮುಂಚಿನ ಸುಧಾರಕರು :—** ಧರ್ಮಸುಧಾರಣೆಯ ಕ್ಷಿತಿಜದ ಮೇಲಿನ ಅರುಣೋದಯದ ಆಗಮನವು ಜಾನ್ ವಿಕ್ಲಿಫ (ಇ. ಸ. ೧೩೨೦–೮೩)ನೆಂಬ ಆಂಗ್ಲ ವಿಚಾರವಂತನಿಂದಲೇ ಆರಂಭವಾಯ್ತು. ಅವನು ಆಕ್ಸಫರ್ಡದಲ್ಲಿ ಶಿಕ್ಷಕನಾಗಿದ್ದನು. ಇ. ಸ. ೧೩೬೬ ರಲ್ಲಿ ಆರನೆಯ ಅರ್ಬನ್ ಎಂಬ ಹೆಸರಿನ ಪೋಪನು ಇಂಗ್ಲಂಡದ ಕಡೆಯಿಂದ ಧಾರ್ಮಿಕ ಕಂದಾಯವನ್ನು ಬೇಡಿದನು. ಈ ಬೇಡಿಕೆಯ ವಿರುದ್ಧ ಚಳವಳಿಯನ್ನು ಮಾಡುವಲ್ಲಿ ಮುಂದಾಳಾಗಿದ್ದ ವಿಕ್ಲಿಫನು ಪರಕೀಯ ಪೋಪನ ಧಾರ್ಮಿಕ ಅಧಿಕಾರದ ವಿರುದ್ಧ ಬಂಡನ್ನು ಸಾರಿದನು. ಹಾಗೆಯೇ ಧರ್ಮಗುರುಗಳ ಅಧಾರ್ಮಿಕ ಆಚರಣದ ಮೇಲೆಯೂ ತನ್ನ ಬಾರುಕೋಲನ್ನು ಸೆಳೆದನು. ಆತನ ಅನುಯಾಯಿಗಳಿಗೆ ಲೋಲರ್ಡ (ಅಂದರೆ ಆಲಸಿಗರು) ಎಂಬ ಹೆಸರನ್ನು ಸನಾತನಿ ಕ್ರಿಸ್ತಿಗಳು ಕೊಟ್ಟು ಅವರ ಉಪಹಾಸವನ್ನು ಮಾಡಿದರು. ಲೋಲರ್ಡ್ಸ್ ಅನುಯಾಯಿಗಳಿಗೆ ಪೋಪನು ಧರ್ಮ ಬಹಿಷ್ಕಾರ ಹಾಕಿದನು. ಬೈಬಲ್ಲನ್ನು ಆಂಗ್ಲ ಭಾಷೆಗೆ ಭಾಷಾಂತರಿಸುವ ಮಹಾಕಾರ್ಯವನ್ನು ವಿಕ್ಲಿಫನು ಮಾಡಿದನು. ಅದರಿಂದ ಆತನಿಗೆ "ಆಂಗ್ಲ ಗದ್ಯದ ಜನಕ"ನೆಂಬ ಸಾರ್ಥ ಪದವಿಯು ದೊರೆಯಿತು. ಬೇರೆ ದೇಶಗಳಲ್ಲಿಯ ಧರ್ಮಸುಧಾರಕರಿಗೂ ವಿಕ್ಲಿಫನ ಚಳವಳಿಯಿಂದ ಸ್ಫೂರ್ತಿಯು ದೊರೆಯಿತು.

ಬೋಹೀಮಿಯಾ (ಜೆಕೋಸ್ಲೊವಾಕಿಯಾ)ದ ಜಾನ್ ಹಸ್ (ಇ ಸ. ೧೩೬೬–೧೪೧೫) ನಿಗೆ ವಿಕ್ಲಿಫನ ಕಾರ್ಯದ ಬಗೆಗೆ ಬಹಳ ಆದರಬುದ್ಧಿಯುಂಟಾಯ್ತು. ಜಾನ್ ಹಸ್ಸನು ವಿದ್ವಾಂಸನಾದ ಪ್ರಾಧ್ಯಾಪಕನಾಗಿದ್ದು ಧರ್ಮಗುರುವೂ ಆಗಿದ್ದನು. "ಪರಮೇಶ್ವರನ ಪ್ರಾರ್ಥನೆಯನ್ನು ನಾವು ನಮ್ಮ ತಾಯ್ನುಡಿಯಲ್ಲಿಯೇ ಮಾಡಬೇಕು" ಎಂದು ಆತನು ಅನ್ನುತ್ತಿದ್ದನು. ಸನಾತನಿ ಧರ್ಮಗುರುಗಳ ವಿಲಾಸಿ ಜೀವನದ ಮೇಲೆ ಅವನು ಟೀಕೆಯ ಸುರಿಮಳೆಯನ್ನೇ ಕರೆದನು. "ಎಷ್ಟೋ ಜನ ಧರ್ಮಗುರುಗಳನ್ನು ದುರ್ಗುಣಗಳ ಪುತ್ಥಳಿಗಳೆಂದು ತೋರಿಸಬಹುದು. ಅವರಲ್ಲಿ ಅನೇಕರು

ದೊಡ್ಡ ದೊಡ್ಡ ಆಸ್ತಿ ಪಾಸ್ತಿಗಳನ್ನು ಮಾಡಿಕೊಂಡಿರುವರು. ಬಡಬಗ್ಗರ ಕಡೆಯಿಂದ ಕರಗಳ ರೂಪದಿಂದ ಹಣವನ್ನು ಎತ್ತಿ ತಮ್ಮ ಸುಖೋಪಭೋಗವನ್ನು ನಾಗಿಸಿರುವರು" ಎಂದು ಆತನು ಬಹಿರಂಗವಾಗಿ ಅನ್ನುತ್ತಿದ್ದನು. ಹಸ್ಸನ ನಡತೆಯು ಅತ್ಯಂತ ಸಾದಾ ಮತ್ತು ವಿಶುದ್ಧವಾಗಿತ್ತು. ಬಡಬಗ್ಗರ ಸೇವೆಯನ್ನು ಮಾಡುವ ವ್ರತವನ್ನು ಆತನು ಸ್ವೀಕರಿಸಿದ್ದನು. ಆದರೂ ಆತನ ಉಪದೇಶವು ಧರ್ಮ ಪೀಠಕ್ಕೆ ಸಹನವಾಗಲಿಲ್ಲ. ಅವನನ್ನು ಧರ್ಮಬಹಿಷ್ಕೃತ ನನ್ನಾಗಿ ಮಾಡಿದ್ದುದಷ್ಟೇ ಅಲ್ಲದೆ ಪಾಖಂಡಿಯೆಂದು ಅವನನ್ನು ಜೀವಂತ ಸುಟ್ಟುಬಿಡಲಾಯ್ತು.


ಹುತಾತ್ಮ ಹಸ್

**ಇರ್ಯಾಸ್ಮಸ್:—** ( ಇ. ಸ. ೧೪೬೯—೧೫೩೬ ) ನೆಂಬ ಡಚ್ಚನು ಇನ್ನೊಬ್ಬ ಉಲ್ಲೇಖನೀಯ ಧರ್ಮಸುಧಾರಕನಾಗಿ ಹೋದನು. ಹಸ್ಸನಂತೆ ಅವನೂ ಬಹಳ ವಿದ್ವಾಂಸನೂ ವಿಶುದ್ಧಾಚರಣಿಯೂ ಆದ ಸನ್ಯಾಸಿಯಾಗಿದ್ದನು. ಫ್ರಾನ್ಸ್, ಇಂಗ್ಲಂಡ, ಇಟಲಿ ಮತ್ತು ಜರ್ಮನಿ ದೇಶಗಳಲ್ಲಿ ಅವನು ನಂಚಾರ ಮಾಡಿದನು. ಆ ಎಲ್ಲ ದೇಶಗಳಲ್ಲಿಯ ಧರ್ಮಗುರುಗಳ ನಡತೆಯು ಬಹಳ ಕೆಟ್ಟದ್ದನ್ನು ಕಂಡು ಆತನ ಮನಸ್ಸಿಗೆ ಬಹಳ ನೋವಾಯ್ತು. ಆದರೆ ಆತನು ಬಹಳ ಜಾಣನಾಗಿದ್ದುದ ರಿಂದ ಧರ್ಮಪೀಠದ ರೋಷಕ್ಕೆ ತುತ್ತಾಗಲಿಲ್ಲ. ಆಂತರಿಕ ಶುದ್ಧಿಯ ಆವಶ್ಯಕತೆ ಯನ್ನೇ ಒತ್ತಿ ಹೇಳುತ್ತ ಆತನು ನಿರ್ದಾಕ್ಷಿಣ್ಯದಿಂದ ಟೀಕೆಯನ್ನು ಮಾಡುತ್ತಿದ್ದನು. ಅವನು ಒಬ್ಬ ವ್ಯಾಜೋಕ್ತಿಕುಶಲ ಲೇಖಕನಾಗಿದ್ದನಲ್ಲದೆ ಕೋಟಿಕ್ರಮದಲ್ಲಿ ಅತ್ಯಂತ ಪ್ರವೀಣನಾಗಿದ್ದನು "ಮೂರ್ಖ ಪ್ರಶಸ್ತಿ" ("ಇನ್ ಪ್ರೇಜ ಆಫ ಫಾಲ್ಲಿ") ಎಂಬ ಗ್ರಂಥದಲ್ಲಿ ಅವನು ದುರಾಚಾರಿಗಳೂ ಬುದ್ಧಿಹೀನರೂ ಆದ ಧರ್ಮಗುರುಗಳ ಉಪಹಾಸವನ್ನು ಮನನೋಕ್ತವಾಗಿ ಮಾಡಿದನು. ಪಾಖಂಡಿ ಎಂದು ಧರ್ಮಬಹಿಷ್ಕೃತನಾಗದಿದ್ದರೂ "ಲ್ಯೂಥರನ ಕ್ರೋಧಕ್ಕಿಂತ ಇರ್ಯಾಸ್ಮಸನ ವಿಡಂಬಕ ಚೇಷ್ಟೆಯಿಂದ ಪೋಪನಿಗೆ ಹೆಚ್ಚು ಬಲವಾದ ಪೆಟ್ಟು" ಬಿದ್ದಿತೆಂದು ಜನರು ಅನ್ನುತ್ತಿದ್ದರು.

**ಮಾರ್ಟಿನ್ ಲ್ಯೂಥರ್ :—** ( ಇ. ಸ. ೧೪೮೩—೧೫೪೬ ) ಇವನ ಜನ್ಮವು ಜರ್ಮನಿಯಲ್ಲಿಯ ಸ್ಯಾಕ್ಸನಿ ಪ್ರಾಂತದಲ್ಲಿ ೧೪೮೩ರಲ್ಲಿ ಆಯ್ತು. ಆತನ ತಂದೆಯು ಕಣಿಯಲ್ಲಿ ಕೆಲಸ ಮಾಡುವ ಒಬ್ಬ ಕೆಲಸಗಾರನಾಗಿದ್ದನು. ಆದರಿಂದ ತಂದೆಯು ಕಡೆಯಿಂದ ಬಲವಾದ ದೇಹಯಷ್ಟಿಯ ದಾಯವು ಆತನಿಗೆ ದೊರೆತಿದ್ದಿತು. ಕೆಲಸ ಗಾರನ ಮಗನಾಗಿದ್ದರೂ ವಿಶ್ವವಿದ್ಯಾಲಯದಲ್ಲಿ ಪ್ರವೇಶವನ್ನು ದೊರಕಿಸಿ ಇ. ಸ. ೧೫೦೫ರಲ್ಲಿ ಎರಫರ್ಟದಲ್ಲಿ ಎಂ. ಎ. ಪದವಿಯನ್ನು ಸಂಪಾದಿಸಿದನು. ಆ ವರ್ಷವೇ ಒಂದು ಮಠದಲ್ಲಿ ಪ್ರವೇಶ ದೊರಕಿಸಿ ಎರಡು ವರ್ಷಗಳ ನಂತರ ಧರ್ಮಗುರುವಿನ ದೀಕ್ಷೆಯನ್ನು ಪಡೆದನು. ವಿಟೆನ್‌ಬರ್ಗ ವಿದ್ಯಾಪೀಠದಲ್ಲಿ ಅವನು ಪ್ರಾಧ್ಯಾಪಕನ

ಕೆಲಸವನ್ನು ಮಾಡುತ್ತಿದ್ದನು. ಪೋಪನ ಪ್ರತಿನಿಧಿಗಳು ' ಇಂಡಲ್ಜನ್ಸೆಸ್ ' ಎಂಬ ಪಾಪಮುಕ್ತತೆಯ ಪಾಸುಗಳನ್ನು ಜರ್ಮನಿಯಲ್ಲಿ ಬಂದು ಮಾರಹತ್ತಿದೊಡನೆ ಮಾತ್ರ ಲ್ಯೂಥರನ ಕೋಪವು ಸಿಡಿದೆದ್ದಿತು.



ಮಾರ್ಟಿನ್ ಲ್ಯೂಥರ

ಪೋಪನು ಹೊರಡಿಸಿದ ಈ ' ಇಂಡಲ್ಜನ್ಸೆಸ್ ' ಪಾಸುಗಳನ್ನು ಕೊಂಡರೆ ಪಾಪಮುಕ್ತರಾಗಿ ಸ್ವರ್ಗವನ್ನು ಪಡೆಯಬಹುದೆಂಬ ಅಂಧ ಶ್ರದ್ಧೆಯಿಂದ ಜನರು ಪಾಪಮುಕ್ತತೆಯ ಪಾಸುಗಳನ್ನು ಕೊಂಡುಕೊಳ್ಳುತ್ತಿದ್ದರು. ರೋಮುದಲ್ಲಿಯ ಸಂತಪೀಟರನ ಮಂದಿರದ ಜೀರ್ಣೋದ್ಧಾರಕ್ಕಾಗಿ ಈ ಪಾಸುಗಳ ಮಾರಾಟದಿಂದ ಬಂದ ಹಣದ ವಿನಿಯೋಗವಾಗತಕ್ಕದ್ದಿತ್ತು. ಧರ್ಮಗುರುಗಳು ಜನತೆಯ ಅಂಧಶ್ರದ್ಧೆಯ ಲಾಭವನ್ನು ಹೀಗೆ ಮಾಡಿಕೊಳ್ಳುವದನ್ನು ಲ್ಯೂಥರನು ಪ್ರಕಟವಾಗಿ ನಿಷೇಧಿಸಿದನು. ಧರ್ಮಗುರುಗಳ ದುರ್ವರ್ತನೆಯ ಮೇಲೂ ಆತನು ಬಾರುಕೋಲನ್ನು ಎತ್ತಿದನು.

ರೋಮುದ ಯಾತ್ರೆಯನ್ನು ಅವನು ಮಾಡಿದನು. ಆಗ ಅಲ್ಲಿ ಕಂಡ ಧರ್ಮದ ಅವನತಿ ಮತ್ತು ಧರ್ಮಗುರುಗಳ ದುರಾಚಾರ ಇವುಗಳಿಂದ ಆತನು ಬಹಳ ಖಿನ್ನನಾದನು. ಇ. ಸ. ೧೫೧೫ರಲ್ಲಿ ಅವನು ತನ್ನ ಪ್ರಸಿದ್ಧ " ೯೫ ನಿಬಂಧಗಳು " ಎಂಬ ಪುಸ್ತಕವನ್ನು ಪ್ರಸಿದ್ಧಿಸಿದನು. ಅದರಲ್ಲಿ ಸನಾತನಿ ಕ್ರಿಶ್ಚನ್ನರನ್ನು ಬಲವಾಗಿ ಟೀಕಿಸಿದನು. " ನಾವೆಲ್ಲರೂ ಧರ್ಮಗುರುಗಳಾಗಿರುವೆವು. ಪ್ರತಿಯೊಬ್ಬ ಮನುಷ್ಯನಿಗೆ ಬೈಬಲ್ಲಿನ ಉಪದೇಶದ ಪ್ರಕಾರ ದುಃಖವಿಮೋಚನದ ಮಾರ್ಗವು ತೆರವಿದೆ " ಎಂದು ಅವನು ಬಹಿರಂಗವಾಗಿ ಹೇಳಿದನು. ಆದರ ಪರಿಣಾಮವಾಗಿ ಹೆಸ್ಸನಂತೆ ಲ್ಯೂಥರನೂ ಧರ್ಮಬಹಿಷ್ಕಾರಕ್ಕೆ ಗುರಿಯಾದನು. ಆತನ ಅನುಯಾಯಿಗಳು ಪೋಪನ ಬಹಿಷ್ಕಾರಪತ್ರಗಳನ್ನು ಬಹಿರಂಗವಾಗಿ ಸುಟ್ಟರಲ್ಲದೆ ಲ್ಯೂಥರನೂ ಅವುಗಳನ್ನು ಸುಟ್ಟು ತನ್ನ ನಿಷೇಧವನ್ನು ವ್ಯಕ್ತಪಡಿಸಿದನು. ಈ ಪ್ರಕಾರ " ಪ್ರೊಟೆಸ್ಟಂಟ " ಪಂಥವು ಜರ್ಮನಿಯಲ್ಲಿ ಉದಯವಾಯಿತು. ಧರ್ಮಪೀಠಗಳು ಲ್ಯೂಥರನ ಬರವಣಿಗೆಗಳನ್ನೆಲ್ಲ ತುಂಬು ಬೀದಿಯಲ್ಲಿ ಸುಟ್ಟರು. ಆದರೂ ಅದರಿಂದ ನಿರುತ್ಸಾಹಿತನಾಗದೆ ಲ್ಯೂಥರನು ತನ್ನ ದಾಳಿಯನ್ನು ಹಾಗೆಯೆ ಸಾಗಿಸಿದನು. " ಯೇಸುವು ತನ್ನ ಅಮೌಲ್ಯ ರಕ್ತವನ್ನು ಚೆಲ್ಲಿ ಬಡವಬಲ್ಲಿದರೆಲ್ಲರಿಗೂ ಸಮಾನವಾದ ಮುಕ್ತಿಮಾರ್ಗವನ್ನು ತೋರಿಸಿರುವನು " ಎಂದು ಆತನು ಅನ್ನುತ್ತಿದ್ದನು.

ಇ. ಸ. ೧೫೨೧ರಲ್ಲಿ ಅವನು 'ಹೊಸ ಒಡಂಬಡಿಕೆ' (ನ್ಯೂ ಟೆಸ್ಟಾಮೆಂಟ)ಯ ಭಾಷಾಂತರವನ್ನು ಜರ್ಮನ್ ಭಾಷೆಯಲ್ಲಿ ಮಾಡಿದನು. (ಮುಂದೆ ೧೫೩೪ ರಲ್ಲಿ 'ಹಳೆಯ ಒಡಂಬಡಿಕೆ'ಯ ಭಾಷಾಂತರವನ್ನು ಜರ್ಮನ್‌ಭಾಷೆಯಲ್ಲಿ ಮಾಡಿದನು.) ಪಾಖಂಡಿಯೆಂದು ಆತನ ವಿಚಾರಣೆಯಾಯಿತು. ಆದರೂ ಹಸ್ಸನಂತೆ ಅವನಿಗೆ ದೇಹಾಂತ ಶಾಸನವು ಮಾತ್ರ ಆಗಲಿಲ್ಲ. ಆತನ ಅನುಯಾಯಿಗಳು ಆತನನ್ನು ಯಾವಾಗಲೂ ಬೆಂಬಲಿಸಿದರು. ಒಮ್ಮೆಯಂತೂ ಅವನ ಅನುಯಾಯಿಗಳು ಬಂಡೆದ್ದು ಅತ್ಯಾಚಾರವನ್ನು ಆರಂಭಿಸಿದರು. ಆಗ ಮ. ಗಾಂಧಿಯವರಂತೆ ಲ್ಯೂಥರನು ಹಿಂಸೆಯನ್ನು ನಿಷೇಧಿಸಿದನು. "ಅತ್ಯಾಚಾರದ ಮಾರ್ಗವನ್ನು ಬಿಡಿರಿ. ಇಂದಿನಿಂದ ಪೋಪನಿಂದಲೂ ರಾಜಸತ್ತೆಯಿಂದಲೂ ನನ್ನ ಕೂದಲೆಳೆಗೂ ಧಕ್ಕೆಯಾಗಿಲ್ಲ; ಇದರ ರಹಸ್ಯವೆಲ್ಲಿದೆಯೆಂದು ನಾನು ನಿಮಗೆ ಕೇಳುತ್ತೇನೆ. ನಾನು ನನ್ನ ಖಡ್ಗವನ್ನು ಎಂದೂ ಒರೆಗಾಣಿಸಿಲ್ಲ...." ಎಂದು ಅವನು ತನ್ನ ಅನುಯಾಯಿಗಳನ್ನು ಕುರಿತು ಹೇಳಿದನು. ಇ. ಸ. ೧೫೪೬ ರಲ್ಲಿ ಆಯಿಲ್‌ಬರ್ಗದಲ್ಲಿಆತನು ಮರಣ ಹೊಂದಿದನು.

**ಬೇರೆ ಪ್ರೊಟೆಸ್ಟಂಟ ಧರ್ಮಸುಧಾರಕರು :—** ಜರ್ಮನಿಯಲ್ಲಿಯ ಪ್ರೊಟೆಸ್ಟಂಟ ಮತದ ಚಳವಳಿಯು ಒಂದು ಬಗೆಯಿಂದ ರೋಮದ ವಿರುದ್ಧ ಜರ್ಮನ್ನರ ಬಂಡೇ ಆಗಿತ್ತು. ರೋಮನ್ ಕೆಥೋಲಿಕ್ ಚರ್ಚದ ಉಗ್ರವಾದ ಬಂಧನಗಳ ವಿರುದ್ಧ ವ್ಯಕ್ತಿ ಸ್ವಾತಂತ್ರ್ಯವಾದಿ ಜನರು ಕ್ರಾಂತಿಧ್ವಜವನ್ನೇ ಎತ್ತಿ ಹಿಡಿದಿದ್ದರು. ಪಶ್ಚಿಮ ಯುರೋಪದಲ್ಲಿ ಈ ಕ್ರಾಂತಿಯ ಮನೋವೃತ್ತಿಯು ಅನೇಕ ಕಡೆಗಳಲ್ಲಿ ವ್ಯಕ್ತವಾಯಿತು. ಸ್ಥಾನಿಕ ಕಾರಣಗಳು ಬೇರೆಯಿದ್ದರೂ ಕೊನೆಯಲ್ಲಿ ಪೋಪನ ಅಧಿಕಾರದ ವಿರುದ್ಧವೇ ಎಲ್ಲರ ಗುರಿಯಿತ್ತು. ಪಾಪಮುಕ್ತತೆಯ ಪಾಸುಗಳನ್ನು ಹೊರಡಿಸಿದ್ದರಿಂದ ಜರ್ಮನಿಯಲ್ಲಿ ಲ್ಯೂಥರನು ಬಂಡೆಬ್ಬಿಸಿದ್ದನು. ಆದರೆ ಇಂಗ್ಲಂಡದಲ್ಲಿ ರಾಜನೇ ಸ್ವತಃ ಪೋಪನ ವರ್ಚಸ್ಸನ್ನು ಹಾರಿ ಹೊಡೆದನು. ಆ ಕಾಲದ ಇಂಗ್ಲಂಡದ ಅರಸನಾದ ಎಂಟನೆಯ ಹೆನ್ರಿಯು "ರಾಜನೇ ಧರ್ಮಕ್ಕೆ ಪ್ರಮುಖನಾಗಿರುವನು" ಎಂಬ ಕಾಯದೆಯನ್ನು ಪಾರ್ಲಿಮೆಂಟಿನ ಕಡೆಯಿಂದ ಮಾಡಿಸಿಕೊಂಡನು. ಇದರಿಂದ ಇಂಗ್ಲಂಡದ ಮೇಲಿನ ಪೋಪನ ಧಾರ್ಮಿಕ ಪ್ರಭುತ್ವವು ಸಂಪುಷ್ಟಕ್ಕೆ ಬಂದು ರಾಜನೇ ಐಹಿಕ ಜೀವನ ಮತ್ತು ಧರ್ಮಗಳ ಪ್ರಮುಖನಾದನು. ಜರ್ಮನಿಯ ಹೊರಗೆ ಆದ ಧರ್ಮಸುಧಾರಕರಲ್ಲಿ ಮೂವರು ಪ್ರಸಿದ್ಧರಾಗಿರುವರು. ಸ್ವಿತ್ಸರ್ಲಂಡದಲ್ಲಿಯ ಝ್ವಿಂಗಲಿ (ಇ. ಸ. ೧೪೮೪–೧೫೩೧), ಫ್ರಾನ್ಸದ ಕಾಲ್ವಿನ್ (ಇ. ಸ. ೧೫೦೯–೬೪.) ಸ್ಕಾಟಲಂಡದಲ್ಲಿಯ ಜಾನ್ ನಾಕ್ಸ (೧೫೦೫–೭೨). ಝ್ವಿಂಗಲಿಯು ಝೂರಿಚದಲ್ಲಿ ಇರುತ್ತಿದ್ದನು. ಅವನು ಸನ್ಯಾಸಿ (ಮಂಕ) ಯಾಗಿದ್ದನಲ್ಲದೆ ದೊಡ್ಡ ಪಂಡಿತನೂ ಆಗಿದ್ದನು. "ಈ ಭಾಗದಲ್ಲಿ ಲ್ಯೂಥರನ ಹೆಸರು ಕೂಡ ಯಾರ ಕಿವಿಯ ಮೇಲೂ ಬೀಳದಿದ್ದ ಕಾಲದಿಂದಲೂ (ಇ. ಸ. ೧೫೧೬ ರಿಂದ) ನಾನು ಯೇಸುವಿನ ಸಂದೇಶವನ್ನು ಹರಡುವ ಕಾರ್ಯವನ್ನು ಕೈಕೊಂಡಿದ್ದೇನೆ" ಎಂದು ಅವನು ಬರೆದಿರುವನು.

ಕಾಲ್ವಿನ್ನನು ಹುಟ್ಟು ಫ್ರೆಂಚನಾಗಿದ್ದನು. ಆದರೆ ನಿರ್ವಾಸಿತನಾಗಿ ಸ್ವಿತ್ಸರ್ಲಂಡದಲ್ಲಿ ಇರುತ್ತಿದ್ದನು ಮತ್ತು ಅಲ್ಲಿಯೆ ಅವನು ಮರಣ ಹೊಂದಿದನು. ಕಾಯದೆಯ ಅಭ್ಯಾಸವನ್ನು ಮಾಡಿಯೂ ಧರ್ಮಸುಧಾರಕನ ಕೆಲಸವನ್ನು ಸ್ವಯಂಪ್ರೇರಣೆಯಿಂದ ಕೈಕೊಂಡನು. ಜಿನೆವ್ಹಾ ಅವನ ಕಾರ್ಯದ ಕೇಂದ್ರ ವಾಗಿತ್ತು. ಅಲ್ಪಾವಧಿಯಲ್ಲಿಯೆ ಜಿನೆವ್ಹಾ, ರೋಮುವನ್ನು ನರಿಗಟ್ಟುವ ಕೇಂದ್ರ ವಾಯಿತು. ಕಾಲ್ವಿನ್ನನು "ಪ್ರಾಟೆ-ಸ್ಟಂಟರ ಪೋಪ"ನಾದನು. "ಆಕಾಶದಲ್ಲಿಯ ಪ್ರೇಮಲ ಪಿತ"ನೆಂದು ಪರಮೇಶ್ವರನ ಬಗೆಗೆ ಯೇಸೂ ಕ್ರಿಸ್ತನ ಕಲ್ಪನೆಯಿತ್ತು. ಆದರೆ 'ಹಳೆಯ ಒಡಂಬಡಿಕೆ'ಯಲ್ಲಿಯ 'ಜೆಹೋವ್ಹಾ' ಭಯಪ್ರದನಾಗಿದ್ದನು. ಈಶ್ವರನ ವಿಷಯಕವಾದ ಕಾಲ್ವಿನ್ನನ ಕಲ್ಪನೆಯು 'ಜೇ-ಹೋವ್ಹಾ'ನಂತೆಯೆ ಇತ್ತು. ಈಶ್ವರ ವಿಷಯಕವಾದ ಭಕ್ತಿಗಿಂತಲೂ ಭಯಕ್ಕೇ ಅವನು ಪ್ರಾಧಾನ್ಯಕೊಟ್ಟಿದ್ದನು. ಜೀವನದಲ್ಲಿಯ ಸರಲತೆಯ ಬಗೆಗೆ ಆತನ ಕಟಾಕ್ಷವು ವಿಶೇಷ ವಾಗಿತ್ತು. (ಈ ಅರ್ಥದಿಂದ ಅವನು 'ಪ್ಯುರಿಟನ್'ನಾಗಿದ್ದನು.) ಹಾಗೆಯೆ ಸ್ಪಾರ್ಟನ್ ಜನರಂತೆ ಅವನು ಉಗ್ರ ಓರಣಿಗನಾಗಿದ್ದನು.


ಕಾಲ್ವಿನ್

"ಜನ್ಮತಃ ಎಲ್ಲ ಮನುಷ್ಯರೂ ಒಂದೇ ತೆರನಾಗಿರುವದಿಲ್ಲ. ಕೆಲವರ ಹಣೆ ಬರೆಹದಲ್ಲಿ ಶಾಶ್ವತ ಜೀವಿತವಿದ್ದರೆ ಬೇರೆ ಕೆಲವರು ನಿರಂತರ ಪತಿತರಾಗಿರುವರು. ಇದರಲ್ಲಿ ನಮ್ಮ ದೈವದಲ್ಲಿ ಏನಿದೆಯೆಂಬ ಕಲ್ಪನೆಯು ನಮಗಿರುವದಿಲ್ಲ. ಆದುದರಿಂದ ನಾವು ಈಶ್ವರಪ್ರಣೀತ ಮಾರ್ಗದ ಅಂಚನ್ನೇ ಹಿಡಿದು ಶಾಶ್ವತ ಜೀವಿತದ ಪ್ರಾಪ್ತಿಯನ್ನು ಮಾಡಿಕೊಳ್ಳಲು ಪ್ರಯತ್ನಿಸಬೇಕು" ಎಂದು ಆತನ ಉಪದೇಶದ ಸಾರವಾಗಿತ್ತು. ಸ್ಕಾಟಲಂಡದಲ್ಲಿಯ ಪ್ರೆಸ್ಬಿಟೇರಿಯನ್, ಫ್ರಾನ್ಸದಲ್ಲಿಯ ಹ್ಯೂಗೇನಾಟ್ಸ್, ಇಂಗ್ಲಂಡದಲ್ಲಿಯ ಪ್ಯುರಿಟನ್ ಇವರಿಗೆ ಕಾಲ್ವಿನ್ನನ ಉಪದೇಶದಿಂದ ಮತ್ತು ಉದಾಹರಣೆಯಿಂದ ಸ್ಫೂರ್ತಿಯು ದೊರೆಯಿತು. ಈ ಎಲ್ಲ ಪಂಥಗಳಲ್ಲಿ ಕಡುತರವಾದ ನೈತಿಕ ಆಚರಣೆಗೆ ಮಹತ್ವವನ್ನು ಕೊಡಲಾಗಿದೆ. ಈಶ್ವರನು ದೊಡ್ಡ ಓರಣದ ಭೋಕ್ತೃವೆಂದು ಅವರು ಭಾವಿಸುವರು. ಸಾದಾ ಜೀವನ ಮತ್ತು ಧರ್ಮನಿಷ್ಠ ಆಚ

ರಣೆ ಮತ್ತು ನೈತಿಕ ಶುಚಿತ್ವ ಇವುಗಳ ಉಪದೇಶದ ಜೊತೆಗೆ ಅವರು ಮಿತವ್ಯಯ ಮತ್ತು ಉದ್ಯೋಗಶೀಲತೆಗಳನ್ನು ಒತ್ತಿ ಹೇಳಿ ತಮ್ಮ ತಮ್ಮ ದೇಶಗಳ ಆರ್ಥಿಕ ಹಾಗು ನೈತಿಕ ಪ್ರಗತಿಗೆ ಉತ್ತೇಜನವಿತ್ತರು.

**ಧರ್ಮಸುಧಾರಕರಿಗಾದ ವಿರೋಧ:—** ಪ್ರೊಟೆಸ್ಟಂಟ ಪಂಥದ ಉದಯವಾದಂದಿನಿಂದ ಯುರೋಪದಲ್ಲಿ ಅಲ್ಲಲ್ಲಿ ಧರ್ಮಚ್ಛಲ, ಪಾಖಂಡಿಗಳನ್ನು ಜೀವಂತ ದಹಿಸುವದು ಮತ್ತು ದೀರ್ಘಕಾಲದ ಧರ್ಮಯುದ್ಧಗಳು ಸಂಭವಿಸಿದವು. ಇ. ಸ. ೧೬೪೮ರಲ್ಲಿ ಕೊನೆಗೊಂಡ ಮೂವತ್ತು ವರ್ಷಗಳ ಯುದ್ಧವು ಇವುಗಳಲ್ಲಿ ಕೊನೆಯದೇ ಸರಿ.

ಪರಮೇಶ್ವರನ ಹೆಸರಿನಲ್ಲಿ ಪ್ರದರ್ಶಿಸಲಾದ ಕ್ರೌರ್ಯದ ಹಾಗೂ ರಕ್ತಪಾತದ ಕಥೆಯು ಅತಿ ದುಃಖದಾಯಕವಾಗಿದೆ. ಅದರ ವಿವರವಾದ ವಿಚಾರವನ್ನು ನಾವಿಲ್ಲಿ ಮಾಡುವದಿಲ್ಲ. ಇದೇ ಕಾಲದ ಭಾರತದ ಇತಿಹಾಸವನ್ನು ನೋಡಿದರೆ ಮಹದಂತರವು ಕಂಡುಬರುತ್ತದೆ. ನಾನಕ ಮತ್ತು ಕಬೀರರಂತಹ ಧರ್ಮಪ್ರಚಾರಕರು ಮತ್ತು ಅಕಬರ ಶಿವಾಜಿಯವರಂತಹ ರಾಜರು ಧಾರ್ಮಿಕ ಔದಾರ್ಯದ ನಿದರ್ಶನವನ್ನು ಕೊಡುತ್ತಿದ್ದರು. ಭಾರತದಲ್ಲಿ ಆ ಕಾಲವು ಧಾರ್ಮಿಕ ಸಹಿಷ್ಣುತೆಯ ಯುಗವಾಗಿತ್ತು.

ಧರ್ಮಸುಧಾರಣೆಯ ಚಳವಳಿಯನ್ನು ಬಗ್ಗುಬಡಿಯಲು ರೋಮನ್ ಕೆಥೊಲಿಕ್ ಧರ್ಮಪೀಠಗಳು ಭಗೀರಥಪ್ರಯತ್ನವನ್ನು ಮಾಡಿದವು. ( ಆ ಪ್ರಯತ್ನಗಳಿಗೆ ಆಂಗ್ಲಭಾಷೆಯಲ್ಲಿ ' ಕೌಂಟರ್ ರೆಫರ್ಮೇಶನ್ ' ಎಂದು ಹೆಸರುಂಟು ). ಅವುಗಳಲ್ಲಿ ' ಇಂಕ್ವಿಜಿಶನ್ ' ವಿಚಾರಣೆಯ ರೀತಿಯು ವಿಶೇಷವಾಗಿ ಹಬ್ಬಿತು. ಪಾಖಂಡಿಜನರ ಅವಸರ ವಿಚಾರಣೆಯನ್ನು ಮಾಡುವ ನ್ಯಾಯಾಲಯಗಳಿಗೇ 'ಇಂಕ್ವಿಜಶನ್' ಎಂದೆನ್ನುತ್ತಿದ್ದರು. ಈ ನ್ಯಾಯಾಲಯಗಳು ಪಾಖಂಡಿ ಜನರನ್ನೂ ಪಾಖಂಡಿ ವಾಙ್ಮಯವನ್ನೂ ಸುಟ್ಟು ಬಿಡುವ ಘೋರ ಶಿಕ್ಷೆಯನ್ನು ವಿಧಿಸುತ್ತಿದ್ದವು. ಅಲ್ಲದೆ ಧರ್ಮಬಹಿಷ್ಕೃತರನ್ನು ಸುಡುವದು, ಧರ್ಮಸುಧಾರಣಾವಾದಿ ವಾಙ್ಮಯವನ್ನು ಆಕ್ಷೇಪಾರ್ಹವೆಂದು ನಿರ್ಣಯಿಸುವದು ಇವೇ ಮೊದಲಾದವುಗಳು ಶಾಸನಪ್ರಕಾರಗಳಾಗಿದ್ದವು.

ತದ್ವಿರುದ್ಧ ರೋಮನ್ ಕೆಥೊಲಿಕ್ ಧರ್ಮಪೀಠಗಳು ತಮ್ಮ ಅಂತರ್ಗತ ವ್ಯವಸ್ಥೆಯನ್ನು ಸುಧಾರಿಸಲು ಪ್ರಯತ್ನ ಮಾಡಿದವು. ಪ್ರೊಟೆಸ್ಟಂಟರು ಎತ್ತಿ ತೋರಿಸಿದ ದೋಷಗಳನ್ನು ತಿದ್ದಿಕೊಂಡು ಧರ್ಮವ್ಯವಸ್ಥೆಯನ್ನು ಸಂಪೂರ್ಣವಾಗಿ ಶುದ್ಧೀಕರಿಸುವ ಕಾರ್ಯವನ್ನು ಆರಂಭಿಸಿದ್ದವು. ಲೋಯೋಲಾದಲ್ಲಿಯ ಸಂತ ಇಗ್ನೇಶಿಯಸ್ ( ಇ. ಸ. ೧೪೯೧–೧೫೫೬ )ನು ' ಸೊಸೈಟಿ ಆಫ್ ಜೀಸಸ್ ' ಅಥವಾ ಯೇಸುವಿನ ಸಂಘಟನೆಯೆಂಬ ಸಂಸ್ಥೆಯನ್ನು ಆರಂಭಿಸಿದನು. ಆತ್ಮಶುದ್ಧಿಯ ಈ ಕಾರ್ಯಕ್ಕೆ ಈ ಸಂಸ್ಥೆಯು ತನ್ನನ್ನು ವಹಿಸಿಕೊಂಡಿತು. ' ಪರಮೇಶ್ವರನ ಹೆಚ್ಚಿನ ಪ್ರತಾಪಕ್ಕಾಗಿ ' ಎಂಬ ಅರ್ಥದ ಧ್ಯೇಯವಾಕ್ಯವನ್ನು ಈ ಸಂಸ್ಥೆಯು ತನ್ನ

ಮುಂದಿಟ್ಟುಕೊಂಡಿತ್ತು. ಈಗಾದರೂ ಇಟ್ಟುಕೊಂಡಿದೆ.

ಸನ್ಯಾಸಿಯಾಗುವ ಮುನ್ನ ಇಗ್ನೇಶಿಯಸ್‌ನು ಸ್ಪೇನದಲ್ಲಿಯ ಒಬ್ಬ ಸರದಾರ-ನಾಗಿದ್ದನು. ಯುದ್ಧಭೂಮಿಯಲ್ಲಿ ಗಾಯಾಳುವಾಗಿ ಆತನು ರುಗ್ಣಾಲಯದಲ್ಲಿ ಸೇರಿದರು. ರುಗ್ಣಾವಸ್ಥೆಯಲ್ಲಿರುವಾಗ ಯೇಸುವಿನ ಕಾರ್ಯವನ್ನು ವಹಿಸಿಕೊಳ್ಳಬೇಕೆಂಬ ಪ್ರೇರಣೆಯು ಅವನಿಗಾಯಿತು. ಸಂತಪಾಲನಂತೆ ಅವನಿಗೂ ಈಶಸೇವೆಯ ಉತ್ಸಾಹದ ಉಕ್ಕು ಏರಿತು. ಉಗ್ರವಾದ ಉಪವಾಸ-ವನವಾಸ, ಧ್ಯಾನ ಧಾರಣೆಗಳಲ್ಲಿ ಗೌತಮಬುದ್ಧನಂತೆ ಕೆಲಕಾಲವನ್ನು ಕಳೆದನು. ಬಳಿಕ ಅವನು ಜೇರೂಸಲೇಮು ಮತ್ತು ರೋಮು ಈ ಪವಿತ್ರ ಸ್ಥಳಗಳ ಯಾತ್ರೆಯನ್ನು ಮಾಡಿದನು. ಮೂರನೆಯ ಪಾಲನೆಂಬ ಪೋಪನು ಇಗ್ನೇಶಿಯಸನಿಂದ ಸ್ಥಾಪಿತವಾಗಿದ್ದ ಸಂಘ-ಟನೆಗೆ ತನ್ನ ಆಶೀರ್ವಾದಗಳನ್ನಿತ್ತನು. ಭಾರತದಲ್ಲಿಯ ರಾಮಕೃಷ್ಣ ಮಠದ ಸನ್ಯಾಸಿಗಳಂತೆ ಇಗ್ನೇಶಿಯಸನ ಅನುಯಾಯಿಗಳು (ಅವರಿಗೆ 'ಜೇಸೂಯಿಟ್ಸ್' ಎಂಬ ಹೆಸರಿದೆ) ಸಮಸ್ತ ಜಗತ್ತಿನ ತುಂಬ ಸಂಚಾರ ಮಾಡಿ ಭೂತದಯೆಯ ಕಾರ್ಯವನ್ನು ಮಾಡುತ್ತಿರುವರು. ನಿಷ್ಠಾವಂತ ಧರ್ಮಪ್ರಚಾರಕರೆಂದೂ ವಿದ್ವಾಂಸರಾದ ಶಿಕ್ಷಕರೆಂದೂ ಅವರು ಹೆಸರಾಗಿರುವರು.



ಇಗ್ನೈಶಸ್ ಲೋಯೋಲಾ

## ಅವತರಣಿಕೆ

ಪಾಖಂಡಿ (ನಾಸ್ತಿಕ) ಯೆಂದು ಮಾರ್ಟಿನ್ ಲ್ಯೂಥರನನ್ನು ರೋಮನ್ ಕೆಥಾಲಿಕ್ ಸಮ್ರಾಟನಾದ ೫ನೆಯ ಚಾರ್ಲಸನ ಮುಂದೆ ವಿಚಾರಣೆಗಾಗಿ ನಿಲ್ಲಿಸ-ಲಾಯಿತು (ಇ. ಸ. ೧೫೨೧). ಆ ಕಾಲಕ್ಕೆ ಅವನು ಕೊಟ್ಟ ಹೇಳಿಕೆಯ ಕೆಲ ಭಾಗವನ್ನು ಇಲ್ಲಿ ಕೊಡಲಾಗಿದೆ:—

" ಮಹಾರಾಜಾಧಿರಾಜರಿಗೆ ನನ್ನಿಂದ ಅತ್ಯಂತ ಸರಳವಾದ ಸಾದಾ ಉತ್ತರವು ಬೇಕಾಗುವದರಿಂದ ನಾನು ಹೀಗೆ ಸ್ಪಷ್ಟವಾಗಿ ಹೇಳುತ್ತೇನೆ: ಧರ್ಮಗ್ರಂಥಗಳ ಆಧಾರವುಳ್ಳ ನಿಸ್ಸಂದಿಗ್ಧ ಕಾರಣಗಳನ್ನು ತೋರಿಸಿದ ಹೊರತು ನನ್ನ ಸದಸದ್ವಿವೇಕ

ಬುದ್ಧಿಯ ವಿರುದ್ಧ ವರ್ತಿಸಲು ನಾನು ಸಿದ್ಧನಿಲ್ಲ. ಹಾಗೆ ಮಾಡುವದು ನೀಚತನದ ದ್ಯೋತಕವಾಗುವದಲ್ಲದೆ ಘಾತಕವೂ ಆಗಿದೆ."

— ಮಾರ್ಟಿನ್ ಲ್ಯೂ

## ಅಭ್ಯಾಸ

೧. ಯುರೋಪಿಯನ್ ಜನರ ಪರಂಪರಾಗತ ಧರ್ಮಕಲ್ಪನೆಗಳಿಗೆ ಅಘಾತವುಂಟು ಮಾಡುವ ಯಾವ ಸಂಗತಿಗಳು ಜರುಗಿದವು ?

೨. (ಅ) ಜಾನ್ ವಿಕ್ಲಿಫ್ (ಆ) ಜಾನ್ ಹಸ್ (ಇ) ಇರ್ಯಾಸ್ಮಸ್ (ಈ) ಸಂತ ಇಗ್ನೇಶಿಯಸ್ ಇವರ ಕಾರ್ಯದ ಬಗೆಗೆ ಪ್ರತಿಯೊಬ್ಬನ ವಿಷಯವಾಗಿ ನಾಲ್ಕೈದು ವಾಕ್ಯಗಳಲ್ಲಿ ಗೊತ್ತಿದ್ದುದನ್ನು ಬರೆಯಿರಿ.

೩. ಅರ್ಥ ಕೊಡಿರಿ :—
ಲೋಲರ್ಡ್ಸ್, ಪ್ರೊಟೆಸ್ಟಂಟ್, ಇಂಡಲ್ಜನ್ಸೆಸ್, ಇಂಕ್ವಿಝಿಶನ್, ಜೇಸೂಯಿಟ್.

೪. ಮಾರ್ಟಿನ್ ಲ್ಯೂಥರನು ರೋಮುದ ಪೋಪನ ವಿರುದ್ಧ ಯಾಕೆ ಬಂಡುಹೂಡಿದನು? ಅದರ ಪರಿಣಾಮವೇನಾಯಿತು ?

೫. ಜರ್ಮನಿಯ ಹೊರಗೆ ಆದ ಧರ್ಮಸುಧಾರಕರ ಕಾರ್ಯದ ಬಗ್ಗೆ ಸ್ವಲ್ಪದರಲ್ಲಿ ಗೊತ್ತಿದ್ದುದನ್ನು ಹೇಳಿರಿ.

೬. ಧರ್ಮಸುಧಾರಣೆಯ ಚಳವಳಿಯನ್ನು ಬಗ್ಗುಬಡಿಯಲು ರೋಮನ್ ಕೆಥೊಲಿಕ್ ಧರ್ಮಪೀಠಗಳು ಯಾವ ಪ್ರಯತ್ನಗಳನ್ನು ಮಾಡಿದವು ?

## ೧೧ನೆಯ ಪಾಠ

# ಯುರೋಪಿಯನರ ಜಾಗತಿಕ ವಿಕಾಸ

**ಭೌಗೋಲಿಕ ಶೋಧಗಳ ಪರಿಣಾಮ:—** ೧೫ನೆಯ ಮತ್ತು ೧೬ನೆಯ ಶತಕಗಳಲ್ಲಿ ಹೊಸ ವ್ಯಾಪಾರೀಮಾರ್ಗಗಳನ್ನು ಮತ್ತು ಹೊಸ ಪ್ರದೇಶಗಳನ್ನು ಯಾರು ಮತ್ತು ಹೇಗೆ ಶೋಧಿಸಿದರೆಂಬ ಚಿತ್ತಾಕರ್ಷಕ ವೃತ್ತಾಂತವನ್ನು ನಾವು ಓದಿದ್ದೇವೆ. ಈ ಶೋಧದಿಂದ ವ್ಯಾಪಾರಿ ಜಗತ್ತಿನಲ್ಲಿ ದೊಡ್ಡ ಕ್ರಾಂತಿಯಾಯಿತು. ಮಧ್ಯಯುಗದಲ್ಲಿ ವ್ಯಾಪಾರೀ ಸಾಗಾಟವು ಮುಖ್ಯವಾಗಿ ಭೂಮಧ್ಯ ಸಮುದ್ರ, ಉತ್ತರ ಸಮುದ್ರ ಮತ್ತು ಹಿಂದೀ ಮಹಾಸಾಗರ (ಮಸಾಲಿ ನಡುಗಡ್ಡೆಗಳ ಸಮೀಪದ ಭಾಗ) ಇವುಗಳಲ್ಲಿ ಕೇಂದ್ರಿತವಾಗಿದ್ದಿತು. ವಾಸ್ಕೋ-ದ-ಗಾಮಾನ ಪೂರ್ವದ ಕಡೆಯ ಕೇಪದ ಮಾರ್ಗ ಮತ್ತು ಮೆಗೆಲಾನನ ಅಟ್ಲಾಂಟಿಕದೊಳಗಿಂದ ಫ್ಯಾಸಿಫಿಕ್ ಮಹಾಸಾಗರಕ್ಕೆ ಹೋಗುವ ಮಾರ್ಗ ಇವುಗಳ ಶೋಧದಿಂದ ಭೂಮಧ್ಯ ಸಮುದ್ರ ಮತ್ತು ಅದರ ದಂಡೆಯ ಮೇಲಿನ, ಉರ್ಜಿತಾವಸ್ಥೆಯನ್ನು ಹೊಂದಿದ ಅಲೆಕ್ಝಾಂಡ್ರಿಯಾ, ಜಿನೋವಾ, ವ್ಹೆನಿಸ್ ಇತ್ಯಾದಿ ಬಂದರಗಳ ಮಹತ್ವವು ಕಡಿಮೆಯಾಯಿತು. ದಂಡೆಗುಂಟ ಹೋಗುವ ವ್ಯಾಪಾರೀ ಮಾರ್ಗಗಳ ಮಹತ್ವವು ನಷ್ಟವಾಗಿ ಸಮುದ್ರ ಮಾರ್ಗಗಳ ಮಹತ್ವವು ಹೆಚ್ಚಿತು. ಇದರಿಂದ ಲಿಸ್ಬನ್, ಕೆಡಿಝ್, ಸೆವ್ಹಿಲ್, ಅಂಟವರ್ಪ, ಲಂಡನ್ ನಗರಗಳು ಮುಂದಿನ ಕಾಲದಲ್ಲಿ ದೊಡ್ಡ ವ್ಯಾಪಾರಿ ಕೇಂದ್ರಗಳಾದವು ಆಗ್ನೇಯ ಏಶಿಯಾದೊಳಗಿನ ಮಸಾಲೆಯ ಪದಾರ್ಥಗಳ ಅರಬರ ಗುತ್ತಿಗೆಯು ಸಂಪುಷ್ಟಕ್ಕೆ ಬಂದಿತು. ಏಕೆಂದರೆ ಯುರೋಪಿಯನ್ ವ್ಯಾಪಾರಿಗಳು ಕೇಪ್ ಆಫ್ ಗುಡ್ ಹೋಪ್ ಮಾರ್ಗದಿಂದ ಈ ಭಾಗಗಳಿಗೆ ಬಂದುಬಿಟ್ಟರು. ಪೊರ್ತುಗೀಜ ಜನರೇ ಈ ಕಾರ್ಯದಲ್ಲಿ ಮುಂದಾಳ್ತನವನ್ನು ವಹಿಸಿದರು. ಪೂರ್ವದ ಕಡೆಯ ವ್ಯಾಪಾರದಲ್ಲಿ, ಲಾಭರೂಪದಲ್ಲಿ ದೊರಕಿದ ಸಂಪತ್ತಿಯಿಂದ ಮತ್ತು ದಕ್ಷಿಣ ಅಮೇರಿಕೆಯ ವಸಾಹತುಗಳಲ್ಲಿಯ ಲೂಟಿಯಿಂದ ಬಂಗಾರ ಬೆಳ್ಳಿಯಿಂದ ಚನ್ನಾಗಿ ತುಂಬಿದ ಪೋರ್ತುಗೀಜ ಮತ್ತು ಸ್ಪೇನದ ಹಡಗುಗಳು ವರ್ಷವೆಲ್ಲ ಪೋರ್ತುಗಾಲ ಮತ್ತು ಸ್ಪೇನ ದೇಶಗಳಿಗೆ ಬರಹತ್ತಿದವು. ಇದರಿಂದ ಈ ಎರಡು ದೇಶಗಳಲ್ಲಿ ಬಂಗಾರದ ಹೊಗೆಯು ಹಾಯು ಹತ್ತಿತು. ಸ. ೧೫೮೦ರಲ್ಲಿ ಸ್ಪೇನವು ಪೋರ್ತುಗಾಲವನ್ನು ಗೆದ್ದುದರಿಂದ ಈ ಸಂಪತ್ತಿಯ ಒಡೆತನವೆಲ್ಲವೂ ಸ್ಪೇನಕ್ಕೆ ಬಂದಿತ್ತು. ಹೀಗಾಗಿ ಸ್ಪೇನವು ಅತ್ಯಂತ ಧನಾಢ್ಯ ಹಾಗು ಬಲಾಢ್ಯ ರಾಷ್ಟ್ರವಾಯಿತು. ಇದೇ ವೇಳೆಯಲ್ಲಿ ವ್ಯಾಪಾರಿ ಸ್ಪರ್ಧೆ ಮತ್ತು ಧಾರ್ಮಿಕ ಮತಭೇದ ಇವುಗಳ ಮೂಲಕ ಇಂಗ್ಲಂಡವು ಸ್ಪೇನವನ್ನು ದ್ವೇಷಿಸುತ್ತಿತ್ತು ಈ ವೈರದ ಪರಿಣಾಮದ ಬಗ್ಗೆ ನಾವು ವಿಚಾರ ಮಾಡುವವರಿದ್ದೇವೆ. ಯುರೋಪಿಯನರಿಗೆ ಅಮೇರಿಕಾ, ಆಫ್ರಿಕಾ ಇತ್ಯಾದಿ ಅನೇಕ ಅಜ್ಞಾತ ಪ್ರದೇಶಗಳ ತಿಳಿವಳಿಕೆಯು ಈ ಕಾಲದಲ್ಲಿ ಆಯಿತು. ಆದರಂತೆ ಪೂರ್ವದ ಕಡೆಯ

ಲಾಭದಾಯಕ ವ್ಯಾಪಾರವನ್ನು ಹಸ್ತಗತ ಮಾಡಿಕೊಳ್ಳುವ ಮಾರ್ಗವೂ ಮುಕ್ತವಾಯಿತು.

ಈ ಕೆಲಸದಲ್ಲಿ ಪೋರ್ತುಗಾಲ ಮತ್ತು ಸ್ಪೇನ ಇವುಗಳ ಮುಂದಾಳ್ತನವಿದ್ದುದ-ರಿಂದ ಈ ಶೋಧಗಳ ಮತ್ತು ಅದರಿಂದ ಬಂದ ಲಾಭದ ಗುತ್ತಿಗೆಯು ತಮ್ಮದು ಮತ್ತು ಅದು ಯಾವಾಗಲೂ ತಮ್ಮ ಕಡೆಗೇ ಇರಬೇಕೆಂಬ ಮಹತ್ವಾಕಾಂಕ್ಷೆಯನ್ನು ಈ ದೇಶಗಳು ಇಟ್ಟುಕೊಂಡಿದ್ದವು. ಪೋಪನ ಬೆಂಬಲವಿದ್ದುದರಿಂದ ಪೋರ್ತುಗಾಲ ಮತ್ತು ಸ್ಪೇನ ಇವುಗಳ ಅಹಂಕಾರಕ್ಕೆ ಮತ್ತಿಷ್ಟು ಕಳೆಯೇರಿತು. ಆದರೆ ಶೀಘ್ರ ದಲ್ಲಿಯೇ ಈ ರಾಷ್ಟ್ರಗಳಿಗೆ, ಹಾಲಂಡ, ಇಂಗ್ಲಂಡ ಮತ್ತು ಫ್ರಾನ್ಸ ರಾಷ್ಟ್ರಗಳು ಆಹ್ವಾನವನ್ನಿತ್ತವು. ಸ್ಪೇನವು ರೋಮನ್ ಕೆಥೋಲಿಕ್ ಪಂಥದ ರಾಷ್ಟ್ರವಿದ್ದರೆ ಹಾಲಂಡ ಮತ್ತು ಇಂಗ್ಲಂಡ ಇವು ಪ್ರೊಟೆಸ್ಟಂಟ ರಾಷ್ಟ್ರಗಳಾಗಿದ್ದವು. ಹೀಗಾಗಿ ವ್ಯಾಪಾರಿ ಸ್ಪರ್ಧೆಯಲ್ಲಿ ಧಾರ್ಮಿಕ ವೈರಭಾವವು ಕೂಡಿ, ಈ ಯುರೋಪಿಯನ್ ರಾಷ್ಟ್ರಗಳೊಳಗಿನ ಕಲಹಕ್ಕೆ ಮತ್ತಷ್ಟು ಕಳೆಬಂದಿತು. ಸ. ೧೫೦೦ ರಿಂದ ೧೬೦೦ ರ ಶತಕದಲ್ಲಿ ಸ್ಪೇನ ಮತ್ತು ಪೋರ್ತುಗಾಲ ರಾಷ್ಟ್ರಗಳ ಸ್ಥಾನವು ಭದ್ರವಾಗಿ ಉಳಿ-ಯಿತು. ಮುಂದೆ ೧೭ನೆಯ ಶತಕದಲ್ಲಿ ಪೋರ್ತುಗಾಲ ಮತ್ತು ಸ್ಪೇನಗಳನ್ನು ಸೋಲಿಸಿ ಹಾಲಂಡ, ಇಂಗ್ಲಂಡ ಮತ್ತು ಫ್ರಾನ್ಸ ಈ ರಾಷ್ಟ್ರಗಳು ಮುಂದೆ ಬಂದವು. ಮೊದಲು ವ್ಯಾಪಾರ ಮತ್ತು ವಸಾಹತುಗಳ ವಿಷಯವಾಗಿ ಜಗಳಗಳಾಗುತ್ತಿದ್ದವು. ಮುಂದೆ ರಾಜಕೀಯ ಮಹತ್ವಾಕಾಂಕ್ಷೆಯೊಂದು ಕೂಡಿಕೊಂಡಿತು. ಇಲ್ಲಿಯವರೆಗೆ ಯುರೋಪದ ರಾಜರಿಗೆ ಸ್ವರಾಷ್ಟ್ರಸಂರಕ್ಷಣೆಯ ಹೊಣೆಯಷ್ಟೇ ಇತ್ತು. ಆದರೆ ಮುಂದೆ ಈ ಹೊಣೆಯು ಬಹಳ ಹೆಚ್ಚಿತು. ಏಕೆಂದರೆ ಭೌಗೋಲಿಕ ಶೋಧಗಳ ಮೂಲಕ ಹೊಸ ಕ್ಷಿತಿಜಗಳು ಉದಯ ಹೊಂದಿ, ವ್ಯಾಪಾರಿ ವಸಾಹತು ಮತ್ತು ರಾಜಕೀಯ ಸತ್ತೆ ಇವುಗಳ ವಿಸ್ತಾರಕ್ಕೆ ಸಾಕಷ್ಟು ಅವಕಾಶ ದೊರೆಯಿತು. ಇದರಿಂದ ಯುರೋಪೀಯ ರಾಷ್ಟ್ರಗಳಿಗೆ ಆ ಕ್ಷೇತ್ರದಲ್ಲಿ ಹೆಚ್ಚು ಹೆಚ್ಚು ಮಾರ್ಗವನ್ನು ದೊರಕಿಸ ಬೇಕೆಂಬ ಇಚ್ಛೆಯು ಉಂಟಾಯಿತು. ಮಾನವೀ ಇತಿಹಾಸದ ಸಂಕುಚಿತ ಸ್ವರೂಪವು ಬದಲಾಗಿ ಅದಕ್ಕೆ ವಿಶ್ವವ್ಯಾಪಿ ಸ್ವರೂಪವು ಬಂತು.

ಈ ಘಟನೆಯ ವಿವರವನ್ನು ನಾವು ಈ ಪಾಠದಲ್ಲಿ ಮಾಡಿಕೊಳ್ಳುವವರಿದ್ದೇವೆ.

**ಪೋರ್ತುಗೀಜರ ಧೋರಣೆ:—** ಭೌಗೋಲಿಕ ಸಂಶೋಧನೆಗಳಲ್ಲಿಯ ಮುಂದಾಳ್ತನ ಮತ್ತು ಅನುಕೂಲ ಭೌಗೋಲಿಕ ಪರಿಸ್ಥಿತಿ ಇವುಗಳ ಮೂಲಕ ಸ್ಪೇನ ಮತ್ತು ಪೋರ್ತುಗಾಲ ರಾಷ್ಟ್ರಗಳು, ಹೊಸ ಪ್ರದೇಶಗಳಲ್ಲಿ ವಸಾಹತು ಸ್ಥಾಪಿಸುವ-ದರಲ್ಲಿ ಮತ್ತು ವ್ಯಾಪಾರ ವಿಸ್ತಾರದಲ್ಲಿ ಅಗ್ರೇಸರವಾಗಿದ್ದವು. ಆದರೂ ಪೋರ್ತುಗಾಲ ಮತ್ತು ಸ್ಪೇನ ಇವುಗಳ ಧೋರಣೆಗಳು ಭಿನ್ನವಾಗಿದ್ದವು. ಪೋರ್ತುಗಾಲವು ಒಂದು ಸಣ್ಣ ರಾಷ್ಟ್ರವಿದ್ದುದರಿಂದ ಅದರ ಮನುಷ್ಯದಳವು ಮರ್ಯಾದಿತವಿತ್ತು. ಆದ್ದರಿಂದ ಸ್ವದೇಶದ ಹೊರಗೆ ಬಹಳ ರಾಜ್ಯವಿಸ್ತಾರ ಮಾಡುವ ಗೊಂದಲದಲ್ಲಿ ಬೀಳಲಿಲ್ಲ. ದಂಡೆಯ ಮೇಲಿನ ಅನುಕೂಲ ಸ್ಥಳಗಳನ್ನು ಹಿಡಿದುಕೊಂಡು ಅಲ್ಲಿ ತಮ್ಮ ವ್ಯಾಪಾರಿ

ಕೇಂದ್ರಗಳನ್ನು ಸ್ಥಾಪಿಸುವದರಕಡೆಗೆಯೇ ಹೆಚ್ಚು ಮಹತ್ವ ಕೊಟ್ಟರು. ಪೋರ್ತುಗಾಲದ, ಸಮುದ್ರಾಂತರ್ಗತ ಸಾಮ್ರಾಜ್ಯವು ಮುಖ್ಯತಃ ವ್ಯಾಪಾರಿ ಸ್ವರೂಪದ್ದಿತ್ತು. ತದ್ವಿರುದ್ಧವಾಗಿ ಸ್ಪೇನದವರಿಗೆ ವ್ಯಾಪಾರದ ಬಗ್ಗೆ ತಿರಸ್ಕಾರವಿದ್ದಿತು. ಅವರ ಲಕ್ಷ್ಯವೆಲ್ಲ ದಕ್ಷಿಣ ಅಮೇರಿಕೆಯೊಳಗಿನ ಬೆಳ್ಳಿ ಬಂಗಾರದ ಸಂಗ್ರಹದ ಮೇಲೆ ಕೇಂದ್ರಿತವಾಗಿತ್ತು. ಆದುದರಿಂದ ಅವರು ತಮ್ಮ ವಶಕ್ಕೆ ಬಂದ ಪ್ರದೇಶಗಳ ಅಂತರ್ಗತ ಭಾಗದೊಳಗಿನ ಹೆಚ್ಚು ಪ್ರದೇಶಗಳಲ್ಲಿ ಪ್ರವೇಶಿಸಿ ಅಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸುವ ಮತ್ತು ಅಲ್ಲಿಯ ಬೆಳ್ಳಿ ಬಂಗಾರಗಳನ್ನು ಸಂಗ್ರಹಿಸಿ ಸ್ಪೇನಕ್ಕೆ ಕಳಿಸುವ ಕಾರ್ಯಕ್ರಮವನ್ನು ಕೈಕೊಂಡರು.



ಝಾಮೋರಿನನ ದರಬಾರದಲ್ಲಿ ವಾಸ್ಕೋ-ದ-ಗಾಮಾ

**ಪೂರ್ವದ ಕಡೆಯಲ್ಲಿ ಪೋರ್ತುಗೀಜರ ಚಲನವಲನ:—** ವಾಸ್ಕೋ-ದ-ಗಾಮಾನು ಕೇಪವನ್ನು ಶೋಧಿಸಿ ಹಿಂದುಸ್ಥಾನಕ್ಕೆ ಬರಲು ಮಾರ್ಗ ಮಾಡಿ ಕೊಟ್ಟನು. ಆದರೂ ಪೂರ್ವದ ಕಡೆಯಲ್ಲಿ ಪೋರ್ತುಗೀಜರ ಪ್ರಗತಿಯು ತೀವ್ರ ಗತಿಯಿಂದ ಆಗುವದು ಶಕ್ಯವಾಗಲಿಲ್ಲ. ಪೂರ್ವದ ಕಡೆಯ ವ್ಯಾಪಾರವನ್ನು ಅಂಕಿತದಲ್ಲಿಟ್ಟುಕೊಂಡ ಅರಬ ಜನರೊಡನೆ ಪೋರ್ತುಗೀಜರು ಬಹಳ ಹೋರಾಡಬೇಕಾಯಿತು. ತಮ್ಮ ಹಡಗುಪಡೆಯ ಬಲದಿಂದ ಪೋರ್ತುಗೀಜರು ಅರಬರ ಎರಡು ದೊಡ್ಡ ಹಡಗುಪಡೆಗಳನ್ನು ಸೋಲಿಸಿ ಅರಬ ವ್ಯಾಪಾರಿಗಳ ಮಕ್ತೇದಾರಿಯನ್ನು

ನಷ್ಟ ಮಾಡಿದರು. ಅರಬರ ವಶದೊಳಗಿನ, ಆಫ್ರಿಕೆಯ ಪೂರ್ವದಂಡೆಯ ಮೇಲಿನ ಝಂಝೀಬಾರ ಇತ್ಯಾದಿ ಠಾಣೆಗಳನ್ನು ಪೋರ್ತುಗೀಜರು ವಶಪಡಿಸಿಕೊಂಡರು.

ಸ. ೧೪೯೮ ರಲ್ಲಿ ವಾಸ್ಕೋ-ದ-ಗಾಮಾನು ಕಾಲಿಕತ್ತ ಬಂದರಕ್ಕೆ ಬಂದಿಳಿದ ಘಟನೆಯು ಬಹಳ ಮಹತ್ವದ್ದಿದೆ. ಇದರಿಂದ ಯುರೋಪಿಯನ್ ರಾಷ್ಟ್ರಗಳ ವೈರದಲ್ಲಿ ಭಾರತವು ಎಳೆಯಲ್ಪಟ್ಟು ಕೊನೆಗೆ ಭಾರತವನ್ನು ಇಂಗ್ಲಿಷರು ಗೆದ್ದುಕೊಂಡರು. ಕಾಲಿಕತ್ತದ ಹಿಂದು ರಾಜನಾದ ಝಾಮೋರಿನನು, ಗಾಮಾನಿಗೆ ಭಾರತದ ಪರಂಪರೆಗೆ ಒಪ್ಪುವ ಸ್ವಾಗತವನ್ನು ಮಾಡಿದನು ಮಲಬಾರದಲ್ಲಿ ವ್ಯಾಪಾರ ಮಾಡಲು ಪೋರ್ತುಗೀಜರಿಗೆ ಝಾಮೋರಿನನ ಅಡ್ಡಿ ಇದ್ದಿಲ್ಲ. ಆದರೆ ಹಿಂದೀ ಮಹಾಸಾಗರದ ಒಡೆತನವು ತಮ್ಮದೆಂಬ ಪೋರ್ತುಗೀಜ ರಾಷ್ಟ್ರದ ಹಕ್ಕನ್ನು ಝಾಮೊರಿನನು ಒಪ್ಪುತ್ತಿದ್ದಿಲ್ಲ. ಆದ್ದರಿಂದ ಝಾಮೋರಿನ ಮತ್ತು ವಾಸ್ಕೋ-ದ-ಗಾಮಾ ಇವರಲ್ಲಿ ತಿಕ್ಕಾಟವಾಯಿತು. ಆದರಲ್ಲಿ ಗಾಮಾನು ಹಿಂದೆಗೆಯಬೇಕಾಯಿತು. ಹಿಂದೀ ರಾಜ್ಯಗಳೊಳಗಿನ ವೈಮನಸ್ಸು ದೇಶಹಿತಕ್ಕೆ ಹೇಗೆ ಘಾತಕವಾಯಿತೆಂಬುದು ಈ ಪ್ರಸಂಗದಲ್ಲಿ ನೋಡುವಂತಿದೆ. ಕಾಲಿಕತ್ತದ ಝಾಮೋರಿನ ಮತ್ತು ಕೋಚೀನದ ರಾಜ ಇವರಲ್ಲಿ ನೆಟ್ಟಗಿದ್ದಿಲ್ಲ. ಆದ್ದರಿಂದ ಕೋಚೀನದ ಅರಸನು ಗಾಮಾನಿಗೆ ಆಶ್ರಯವನ್ನಿತ್ತನು. ಇದರಿಂದ ಪೋರ್ತುಗೀಜರಿಗೆ ಕೋಚೀನದಲ್ಲಿ ಕಾಲು ಊರಲು ಸಾಧ್ಯವಾಯಿತು. ಸ ೧೫೦೩ ರಲ್ಲಿ ಗಾಮಾನು ಕಾಲಿಕತದ ಮೇಲೆ ಮತ್ತೆ ದಾಳಿ ಮಾಡಿದನು. ಉಭಯ ಪಕ್ಷದಲ್ಲಿ ತುಮುಲವಾದ ನೌಕಾಯುದ್ಧವಾಗಿ ಪೋರ್ತುಗೀಜರ ಸಮುದ್ರ ನೌಕಾದಲದ ಮಾನದಿಂದ ಭಾರತೀಯರ ದಂಡೆಯ ನೌಕಾದಲವು ಸಣ್ಣದಿದೆ ಎಂಬ ಸಂಗತಿಯು ಸಿದ್ಧವಾಯಿತು. ಮರುವರ್ಷವೇ ಗಾಮಾನು ಸ್ವದೇಶದ ದೊಡ್ಡ ಹಡಗುಪಡೆಯನ್ನು ತಂದು ಕಾಲಿಕತ್ತದ ಮೇಲೆ ದೊಡ್ಡ ದಾಳಿ ಮಾಡಿದನು. ಈ ಸಮಯದಲ್ಲಿ ಝಾಮೋರಿನನು ಇಜಿಪ್ತದ ಮತ್ತು ಗುಜರಾತದ ಸುಲ್ತಾನರ ಹಡಗುಪಡೆಗಳ ಸಹಾಯ ಪಡೆದನು. ಏಶಿಯಾದೊಳಗಿನ ರಾಷ್ಟ್ರಗಳು ಯುರೋಪಿಯನ್ನರನ್ನು ಹೊರದೂಡುವ ಪ್ರಯತ್ನ ಮಾಡಿ ನೋಡಿದವು. ಆದರೆ ಅವರ ಸಮ್ಮಿಲಿತ ಸಾಮರ್ಥ್ಯವು ಕಡಿಮೆ ಇದ್ದುದರಿಂದ ಪೋರ್ತುಗೀಜರಿಗೆ ಸೋತರು. ಈ ಘಟನೆಯಿಂದ ಕಲಿತುಕೊಳ್ಳಬೇಕಾಗಿದ್ದ ಪಾಠವನ್ನು ಭಾರತದೊಳಗಿನ ಸತ್ತಾಧೀಶರು ಕಲಿತುಕೊಂಡುದು ಕಂಡುಬರುವದಿಲ್ಲ.

ಇದರ ತರುವಾಯ ಪೋರ್ತುಗೀಜರ ವಿಸ್ತಾರವು ಜೋರಿನಿಂದ ಸಾಗಿತೆಂಬುದರಲ್ಲಿ ಆಶ್ಚರ್ಯವಿಲ್ಲ. ಹಿಂದುಸ್ಥಾನದೊಳಗಿನ ಪೋರ್ತುಗೀಜರ ಮೊದಲನೆಯ ಗವ್ಹರ್ನರನಾದ ಅಲ್ಬುಕರ್ಕನು (೧೫೧೦-೧೬) ಬಹಳ ಮಹತ್ವಾಕಾಂಕ್ಷಿಯಾಗಿದ್ದನು. ಪೂರ್ವ ಭಾಗದೊಳಗಿನ ಮುಸಲ್ಮಾನ ಜನರ ವ್ಯಾಪಾರಿ ಕೇಂದ್ರಗಳನ್ನು ಒಂದೊಂದಾಗಿ ವಶಪಡಿಸಿಕೊಳ್ಳುವ ಉದ್ಯೋಗವನ್ನು ಆತನು ಪ್ರಾರಂಭಿಸಿದನು. ಈ ತುರುಸು ಕೇವಲ ವ್ಯಾಪಾರಿ ಸ್ವರೂಪದ್ದಿದ್ದಿಲ್ಲ. ಧರ್ಮದ ವಿಷಯದಲ್ಲಿಯೂ ಪೋರ್ತುಗೀಜ ಮತ್ತು ಮುಸಲ್ಮಾನರು ಪರಸ್ಪರ ಬದ್ಧ ವೈರಿಗಳಾಗಿದ್ದರು. ಅತ್ತ

ಕಡೆಗೆ ಮೊರಕ್ಕೊ, ಸ್ಪೇನ ಇತ್ಯಾದಿ ಭಾಗಗಳಲ್ಲಿ ಪೋರ್ತುಗೀಜರು ಮುಸಲ್ಮಾನರ ವಿರುದ್ಧ ( ಅವರು 'ಮೂರ್' ಜನರೆಂದು ಅವರಿಗೆ ಕರೆಯುತ್ತಿದ್ದರು. ಮೊರಕ್ಕೊದ ನಿವಾಸಿಗಳು ಎಂಬ ಅರ್ಥದಲ್ಲಿ 'ಮೂರ್' ಎಂಬ ಹೆಸರು ಬಿದ್ದಿತ್ತು.) ಶಸ್ತ್ರವನ್ನು ಎತ್ತಿಯೇ ಇದ್ದರು. ಅದೇ ಧೋರಣೆಯನ್ನು ಪೂರ್ವ ಭಾಗದಲ್ಲಿಯೂ ಅಮಲಿನಲ್ಲಿ ತಂದರು. ಇರಾಣದ ಆಖಾತದ ಮುಖದಂತೆ ಇರುವ ಜರ್ಮುರ್ಝು ಬಂದರವನ್ನು ಮೊದಲನೆಯ ಹೊಡೆತಕ್ಕೆ ಅಲ್ಬು‌ಕರ್ಕನು ವಶಪಡಿಸಿಕೊಂಡನು. ಓರ್ಮುರ್ಝುಕ್ಕೆ ಬಂದಿಳಿದ ಮಾಲನ್ನು ಮುಸಲ್ಮಾನ ವ್ಯಾಪಾರಿಗಳು ಬಸರಾ, ಬಗದಾದ ಮತ್ತು ಏಶಿಯಾಮಾಯನರದವರೆಗೆ ಒಯ್ಯುತ್ತಿದ್ದರು. ಆ ಮೇಲೆ ಅವನು ಏಡನ ಆಖಾತ ದೊಳಗಿನ ಸೊಕೊತ್ರಾ ಬಂದರವನ್ನು ವಶಪಡಿಸಿಕೊಂಡನು. ಅಲ್ಲಿಂದ ಇಜಿಪ್ತ ದೊಳಗೆ ಮಾಲು ಹೋಗುತ್ತಿತ್ತು. ಸ. ೧೫೧೦ರಲ್ಲಿ ಅವನು ಗೋವೆ ಬಂದರವನ್ನು ತೆಗೆದುಕೊಂಡನು. ಈ ಕಾರ್ಯದಲ್ಲಿ ವಿಜಾಪುರದ ಸುಲ್ತಾನ ಮತ್ತು ವಿಜಯ ನಗರದ ಹಿಂದು ಅರಸರು ಇವರೊಳಗಿನ ವೈರವು ಪೊರ್ತುಗಾಲಕ್ಕೆ ಹಿತಕಾರಿ ಯಾಯಿತು. ಗೋವೆಯಲ್ಲಿ ಅಲ್ಬುಕರ್ಕನು ದೊಡ್ಡ ವಸಾಹತನ್ನು ಸ್ಥಾಪಿಸಿ, ಅದನ್ನು ಪೊರ್ತುಗಾಲದ ಪೂರ್ವದ ಕಡೆಯ ಸಮುದ್ರಾಂತರ್ಗತ ಸಾಮ್ರಾಜ್ಯದ ಕೇಂದ್ರವನ್ನಾಗಿ ಮಾಡಿದನು. ಮಸಾಲಿ ನಡುಗಡ್ಡೆಗಳೊಡನೆ ಸಂಬಂಧವನ್ನಿಡುವ ಮುಸಲ್ಮಾನರ ಮಲಕ್ಕಾ ಎಂಬ ಅತಿ ಪೂರ್ವದ ಕಡೆಯ ಬಂದರವನ್ನು ಅಲ್ಬು-ಕರ್ಕನು ಸ. ೧೫೧೫ ರಲ್ಲಿ ತೆಗೆದುಕೊಂಡನು.

ಪೋರ್ತುಗೀಜರು ನಾಲ್ಕೂ ನಿಟ್ಟಿನಲ್ಲಿ ದೃಷ್ಟಿ ಇಟ್ಟಿದ್ದರು. ಸ. ೧೬೦೫ರಲ್ಲಿ ಅವರು ಸಿಲೋನವನ್ನು ಪ್ರವೇಶಿಸಿದರು. ಅಲ್ಲಿಯ ಅರಸನಾದ ವೀರ ಪರಾಕ್ರಮ ಬಾಹುವು ಅವರಿಗೆ ಕೋಲೊಂಬೋದಲ್ಲಿ ಒಂದು ಕಿಲ್ಲೆಯನ್ನು ಮತ್ತು ಕ್ರಿಸ್ತೀಧರ್ಮ ಮಂದಿರವನ್ನು ಕಟ್ಟಲು ಅನುಮತಿಯನ್ನು ಇತ್ತನು. ಈ ರೀತಿ ಚಂಚುಪ್ರವೇಶದ ಲಾಭವನ್ನು ಧೂರ್ತರೀತಿಯಿಂದ ತೆಗೆದುಕೊಂಡು ಮುಂದಿನ ನೂರು ವರ್ಷಗಳಲ್ಲಿ ಪೋರ್ತುಗೀಜರು ಸಿಲೋನದ ಸಮುದ್ರ ದಂಡೆಯ ಪ್ರದೇಶವನ್ನು ವ್ಯಾಪಿಸಿದರು. ಈ ಅವಧಿಯಲ್ಲಿ ಅವರು ಅನೇಕ ಹಿಂದು ಮತ್ತು ಬೌದ್ಧ ಧರ್ಮೀಯರಿಗೆ ಕ್ರಿಸ್ತೀ ರೋಮನ ಕೆಥೊಲಿಕ ಪಂಥದ ದೀಕ್ಷೆಯನ್ನು ಕೊಟ್ಟರು. ಈ ಕಾರಣದಿಂದ ಸಿಂಹಳೀ ಜನರಲ್ಲಿ ಪಿರೇರಾ, ಡಿಸಿಲ್ವಾ, ಫರ್ನಾಂಡೊ ಇತ್ಯಾದಿ ಪೋರ್ತುಗೀಜ ಹೆಸರುಗಳು ಈಗಲೂ ರೂಢಿಯಲ್ಲಿವೆ. ಅತಿ ಪೂರ್ವದ ಕಡೆಗೆ ಪ್ರವಾಸ ಮಾಡಿ ಮಸಾಲೆಯ ನಡುಗಡ್ಡೆ ಗಳನ್ನು ವಶಪಡಿಸಿಕೊಂಡು ಪೋರ್ತುಗೀಜರು ಅಲ್ಲಿಯೂ ಕೋಟೆಕೊತ್ತಳ ಗಳನ್ನು ಮತ್ತು ವ್ಯಾಪಾರಿ ಕೇಂದ್ರಗಳನ್ನು ಸ್ಥಾಪಿಸಿದರು. ಕೊನೆಗೆ ಚೀನದೊಳಗಿನ ಮಕಾವ ಎಂಬಲ್ಲಿ (ಕ್ಯಾಂಟನ್ ನದಿಯ ಮುಖದ ಹತ್ತಿರ) ಪೋರ್ತುಗೀಜರು ವಸಾ ಹತನ್ನು ಸ್ಥಾಪಿಸಿದರು. ಜಪಾನದಲ್ಲಿ ಪ್ರವೇಶ ಮಾಡಿದ ಮೊದಲನೆಯ ಯುರೋಪಿ ಯನರೂ ಪೋರ್ತುಗೀಜರೇ ಆಗಿದ್ದರು.

ಈ ರೀತಿಯಾಗಿ ಒಂದು ಶತಕದ ಅವಧಿಯಲ್ಲಿ ಪೋರ್ತುಗೀಜರು ಹಿಂದೀ

ಮಹಾಸಾಗರದ ಮೇಲಿನ ತಮ್ಮ ಒಡೆತನವನ್ನು ಸ್ಥಾಪಿಸಿ ಪೂರ್ವದ ಕಡೆಯ ಮುಸಲ್ಮಾನರ ಕೈಯೊಳಗಿನ ಅತ್ಯಂತ ಲಾಭದಾಯಕವಾದ ವ್ಯಾಪಾರವನ್ನು ತಮ್ಮ ಕೈಯೊಳಗೆ ತೆಗೆದುಕೊಂಡರು. ಇದರ ಶ್ರೇಯದ ಬಹುಭಾಗವು ಮುಂಧೋರಣೆ ಯುಳ್ಳ ಮುತ್ಸದ್ದಿಯಾದ ಅಲ್ಬುಕರ್ಕನಿಗೆ ಸಲ್ಲುತ್ತದೆ. ಅಮೇರಿಕಾ ಖಂಡದಲ್ಲಿ ಕೇವಲ ಬ್ರಾಝಿಲ ದೇಶವೊಂದೇ ಪೋರ್ತುಗೀಜರ ವಶವಾಗಿತ್ತೆಂಬುದನ್ನು ನಾವು ಹಿಂದೆ ನೋಡಿದ್ದೇವೆ. ಮೆಕ್ಸಿಕೋ ಮತ್ತು ಪೇರು ದೇಶಗಳ ಮಾನದಿಂದ ನೋಡಿದರೆ ಬ್ರಾಝಿಲ ದೇಶವು ಬಹಳ ಹಿಂದುಳಿದದ್ದಾಗಿತ್ತು. ಅನೇಕ ಪೋರ್ತುಗೀಜ ಕುಟುಂಬಗಳು ಅಲ್ಲಿ ಹೋಗಿ ನೆಲೆಸಿದವು. ೧೬ನೆಯ ಶತಕದ ಕೊನೆಯ ಭಾಗದಲ್ಲಿ ಬ್ರಾಝಿಲವು ಪೋರ್ತುಗೀಜರ ಒಂದು ಧನಾಢ್ಯ ವಸಾಹತು ಆಯಿತು. ಜೆಸುಯಿಟ ಧರ್ಮಪ್ರಚಾರಕರು ಅಲ್ಲಿಯ ಜನರಿಗೆ ಕ್ರಿಸ್ತೀ ಧರ್ಮದ ದೀಕ್ಷೆ ಕೊಟ್ಟರು. ಇಂದು ಬ್ರಾಝಿಲ ದೇಶವು ಸ್ವತಂತ್ರವಾಗಿದ್ದರೂ, ಅಲ್ಲಿಯ ಜನರ ಭಾಷೆಯು ಪೋರ್ತುಗೀಜ ಇದೆ.

**ಉತ್ತರ ಅಮೇರಿಕೆಯೊಳಗಿನ ಯುರೋಪಿಯನ್ ವಸಾಹತು :—** ಪೋರ್ತುಗಾಲ ಮತ್ತು ಸ್ಪೇನ ಇವು ದಕ್ಷಿಣ ಅಮೇರಿಕೆಯನ್ನು ವ್ಯಾಪಿಸಿದ ಬಳಿಕ ಈ ಹೊಸ ಖಂಡವು ಹಾಲಂಡ, ಫ್ರಾನ್ಸ, ಇಂಗ್ಲಂಡ ಈ ರಾಷ್ಟ್ರಗಳ ಲಕ್ಷ್ಯವನ್ನು ಸೆಳೆಯಿತು. ಸದ್ಯದ ಕಾನಡಾದೊಳಗಿನ ಸೆಂಟ ಲಾರೆನ್ಸ ನದಿಯ ಮುಖದಿಂದ ಮೇಲಕ್ಕೆ ಹೋಗಿ "ದೊಡ್ಡ ಸರೋವರಗಳ ಪ್ರದೇಶ"ವನ್ನು ಶೋಧಿಸಿ ತೆಗೆಯುವ ಸಾಹಸವನ್ನು ಫ್ರೆಂಚರು ಮಾಡಿದರು (ಸ. ೧೫೩೪). ಅಲ್ಲಿಯ ರೆಡ್ ಇಂಡಿಯನ್ ಜನರಿಂದ ಚರ್ಮ ಮತ್ತು ಫರ್ ಇವುಗಳನ್ನು ಕೊಂಡು ಯುರೋಪದಲ್ಲಿ ಮಾರ-ಹತ್ತಿದರು. ಮಿಸಿಸಿಪಿ ಮತ್ತು ಓಹಿಯೊ ನದಿಗಳ ಕೊಳ್ಳಗಳಲ್ಲಿ ಪ್ರದೇಶಗಳನ್ನು ಶೋಧಿಸಿ ಅಲ್ಲಿ ವ್ಯಾಪಾರಿ ಠಾಣೆಗಳನ್ನು ಸ್ಥಾಪಿಸಿದರು (ಸ. ೧೬೦೮). ಅಲ್ಲಿ ಹಡಸನ ನೆಂಬ ಇಂಗ್ಲೀಷನು ಹಡ್ಸನ್ ನದಿಯ ಮತ್ತು ಅದರ ಸುತ್ತಲಿನ ಪ್ರದೇಶದ ಶೋಧ ಮಾಡಿದನು.

೧೭ನೆಯ ಶತಕದಲ್ಲಿ ನಡೆದ ಧರ್ಮಪ್ರಸಾರದ ಚಳವಳಿಯ ಮೂಲಕ ರೋಮನ್ ಕೆಥೊಲಿಕ ಪಂಥೀಯ ಮತ್ತು ಪ್ರೊಟೆಸ್ಟಂಟ ಪಂಥೀಯ ಎಂದು ಯುರೋಪದಲ್ಲಿ ಎರಡು ಬಣಗಳು ಆದವು. ಹೀಗಾಗಿ ಧಾರ್ಮಿಕ ಕಲಹ ಮತ್ತು ಧಾರ್ಮಿಕ ಹಿಂಸೆ ಇವುಗಳಿಗೆ ಅನುವು ದೊರೆಯಿತು. ಪ್ರೊಟೆಸ್ಟಂಟ ಪಂಥವನ್ನು ಸ್ವೀಕರಿಸಿದ ಇಂಗ್ಲಂಡದ ರಾಜನು ಆ ಧರ್ಮವನ್ನು ತನ್ನ ಪ್ರಜೆಗಳ ಮೇಲೆ ಹೇರ-ಹತ್ತಿದನು. ರೋಮನ ಕೆಥೊಲಿಕ ಇಂಗ್ಲೀಷರಂತೆ ವಿರುದ್ಧ ಮತದ ಪ್ರೊಟೆಸ್ಟಂಟ ಪ್ಯುರಿಟನ್ನರನ್ನು ಹಿಂಸಿಸುವದು ಕೂಡ ಇಂಗ್ಲಂಡ, ಫ್ರಾನ್ಸ ಇತ್ಯಾದಿ ರಾಷ್ಟ್ರಗಳಲ್ಲಿ ಪ್ರಾರಂಭವಾಯಿತು. ಈ ಧರ್ಮಹಿಂಸೆಗೆ ಬೇಸತ್ತ ಕೆಲವು ಪ್ಯುರಿಟನ ಜನರು ಉತ್ತರ ಅಮೇರಿಕೆಯ ಮಾರ್ಗವನ್ನು ಹಿಡಿದರು. ಸ. ೧೬೨೦ರಲ್ಲಿ ಇಂಥ ೧೦೨ ಜನರು (ಧರ್ಮಸ್ವಾತಂತ್ರ್ಯಕ್ಕಾಗಿ ಹೊರಬಿದ್ದ ಯಾತ್ರಿಕರು ಎಂಬ ಅರ್ಥದಲ್ಲಿ

ಇವರಿಗೆ 'ಪಿಲ್‌ಗ್ರಿಮ್ ಫಾದರ್ಸ' ಎಂಬ ಹೆಸರು ಬಿದ್ದಿತು) 'ಮೇ ಫ್ಲಾವರ' ಎಂಬ ಹಡಗದಿಂದ ಉತ್ತರ ಅಮೇರಿಕೆಗೆ ಪ್ರಯಾಣ ಬೆಳೆಸಿದರು. ಮೂರು ತಿಂಗಳು ಪ್ರವಾಸ ಮಾಡಿ ಅವರು ಮೆಸೆಚುಸೆಟ್ಸದ ದಂಡೆಯನ್ನು ಸೇರಿದರು. ಅಲ್ಲಿ ಅವರು ಪ್ಲೀಮಥ ಎಂಬ ವಸಾಹತನ್ನು ಸ್ಥಾಪಿಸಿದರು. ಸ್ವಲ್ಪೇ ಸಮಯದಲ್ಲಿ ಆ ವಸಾಹತು ಊರ್ಜಿತ ಸ್ಥಿತಿಗೆ ಏರಿತು. ಈ ಸಂಗತಿಯನ್ನು ಕೇಳಿದ ಮೇಲೆ ಧಾರ್ಮಿಕ ಹಿಂಸೆಗೆ ಬೇಸತ್ತ ಅನೇಕ ಇಂಗ್ಲೀಷರು ಈ ಭಾಗಕ್ಕೆ ಬರಹತ್ತಿದರು. ಬೋಸ್ಟನ ಆಖಾತದ ಸಮೀಪದ ಪ್ರದೇಶದಲ್ಲಿ ಅವರು ತಮ್ಮ ಚಿಕ್ಕ ವಸಾಹತನ್ನು ರಚಿಸಿದರು. ಮೆಸೆಚ್ಯುಸೆಟ್ಸದ ದಕ್ಷಿಣಕ್ಕೆ ಡಚ್ಚರ ನ್ಯೂಅಮ್ಸ್ಟರಡಮ್ ಎಂಬ ವಸಾಹತು ಸ್ಥಾಪಿತವಾಗಿತ್ತು. (ಇಂಗ್ಲೀಷರು ಮುಂದೆ ಅದಕ್ಕೆಯೇ ನ್ಯೂಯಾರ್ಕ' ಎಂದು ಕರೆದರು.) ಇದರ ದಕ್ಷಿಣಕ್ಕೆ ವಿಲ್ಯಮ್ ಪೆನ್ ಎಂಬ ಹೆಸರಿನ ದೊಡ್ಡ ಅಹಿಂಸಾವಾದಿ ಗೃಹಸ್ಥನು ಸ್ಥಾಪಿಸಿದ ವಸಾಹತಕ್ಕೆ ಅದರ ಸಂಸ್ಥಾಪಕನ ಹೆಸರಿನಿಂದ 'ಪೆನ್ ಸಿಲ್ವಾನಿಯಾ' ಎಂಬ ಹೆಸರು ಬಂದಿತು. ಈ ವಸಾಹತುಗಳಲ್ಲಿ ಸಂಪೂರ್ಣವಾದ ಧಾರ್ಮಿಕ ಸ್ವಾತಂತ್ರ್ಯವಿತ್ತು. ಮೂಲ ನಿವಾಸಿಗಳಾದ ಕೆಂಪು ಇಂಡಿಯನ್‌ರನ್ನು ಇಲ್ಲಿ ಬಹಳ ಒಳ್ಳೆಯ ರೀತಿಯಿಂದ ನಡೆಸಿಕೊಳ್ಳಲಾಗುತ್ತಿತ್ತು. ಈ ವಸಾಹತಿನ ಕೆಳಗಡೆಯಲ್ಲಿ ಮೇರಿಲ್ಯಾಂಡ ಎಂಬ ರೋಮನ್ ಕೆಥೋಲಿಕ ಪಂಥದ ಜನರ ವಸಾಹತು ಇದ್ದಿತು. ಇಂಗ್ಲಂಡದಲ್ಲಿ ಹಿಂಸೆಗೆ ಒಳಪಟ್ಟ ರೋಮನ ಕೆಥೊಲಿಕ ಪಂಥದವರೇ ಈ ವಸಾಹತನ್ನು ಸ್ಥಾಪಿಸಿದ್ದರು. ಇದರ ಕೆಳಗಡೆಗೆ, ಸರ ವಾಲ್ಟರ ರ್‍ಯಾಲಿ ಎಂಬ ಪ್ರಸಿದ್ಧ ಇಂಗ್ಲಿಷ ನಾವಿಕ ಪ್ರಮುಖನು ಎಲಿಝಾಬೆಥ ರಾಣಿಯ ಸ್ಮರಣಾರ್ಥ 'ವ್ಹರ್ಜೀನಿಯಾ' ಎಂಬ ವಸಾಹತನ್ನು ಸ್ಥಾಪಿಸಿದ್ದನು (ಸ ೧೫೮೪). ಯುರೋಪಿಯನರು ತಂಬಾಕಿನ ಶೋಧ ಮಾಡಿದುದು ಇದೇ ವಸಾಹತಿನಲ್ಲಿ. ಬಟಾಟೆಯ ಬೀಜಗಳು ಇಲ್ಲಿಂದಲೇ ಯುರೋಪಕ್ಕೆ ಹೋದವು. ವ್ಹರ್ಜೀನಿಯಾದ ದಕ್ಷಿಣಕ್ಕೆ ಫ್ರೆಂಚ ರೋಮನ್ ಕೆಥೊಲಿಕರು ಕೆರೋಲಿನಾ ಎಂಬ ವಸಾಹತನ್ನು ಸ್ಥಾಪಿಸಿದ್ದರು. ಮುಂದೆ ಇದರ ಕೆಳಬದಿಯಲ್ಲಿ ಇಂಗ್ಲಂಡದ ರಾಜನಾದ ೨ನೆಯ ಜಾರ್ಜನ ಹೆಸರಿನಿಂದ 'ಜಾರ್ಜಿಯಾ' ವಸಾಹತನ್ನು ಇಂಗ್ಲೀಷರು ಸ್ಥಾಪಿಸಿದರು. ಈ ವಸಾಹತುಗಳೆಲ್ಲ ಬಹುತರವಾಗಿ ಇಂಗ್ಲೀಷರವೇ ಆಗಿದ್ದವು. ಜಾರ್ಜಿಯಾದ ಕೆಳಗಿನ ಪ್ರದೇಶವನ್ನು ಸ್ಪೇನವು ವ್ಯಾಪಿಸಿತ್ತು. ಮಿಸಿಸಿಪಿಯ ಕೊಳ್ಳದ ಪ್ರದೇಶಗಳಲ್ಲಿ ಫ್ರೆಂಚರ ವಸಾಹತುಗಳು ಸ್ಥಾಪಿಸಲ್ಪಟ್ಟಿದ್ದವೆಂಬದನ್ನು ನಾವು ನೋಡಿದ್ದೇವೆ ಫ್ರಾನ್ಸದ ರಾಜನಾದ ೧೪ ನೆಯ ಲುಯಿಯ ಹೆಸರಿನ ಮೇಲಿಂದ ಈ ವಸಾಹತುಗಳಿಗೆ ಲುಯಿಸಿಯಾನಾ ಎಂಬ ಹೆಸರನ್ನು ಕೊಡಲಾಯಿತು. ಇದರ ಹೊರತಾಗಿ ಓಹಿಯೋನದಿಯ ಕೊಳ್ಳದ


ಮೇ ಫ್ಲಾವರ

ಪ್ರದೇಶವನ್ನೆಲ್ಲ ಫ್ರೆಂಚರೇ ವ್ಯಾಪಿಸಿದರು. ಈ ರೀತಿಯಾಗಿ ಪ್ರೊಟೆಸ್ಟಂಟ ಇಂಗ್ಲಿಷರು ರೋಮನ್ ಕೆಥೊಲಿಕ ಫ್ರೆಂಚರು ಉತ್ತರ ಅಮೇರಿಕೆಯಲ್ಲಿ ತಮ್ಮ ವಸಾಹತುಗಳನ್ನು ಒಂದಕ್ಕೊಂದು ನೆರೆಯಾಗಿ ಸ್ಥಾಪಿಸಿದರು. ಇವರೊಳಗಿನ ಧಾರ್ಮಿಕ ಮತಭೇದಕ್ಕೆ ರಾಜಕೀಯ ವೈರವು ಕೂಡಿಕೊಂಡು ಫ್ರೆಂಚ ಮತ್ತು ಇಂಗ್ಲಿಷ ವಸಾಹತುಕಾರರಲ್ಲಿ ಒಳ್ಳೆಯ ತುರುಸು ಹುಟ್ಟಿತು. ಇಂಗ್ಲಿಷ ವಸಾಹತುಕಾರರು ಪಶ್ಚಿಮದ ಕಡೆಗೆ ಸರಿದು ಫ್ರೆಂಚರ ಪ್ರದೇಶವನ್ನು ವ್ಯಾಪಿಸುವ ಪ್ರಯತ್ನ ನಡೆಸಿದರು. ಬೆಳೆಯುತ್ತಿರುವ ಜನಸಂಖ್ಯೆಗೆ ದಂಡೆಗುಂಟ ಇರುವ ಸಣ್ಣ ಪಟ್ಟಿಯು ಸಾಲದಿದ್ದುದೇ ಇದಕ್ಕೆ ಕಾರಣವು. ಇಂಗ್ಲಿಷರ ಈ ಆಕ್ರಮಣವನ್ನು ಎದುರಿಸಲು ಫ್ರೆಂಚರು ಸೆಂಟ ಲಾರೆನ್ಸ ಮತ್ತು ಓಹಿಯೋ ನದಿಗಳ ಪ್ರದೇಶಗಳಲ್ಲಿ ಅಸಂಖ್ಯವಾದ ಕಿಲ್ಲೆಗಳನ್ನು ಕಟ್ಟಿಸಿದರು. ಆಕ್ರಮಣಕಾರ ಇಂಗ್ಲಿಷರನ್ನು ಹೊರಗೆ ಹಾಕಲು ಫ್ರೆಂಚರು ಭದ್ರವಾದ ಸಿದ್ಧತೆ- ಯನ್ನು ಮಾಡಿದರು.

ಇದೇ ವೇಳೆಗೆ ಹಿಂದುಸ್ಥಾನದಲ್ಲಿಯೂ ಇಂಗ್ಲಿಷ ಮತ್ತು ಫ್ರೆಂಚರ ನಡುವೆ ರಾಜಕೀಯ ವರ್ಚಸ್ಸಿಗಾಗಿ ತುರುಸು ಹುಟ್ಟಿದ್ದಿತು.

ಸ. ೧೭೫೬ ರಲ್ಲಿ ಯುರೋಪದಲ್ಲಿ ಇಂಗ್ಲಿಷ ಮತ್ತು ಫ್ರೆಂಚರ ನಡುವೆ ಸಪ್ತ ವಾರ್ಷಿಕ ಯುದ್ಧವು (೧೭೫೬ ರಿಂದ ೧೭೬೩) ಪ್ರಾರಂಭವಾಗಿ ಅದರ ವಿಸ್ತಾರವು ಒಂದು ಕಡೆಗೆ ಉತ್ತರ ಅಮೇರಿಕೆಯ ವರೆಗೆ, ಇನ್ನೊಂದು ಕಡೆಗೆ ಹಿಂದುಸ್ಥಾನದ ವರೆಗೆ ಹಬ್ಬಿತು. ಸ. ೧೭೬೩ ರಲ್ಲಿ ಪ್ಯಾರಿಸ್‌ದಲ್ಲಿ ಒಡಂಬಡಿಕೆಯಾಗಿ ಈ ಯುದ್ಧವು ಕೊನೆಗೊಂಡುದರ ವಿವರವು ಮುಂದೆ ಬರುವದು.

**ಸ್ಪೇನ ಮತ್ತು ಇಂಗ್ಲಂಡ ಇವುಗಳ ಕಲಹ**:- ಸ. ೧೫೩೦ ರಿಂದ ೧೫೪೧ ರ ಕಾಲಾವಧಿಯಲ್ಲಿ ದಕ್ಷಿಣ ಅಮೇರಿಕೆಯೊಳಗಿನ ಮೆಕ್ಸಿಕೊ, ಪೇರು, ಇಕ್ವೆಡೋರ, ಬೋಲಿವ್ಹಿಯಾ, ಚೀನೀ ದೇಶಗಳನ್ನು ಸ್ಪೇನವು ಗೆದ್ದಿತು. ಅಲ್ಲಿಂದ ಪ್ರತಿ ವರ್ಷ ಬಂಗಾರ, ಬೆಳ್ಳಿಗಳಿಂದ ತುಂಬಿದ ಹಡಗಗಳು ಸ್ಪೇನಕ್ಕೆ ಬರಹತ್ತಿದವು. ಇದನ್ನು ನೋಡಿ ಸ್ಪೇನದ ವಿಷಯಕ್ಕೆ ಮತ್ಸರಪಟ್ಟ ದೇಶವೆಂದರೆ ಇಂಗ್ಲಂಡ. ಇದಲ್ಲದೆ ಅನೇಕ ಕಾರಣಗಳು ಇದರ ಬುಡದಲ್ಲಿ ಇದ್ದವು. ಇಂಗ್ಲಂಡದ ರಾಜನಾದ ೮ ನೆಯ ಹೆನ್ರಿಯು ರೋಮನ್ ಕ್ಯಾಥೋಲಿಕ ಪಂಥದ ಪೋಪನ ವರ್ಚಸ್ಸನ್ನು ತಿರಸ್ಕರಿಸಿ ದ್ದನು. ಆಗ ಪೋಪನು ಇಂಗ್ಲಂಡದ ಅರಸನನ್ನು ಧರ್ಮದಿಂದ ಬಹಿಷ್ಕರಿಸಿದ್ದಲ್ಲದೆ ಅವನನ್ನು ಪದಚ್ಯುತಗೊಳಿಸಲು ಆಜ್ಞೆ ಹೊರಡಿಸಿದ್ದನು. ಆ ಆಜ್ಞೆಯನ್ನು ಕಾರ್ಯ ರೂಪದಲ್ಲಿ ತರಲು ಫ್ರಾನ್ಸದ ರಾಜನು ಸ. ೧೫೪೪ ರಲ್ಲಿ ಇಂಗ್ಲಂಡದ ಮೇಲೆ ಏರಿ ಹೋದನು. ಇಂಗ್ಲಂಡದ ಹಡಗುಪಡೆ ಚಿಕ್ಕದಿದ್ದರೂ ಇಂಗ್ಲಿಷ ನಾವಿಕರು ಕೆಚ್ಚೆದೆಯ ವೀರರಾಗಿದ್ದರು. ಅವರು ಫ್ರೆಂಚ ಹಡಗುಪಡೆಯ ಫಜೀತಿಯನ್ನು ಮಾಡಿದರು. ಹೆನ್ರಿಯ ನಂತರ ೧೫೫೮ ರಲ್ಲಿ ಸುಪ್ರಸಿದ್ಧ ರಾಣಿ ಎಲಿಜಾಬೆಥ್‌ಳು ಇಂಗ್ಲಂಡದ ಪಟ್ಟಕ್ಕೆ ಬಂದಳು. ಅವಳು ಪ್ರೊಟೆಸ್ಟಂಟ ಪಂಥದ ಅಚ್ಚ ಅಭಿಮಾನಿಯಾಗಿದ್ದಳು. ಈ ಸಮಯದಲ್ಲಿ ಸ್ಪೇನ ಮುಂತಾದ ಅಚ್ಚ ರೋಮನ್ ಕ್ಯಾಥೊಲಿಕ ಪಂಥದ ರಾಷ್ಟ್ರ

ಗಳು ಪ್ರೊಟೆಸ್ಟಂಟ ಮತದ ಜನರನ್ನು ಅತಿಯಾಗಿ ಹಿಂಸಿಸಹತ್ತಿದವು. ಇದಕ್ಕೆ ಅನೇಕ ಇಂಗ್ಲಿಷರೂ ಬಲಿಯಾದರು. ರಾಣಿಯು ಸ್ಪೇನದ ಮೇಲೆ ಇದರ ಸೇಡನ್ನು ತೀರಿಸಿಕೊಳ್ಳುವ ಸಂಧಿಯ ದಾರಿಯನ್ನು ಕಾಯುತ್ತಿದ್ದಳು. ಸ್ಪೇನದ ವಿರುದ್ಧವಾಗಿ ವರ್ತಿಸುವದಕ್ಕೆ ಇದಕ್ಕಿಂತಲೂ ಹೆಚ್ಚು ಮಹತ್ವದ ಕಾರಣವೆಂದರೆ ಸ್ಪೇನದ ವೈಭವದ ವಿಷಯವಾಗಿ ಇಂಗ್ಲಂಡಿಗೆ ಅನಿಸುತ್ತಿದ್ದ ಮತ್ಸರವೇ ಆಗಿದೆ. ಸ್ಪೇನದ ಬೆಳೆಯುತ್ತಿರುವ ವ್ಯಾಪಾರ, ವಸಾಹತು ಮತ್ತು ಸಂಪತ್ತು ಇವು ಇಂಗ್ಲಂಡದ ಕಣ್ಣೊಳಗೆ ಚುಚ್ಚುತ್ತಿದ್ದವು. ರಾಣಿಯ ಪ್ರೋತ್ಸಾಹನೆಯಿಂದ ಕೆಲವು ಸಾಹಸಿ ಇಂಗ್ಲೀಷ ನಾವಿಕರು ಬಂಗಾರವನ್ನು ತುಂಬಿಕೊಂಡು ಬರುವ ಸ್ಪೇನದ ಹಡಗುಗಳ ಮೇಲೆ ದಾಳಿ ಮಾಡಿ ಅವುಗಳನ್ನು ಸುಲಿದುಕೊಂಡು ಬರುವದನ್ನು ಸುರುವು ಮಾಡಿದರು. ಈ ನಾವಿಕವೀರರಲ್ಲಿ ಹಾಕಿನ್ಸ, ಡ್ರೇಕ, ರ್‍ಯಾಲೆ, ಈ ಸಾಹಸಿ ಪುರುಷರು ಪ್ರಸಿದ್ಧರಿದ್ದಾರೆ.

ಸಮುದ್ರದ ಮೇಲಿನ ಪ್ರಭುತ್ವದ ಮನೀಷೆಯು ಇಂಗ್ಲೀಷ ಜನರಲ್ಲಿ ಈ ಮೊದಲೇ ಜಾಗ್ರತವಾಗಿದ್ದಿತು. ಪೋರ್ತುಗಾಲ ಮತ್ತು ಸ್ಪೇನ ಇವುಗಳು ಈ ಕ್ಷೇತ್ರದಲ್ಲಿ ಮಾಡಿದ ಪ್ರಗತಿಯನ್ನು ನೋಡಿ ಕೆಲವು ನಾಹಸಿ ಇಂಗ್ಲಿಷರಿಗೂ ಸ್ಫೂರ್ತಿ ಬಂದಿತು. ಸ. ೧೫೦೯ ರಲ್ಲಿ ಸೆಬಸ್ಟಿಯನ್ ಕೆಬಟ್ ಎಂಬ ಇಂಗ್ಲೀಷ ನಾವಿಕನು ಪೂರ್ವದ ಕಡೆಗೆ ಹೋಗುವ ಮಾರ್ಗವನ್ನು ಶೋಧಿಸಲು ಹೋದನು. ಅಮೇರಿಕೆಯ ಉತ್ತರ ದಂಡೆಯನ್ನು ಸುತ್ತು ಹಾಕಿ ಹೋಗುವ ಪ್ರಯತ್ನವನ್ನು ಆತನು ಮಾಡಿದನು. ಆವನ ಜಲಪರ್ಯಟನೆಯಲ್ಲಿಯ ಸಂಶೋಧನೆಯ ವಿವರವು ದೊರೆತಿಲ್ಲ. ೮ನೆಯ ಹೆನ್ರಿಯು ವಿಲ್ಯಮ್ ಹಾಕಿನ್ಸ ಎಂಬ ಇಂಗ್ಲಿಷ ನಾವಿಕನನ್ನು ಬ್ರಾಝಿಲಕ್ಕೆ ಕಳಿಸಿದ್ದನು. ವಿಲ್ಯಮ್‌ನು ಅಲ್ಲಿಂದ ಹೇರಳವಾದ ಬಂಗಾರ ಮತ್ತು ಹಸ್ತಿದಂತವನ್ನು ಸ್ವದೇಶಕ್ಕೆ ತಂದನು. ವಾಯವ್ಯದಿಂದ ಪೂರ್ವದ ಕಡೆಗೆ ಹೋಗುವ ಮಾರ್ಗವನ್ನು ಶೋಧಿಸಿ ತೆಗೆಯುವ ಪ್ರಯತ್ನವನ್ನು ಹಾಕಿನ್ಸನು ಮಾಡಿದನು. ಆದರೆ ಅವನು ಅಯಶಸ್ವಿಯಾದನು. ಸ. ೧೫೬೨ ಮತ್ತು ೧೫೬೪ರಲ್ಲಿ ವಿಲಿಯಮ್ ಹಾಕಿನ್ಸನ ಮಗನಾದ ಜಾನನು ಪಶ್ಚಿಮ ಆಫ್ರಿಕೆಗೆ ಹೋದನು ಮತ್ತು ಅಲ್ಲಿಂದ ಒಯ್ದ ನಿಗ್ರೋ ಗುಲಾಮರನ್ನು ಅವನು ವೆಸ್ಟ ಇಂಡೀಜ ನಡುಗಡ್ಡೆಗಳಲ್ಲಿಯ ಸ್ಪಾನಿಶರಿಗೆ ಮಾರಿದನು. ಈ ರೀತಿಯಾಗಿ ನಿಗ್ರೋ ಗುಲಾಮರ ಕ್ರಯ-ವಿಕ್ರಯ ಮಾಡುವದರಿಂದ ಮನುಷ್ಯತ್ವವನ್ನು ಕೀಳುಗಳೆಯುವ ವರ್ತನೆಯನ್ನು ತಾವು ಮಾಡುತ್ತಿದ್ದೇವೆಂದು ಯುರೋಪಿಯನ್ ಜನರಿಗೆ ಸ್ವಲ್ಪ ಕೂಡ ಅನಿಸುತ್ತಿದ್ದಿಲ್ಲ !

ಸ. ೧೫೬೭ ರಲ್ಲಿ ಜಾನ್ ಹಾಕಿನ್ಸ ಮತ್ತು ಫ್ರಾನ್ಸಿಸ್ ಡ್ರೇಕ ಈ ಇಂಗ್ಲೀಷ ನಾವಿಕರು ಸ್ಪೇನದ ಹಡಗುಪಡೆಯ ಮೇಲೆ ದೊಡ್ಡ ಮುತ್ತಿಗೆ ಹಾಕಿದರು. ಮತ್ತೆ ಸ. ೧೫೭೨ ಮತ್ತು ೧೫೭೭ನೆಯ ವರ್ಷದಲ್ಲಿ ಪೇರು ದೇಶದಿಂದ ತುಂಬಿ ಹೊರಟ ಸ್ಪೇನದ ಹಡಗುಗಳನ್ನು ಡ್ರೇಕನು ಸುಲಿದುಬಿಟ್ಟನು. ಆವನ ದಾಳಿಗಳು ಬಹಳ ಅನಿರೀಕ್ಷಿತವಾಗಿ ಒಮ್ಮೆಲೇ ಆಗುತ್ತಿದ್ದುದರಿಂದ ಸ್ಪೇನಕ್ಕೆ ಯಾವ ಪ್ರತೀಕಾರವನ್ನು

ಮಾಡಲು ಆಗುತ್ತಿರಲಿಲ್ಲ. ಸ. ೧೫೭೭ ರ ದಾಳಿಯಲ್ಲಿ ಸ್ಪಾನಿಶ್ ಹಡಗುಪಡೆಗೆ ತಿಳಿಯದಂತೆ ಡ್ರೇಕನು ದೊಡ್ಡ ಸಾಹಸವನ್ನು ಮಾಡಿದನು. ಪ್ಯಾಸಿಫಿಕ ಮಹಾ-ಸಾಗರವನ್ನು ದಾಟಿ ದಕ್ಷಿಣ ಆಫ್ರಿಕೆಯನ್ನು ಸುತ್ತುಹಾಕಿ ಸ. ೧೫೮೦ ರಲ್ಲಿ ಅವನು ಸ್ವದೇಶಕ್ಕೆ ಮರಳಿ ಬಂದನು. ಡ್ರೇಕನ ಈ ಪೃಥ್ವಿ ಪ್ರದಕ್ಷಿಣೆಯು ಅತ್ಯಂತ ಸಾಹಸ ಪೂರ್ಣವಾಗಿದ್ದಿತು. ರಾಣಿ ಎಲಿಜಾಬೆಥ್‌ಳು ಈ ವೀರಪುರುಷನನ್ನು ಬಹಳವಾಗಿ ಗೌರವಿಸಿದಳು. ಮತ್ತು ತನ್ನ ನಾವಿಕರು ಸ್ಪೇನಕ್ಕೆ ಎದುರಾಗಿ ನಿಲ್ಲಲು ಸಮರ್ಥ ರಾಗಿದ್ದಾರೆಂಬ ಆತ್ಮವಿಶ್ವಾಸವು ರಾಣಿಯಲ್ಲಿ ಉತ್ಪನ್ನವಾಯಿತು.

ಇಂಗ್ಲಿಷರು ಸ್ಪೇನದ ಹಡಗುಗಳನ್ನು ಲೂಟಿ ಮಾಡುವದನ್ನು ಒಂದೇ ಸವನೆ ನಡೆಸಿದ್ದರು. ಇದಕ್ಕೆ ಇಂಗ್ಲಂಡದ ರಾಣಿಯು ಅಡ್ಡಿ ಮಾಡದಿರಲು ಇಂಗ್ಲಂಡವನ್ನು ಶಿಕ್ಷಿಸಲು ಸ್ಪೇನದ ಅಜಿಂಕ್ಯ ಹಡಗುಪಡೆಯು ಸ. ೧೫೮೮ ರಲ್ಲಿ ಇಂಗ್ಲಂಡದ ಮೇಲೆ ಏರಿ ಹೋಯಿತು.

ಆ ಸಮಯಕ್ಕೆ ಪ್ರೊಟೆಸ್ಟಂಟ್ ಮತ್ತು ರೋಮನ್ ಕೆಥೊಲಿಕ ಇಂಗ್ಲೀಷರು ತಮ್ಮ ಧಾರ್ಮಿಕ ಮತಭೇದಗಳನ್ನು ಮರೆತು ತಮ್ಮ ಮಾತೃಭೂಮಿಯ ಸ್ವಾತಂತ್ರ್ಯ ಕ್ಕಾಗಿ ಹಗಲಿಗೆ ಹಗಲು ಹಚ್ಚಿ ಯುದ್ಧ ಮಾಡಿದರು. ಹಾಕಿನ್ಸ, ಡ್ರೇಕ, ರ್‍ಯಾಲೆ ಈ ಸಾಹಸೀ ಇಂಗ್ಲೀಷ ನಾವಿಕರು ಸ್ಪೇನದ ಹಡಗುಪಡೆಯ ಫಜೀತಿ ಮಾಡಿದರು. ಇದರಿಂದ ಯುರೋಪದಲ್ಲಿಯ ಸ್ಪೇನದ ವರ್ಚಸ್ಸು ಸಂಪುಷ್ಟಕ್ಕೆ ಬಂದಿತು. ಮತ್ತು ಇಂಗ್ಲಂಡ ರಾಷ್ಟ್ರವು " ಸಮುದ್ರಸ್ವಾಮಿನಿ " ಆಯಿತು.

ಇಂಗ್ಲಂಡದ ಈ ವಿಜಯದಿಂದ ಪೂರ್ವದ ಕಡೆಯ ವ್ಯಾಪಾರ ಮತ್ತು ವಸಾಹತು ಇವುಗಳನ್ನು ಹಸ್ತಗತ ಮಾಡಿಕೊಳ್ಳಲು ಇಂಗ್ಲೀಷ ಜನರು ಮುಂದಾದರು. ಕೆಲವು ಮಹತ್ವಾಕಾಂಕ್ಷಿ ಇಂಗ್ಲಿಷರು ಪೂರ್ವದ ದಂಡೆಯ ಕಡೆಯ ವ್ಯಾಪಾರವನ್ನು ಬೆಳೆಸಲು " ಈಸ್ಟ ಇಂಡಿಯಾ ಕಂಪನಿ " ಎಂಬ ವ್ಯಾಪಾರಿ ಸಂಸ್ಥೆಯನ್ನು ಸ್ಥಾಪಿಸಿ ದರು ( ಸ. ೧೬೦೦ ). ಈ ಕಂಪನಿಗೆ ರಾಣಿಯು ಸನದು ಕೊಟ್ಟು ಕಂಪನಿಯ ಕಾರ್ಯಕ್ಕೆ ತನ್ನ ಬೆಂಬಲವಿದ್ದುದನ್ನು ಬಹಿರಂಗವಾಗಿ ವ್ಯಕ್ತಪಡಿಸಿದಳು ಈ ಕಂಪನಿಯ ಕಾರ್ಯಮಾಹಿತಿಯನ್ನು ಮುಂದಿನ ಪಾಠದಲ್ಲಿ ಕೊಟ್ಟಿದೆ.

## ಅವತರಣಿಕೆ

" ಯುರೋಪದ, ಅದರಂತೆಯೇ ಜಗತ್ತಿನ ಇತಿಹಾಸದಲ್ಲಿ ಸ. ೧೪೫೩ ನೆಯ ವರ್ಷವು ಬಹಳ ಕ್ರಾಂತಿಕಾರಕ ವರ್ಷವೆಂದು ತಿಳಿಯಲಾಗುತ್ತದೆ. ಈ ವರ್ಷ ತುರ್ಕ ಮತ್ತು ಕ್ರಿಸ್ತೀ ಜನರೊಳಗಿನ ದೀರ್ಘ ಕಾಲದ ಜಗಳವು ಕೊನೆಗೊಂಡು ತುರ್ಕರು ಅದರಲ್ಲಿ ವಿಜಯ ಹೊಂದಿದರು. ಇದರಿಂದ ಇಲ್ಲಿಯ ವರೆಗೆ, ಕ್ರಿಸ್ತೀ ಧರ್ಮೀಯ ಮತ್ತು ಯುರೋಪೀಯ ಸುಧಾರಣೆಯ ಕೇಂದ್ರವಾಗಿದ್ದ ಕಾನ್‌ಸ್ಟಂಟಿನೋಪಲವು ಮುಂದೆ ತುರ್ಕರ ವಶವಾಯಿತು. ಯುರೋಪಿಯನ್ನರ ಪೂರ್ವದ ಕಡೆಯ ಹಳೆಯ ವ್ಯಾಪಾರಿ ಮಾರ್ಗಗಳನ್ನು ( ಪರಿಣಾಮಕಾರಕವಾಗಿ ) ತಡೆದು

ಹಿಡಿಯಲು ಈಗ್ಗೆ ತುರ್ಕರಿಗೆ ಸಾಧ್ಯವಾಯಿತು. ಆದರೆ ಯುರೋಪಿಯನ್ ಜನರ ನಾಲಿಗೆಗೆ ಪೂರ್ವದ ಕಡೆಯ ಮಸಾಲೆಯ ಪದಾರ್ಥಗಳ (ವಿಶೇಷತಃ ಮೆಣಸು ಶುಂಠಿ) ರುಚಿಯು ಹತ್ತಿದ್ದಿತು. ಆದುದರಿಂದ ಮಸಾಲೆ ಇಲ್ಲದೆ ಮಾಂಸಾಹಾರ ವನ್ನು ಮಾಡುವದೆಂದರೆ ಅವರ ಜೀವದ ಮೇಲೆ ಬಂತು. ಯುರೋಪದ ಪೂರ್ವ ಭಾಗದಲ್ಲಿ ನಿರ್ಮಾಣವಾದ ಈ ಪರಿಸ್ಥಿತಿಯು ಮೊದಲನೆಯ ಒಡೆದು ಕಾಣುವ ಪರಿ-ಣಾಮವೆಂದರೆ, ಕೋಲಂಬಸ, ವಾಸ್ಕೋ-ದ-ಗಾಮಾ ಇತ್ಯಾದಿ ಜನರು ಗೊತ್ತು ಹಚ್ಚಿದ ಶೋಧಗಳೇ ಸರಿ. ಯುರೋಪದ ಇತಿಹಾಸ ಮತ್ತು ಸಂಸ್ಕೃತಿಗಳ ಮೇಲೆ ಈ ಶೋಧಗಳ ಬಹಳ ದೂರಗಾಮಿ ಪರಿಣಾಮಗಳಾದವು. ಈ ಘಟನೆಯ ಮೂಲಕ ಯುರೋಪದೊಳಗಿನ ಜ್ಞಾನದ ಪುನರುಜ್ಜೀವನ ಮತ್ತು ಧರ್ಮ ಸುಧಾರಣೆಯ ಚಳವಳಿಗೆ ಚಾಲನೆ ದೊರೆಯಿತು.

ಎಸ್. ಆರ್. ಶರ್ಮಾ

('ದಿ ಮೇಕಿಂಗ ಆಫ್ ಮಾಡರ್ನ ಇಂಡಿಯಾ'ದಿಂದ)

## ಪ್ರಶ್ನೆಗಳು

೧. ಭೌಗೋಲಿಕ ಶೋಧಗಳ ಮಹತ್ವದ ಪರಿಣಾಮಗಳನ್ನು ಹೇಳಿರಿ.

೨. ಜಾಗತಿಕ ವಿಕಾಸದ ತುರುಸಿನಲ್ಲಿ ಪೋರ್ತುಗಾಲ ಮತ್ತು ಸ್ಪೇನ ಇವುಗಳ ಧೋರಣೆಯೊಳಗಿನ ವ್ಯತ್ಯಾಸವನ್ನು ತೋರಿಸಿರಿ.

೩. ಹಿಂದೀ ಮಹಾಸಾಗರದ ಮೇಲಿನ ಪ್ರಭುತ್ವವು ಹೇಗೆ ಸ್ಥಾಪಿತವಾಯಿತು ?

೪. ಉತ್ತರ ಅಮೇರಿಕೆಯಲ್ಲಿ ವಸಾಹತು ಮಾಡಲು ಯಾವ ಯುರೋಪಿಯನ್ ಜನರು ಮುಂದಾಳ್ತನವನ್ನು ವಹಿಸಿದರು ? ಅದಕ್ಕೆ ಕಾರಣಗಳಾವವು ? ಈ ವಸಾಹತುಕಾರರಲ್ಲಿ ತಂಟೆಯು ಏಕೆ ಉದ್ಭವಿಸಿತು ?

೫. ಸ್ಪೇನ ಮತ್ತು ಇಂಗ್ಲಂಡಗಳಲ್ಲಿ ಜಗಳವು ಏಕೆ ಹುಟ್ಟಿತು ? ಅದರ ಕೊನೆಯು ಹೇಗಾಯಿತು ?

೬. ಕಾನಸ್ಟಂಟಿನೋಪಲವು ತುರ್ಕರ ವಶವಾದುದರಿಂದ ಯುರೋಪಿಯನರ ಜಾಗತಿಕ ವಿಕಾಸದ ಮೇಲೆ ಯಾವ ಪರಿಣಾಮಗಳಾದವು ?

| ಭಾರತದಲ್ಲಿ ] | ಕಾಲಪಟ | [ ಭಾರತದ ಹೊರಗೆ |
|---|---|---|
| | ೧೦೦೦ | |
| ಸೋಮನಾಥದ ಮೇಲೆ ದಾಳಿ | | |
| | ೧೧೦೦ | ಮೊದಲನೇ ಧರ್ಮಯುದ್ಧ ಕ್ರುಸೇಡ |
| ಬಸವೇಶ್ವರ | | |
| ಸ್ಥಾನೇಶ್ವರ ಯುದ್ಧ<br>ಸುಲ್ತಾನಶಾಹಿ ಸ್ಥಾಪನೆ | ೧೨೦೦ | ಚಂಗೀಝಖಾನ<br>ಅವೇರಾಸ ವೈಜ್ಞಾನಿಕ<br>ನಾಲ್ಕನೇ ಧರ್ಮಯುದ್ಧ<br>ಕ್ರುಸೇಡ<br>ಬಗದಾದ ಖಿಲಾಫತದ ಕೊನೆ<br>ದಾಂತೆ-ಡಿವ್ಹಿನಾ ಕೊಮೆಡಿಯಾ<br>ಮಾರ್ಕೊಪೊಲೋ, ರೋಜರ<br>ಬೇಕನ್ |
| ಜ್ಞಾನೇಶ್ವರ<br>ದೇವಗಿರಿಯ ಮೇಲೆ ದಾಳಿ | ೧೩೦೦ | |
| ವಿಜಯನಗರದ ಸ್ಥಾಪನೆ<br>ಬಹಮನೀ ರಾಜ್ಯಸ್ಥಾಪನೆ<br>ಫಿರೋಜ ತಘಲಕ<br>ತೈಮೂರನ ದಾಳಿ | ೧೪೦೦ | |
| ನಿಕಿತಿನ್ ರಶಿಯನ ಪ್ರವಾಸಿ<br>ಗಾವಾನ<br>ಕೃಷ್ಣದೇವರಾಪ<br>ಬಾಬರ | ೧೫೦೦ | ಕಾನಸ್ಟಾಂಟಿನೋಪಲ<br>ಬೆಳವಣಿಗೆ<br>ಕೋಲಂಬಸ<br>ವಾಸ್ಕೋ-ದ-ಗಾಮಾ |
| ರಕ್ಕಸತಂಗಡಿ ಯುದ್ಧ<br>ಅಕಬರ | | ಕೋಪರ್ನಿಕಸ್<br>ಮಾಯಕೆಲ್ ಅಂಜಿಲೋ<br>ಡ್ರೇಕನ ಪೃಥ್ವಿ ಪ್ರದಕ್ಷಿಣೆ |
| | ೧೬೦೦ | |

೧ ಇಂಚಿಗೆ ೧೦೦ ವರ್ಷಗಳು

## ೧೨ನೆಯ ಪಾಠ

# ಭಾರತದಲ್ಲಿ ಯುರೋಪಿಯನರ ಪ್ರವೇಶ

**ಪೋರ್ತುಗೀಜರ ಪ್ರವೇಶ :—** ೧೬ ನೆಯ ಶತಕವೆಂದರೆ ಪೋರ್ತುಗೀಜ ಸತ್ತೆಯ ವಿಸ್ತಾರ ಮತ್ತು ವೈಭವದ ಶತಕವು. ಹಿಂದುಸ್ಥಾನದ ಮಟ್ಟಿಗೆ ವಿಚಾರ ಮಾಡಿದರೆ ಅವರು ಪಶ್ಚಿಮದ ಮತ್ತು ಪೂರ್ವದ ದಂಡೆಗಳ ಮೇಲೆ ತಮ್ಮ ಅನೇಕ ಠಾಣೆಗಳನ್ನು ಸ್ಥಾಪಿಸಿದರು. ಅವುಗಳಲ್ಲಿ ದೀವ, ಸುರತ, ದಮನ, ವಸಯಿ, ಸಾಷ್ಟಿ, ಮುಂಬಯಿ, ಚೌಲ, ದಾಭೋಳ, ಗೋವೆ, ಮಂಗಳೂರ, ಕಾಲಿಕತ್ತ, ಕೋಚೀನ, ಕ್ವಿಲಾನ, ಕೋಲಂಬೋ, ನೇಗಾಪಟ್ಟಣ, ಸ್ಯಾನ್‌ಥಾಮ್, ಮಛಲೀಪಟ್ಟಣ, ಹುಗಳಿ ಈ ಸ್ಥಳಗಳು ಬರುವವು. ದೇಶದ ಅಂತರ್ಗತ ಭಾಗಗಳಲ್ಲಿ ರಾಜ್ಯವಿಸ್ತಾರ ಮಾಡುವ ಪ್ರಯತ್ನಗಳನ್ನು ಮುಂದೆ ಇಂಗ್ಲಿಷರು ಮಾಡಿದಂತೆ ಇವರು ಮಾಡಲಿಲ್ಲ. ಆದರೂ ವಿಜಯನಗರ ಮತ್ತು ಮೊಗಲ ಸಾಮ್ರಾಜ್ಯಗಳಲ್ಲಿ ಅವರು ತಮ್ಮ ವ್ಯಾಪಾರೀ ಸಂಬಂಧವನ್ನು ಪ್ರಸ್ಥಾಪಿಸಿದರು. ಪೋರ್ತುಗೀಜರು ಮುಸಲ್ಮಾನರನ್ನು ಬದ್ಧ ವೈರಿಗಳೆಂದು ತಿಳಿಯುತ್ತಿದ್ದುದರಿಂದ ವಿಜಯನಗರದ ಹಿಂದು ರಾಜರು ಅವರಿಗೆ ಪ್ರಿಯರಾಗಿದ್ದರು. ಆ ಸಂಪನ್ನ ರಾಜ್ಯದಲ್ಲಿ ವ್ಯಾಪಾರಮಾಡಿ ಪೋರ್ತುಗೀಜರು ಅಪಾರ ಸಂಪತ್ತನ್ನು ಗಳಿಸಿದರು. ಮುಂದೆ ಸಿಲೋನವು ಕೂಡ ಪೋರ್ತುಗೀಜರ ಒಂದು ಶ್ರೀಮಂತ ವಸಾಹತು ಆಯಿತು.



ಅಲ್ಬುಕರ್ಕ್

**ಅಲಬುಕರ್ಕನ ಕೆಲಸ:—** ಅಲ್ಬುಕರ್ಕನು ಗೋವೆಯನ್ನು ಪೋರ್ತುಗೀಜರ ಮುಖ್ಯ ಕೇಂದ್ರವನ್ನಾಗಿ ಮಾಡಿದ್ದನು. ನಿಸರ್ಗರಮ್ಯ ಮತ್ತು ಬೆಳೆಯುಳ್ಳ ಈ ಪ್ರದೇಶವು ಸೈನಿಕ ದೃಷ್ಟಿಯಿಂದ ಆಯಕಟ್ಟಿನ ಸ್ಥಳದಲ್ಲಿತ್ತು. ಗುಜರಾಥದ ಸುಲ್ತಾನ ಮತ್ತು ಕಾಲಿಕತದ ಝಾಮೋರಿನ ಇವರ ನಡುವೆ ಠಾಣೆಯನ್ನು ಸ್ಥಾಪಿಸಿಕೊಂಡು ಕೂಡ್ರಲು ಪೋರ್ತುಗೀಜರಿಗೆ ಗೋವೆಯು ಅತಿ ಸುಲಭವಾದ ಸ್ಥಳವಾಗಿತ್ತು. ಗೋವೆಯನ್ನು ತಮ್ಮ ಮಧ್ಯವರ್ತಿ ಕೇಂದ್ರವನ್ನಾಗಿ ಮಾಡಿ ಅರಬೀ ಸಮುದ್ರ, ಹಿಂದೀ ಮಹಾ

ಸಾಗರ ಇವುಗಳನ್ನು ಪೋರ್ತುಗೀಜರ ತಳವನ್ನು ಮಾಡುವದು ಅಲ್ಬುಕರ್ಕನ ಮನೀಷೆಯಾಗಿತ್ತು. ಈ ದೃಷ್ಟಿಯಿಂದ ಗೋವೆಯಲ್ಲಿ ಒಂದು ಮಾದರಿಯ ವಸಾಹತನ್ನು ಸ್ಥಾಪಿಸಲು ಆತನು ಪ್ರಯತ್ನಿಸಿದನು. ಯುರೋಪಿಯನ್ ಮತ್ತು ಈ ದೇಶದವರ ವಿವಾಹಗಳಿಗೆ ಪ್ರೋತ್ಸಾಹವನ್ನಿತ್ತನು. ಅಲ್ಬುಕರ್ಕನ ಆಳಿಕೆಯಲ್ಲಿ ಸುಮಾರು ೪೫೦ ಜನ ಪೋರ್ತುಗೀಜರು ಹಿಂದೀ ಸ್ತ್ರೀಯರನ್ನು ಮದುವೆಯಾದರು. ತಮ್ಮ ಅಧಿಕಾರವನ್ನು ಸ್ಥಿರವಾಗಿಸಲು ಮಾಡಿದ ಈ ಯೋಜನೆಯು ತಪ್ಪೆಂದು ಸಿದ್ಧವಾಯಿತು. ಆದರೂ ಅಲ್ಬುಕರ್ಕನ ಶಾಸನಪದ್ಧತಿಯು ಜಾಣತನದ್ದಾಗಿತ್ತು. ಸ್ಥಾನಿಕ ಹಿಂದುಗಳಲ್ಲಿ ಅನೇಕರಿಗೆ ಅಧಿಕಾರದ ಸ್ಥಳಗಳನ್ನು ಕೊಟ್ಟು ಅವನು ಪ್ರಜಾಜನರ ಸಹಕಾರವನ್ನು ದೊರಕಿಸಿದನು.

ಶಾಲೆ ಮತ್ತು ಮುದ್ರಣಾಲಯಗಳನ್ನು ಸ್ಥಾಪಿಸಿ ಇಲ್ಲಿಯ ಜನರಿಗೆ ಶಿಕ್ಷಣವನ್ನು ಕೊಟ್ಟು ಅವರಿಗೆ ಹೊಸ ಜ್ಞಾನದ ಪರಿಚಯವನ್ನು ಮಾಡಿಕೊಟ್ಟನು. ಸಹಗಮನದಂಥ ಕ್ರೂರ ಪದ್ಧತಿಯನ್ನು ಬಂದು ಮಾಡಿದನು. ಗ್ರಾಮ ಪಂಚಾಯತ ವ್ಯವಸ್ಥೆಯನ್ನು ಸ್ಥಿರಗೊಳಿಸಿದನು. ಪೋರ್ತುಗೀಜ ಅಧಿಕಾರಿಗಳಿಗೆ ಮಾರ್ಗದರ್ಶನವಾಗಲೆಂದು ಸ್ಥಾನಿಕ ನೀತಿ ನಿಯಮಗಳ ವಿವರಗಳನ್ನೊಳಗೊಂಡ ಪುಸ್ತಕಗಳನ್ನು ಸಿದ್ಧ ಮಾಡಿಸಿದನು.

**ಧರ್ಮಪ್ರಸಾರದ ಹುಚ್ಚು** :— ಪೋರ್ತುಗೀಜರು ಹಿಂದುಸ್ಥಾನದೊಳಗೆ ಮಾಡಿದ ಕಾರ್ಯಗಳಲ್ಲಿ ಧರ್ಮಪ್ರಸಾರದ ಪ್ರಯತ್ನಗಳಿಗೆ ಅಗ್ರಸ್ಥಾನವಿದೆ. ಪೋರ್ತುಗಾಲದ ಅರಸನಾದ ನಾಲ್ಕನೆಯ ಹೆನ್ರಿಯು ಔರಂಗಜೇಬನ ಮಾದರಿಯ ಆಜ್ಞಾಪತ್ರವನ್ನು ಹಿಂದುಸ್ಥಾನದೊಳಗಿನ ಪೋರ್ತುಗೀಜ ಅಧಿಕಾರಿಗಳಿಗೆ ಕಳಿಸಿ, ಯಾವದೇ ರೀತಿಯ ದಯೆಯನ್ನು ತೋರಿಸದೆ ಮೂರ್ತಿಪೂಜಕರಿಗೆ ಕ್ರಿಸ್ತೀ ಧರ್ಮದ ದೀಕ್ಷೆಯನ್ನು ಕೊಡಲು ಆದೇಶವನ್ನಿತ್ತಿದ್ದನು. ಸಂತೋಷದಿಂದ ಮತಾಂತರ ಹೊಂದಿ ಕ್ರೈಸ್ತರಾಗುವವರಿಗೆ ಲಾಭದ ಆಮಿಷಗಳನ್ನು ತೋರಿಸಲಾಗುತ್ತಿತ್ತು. ಇತರರ ಮೇಲೆ ಎಡೆಬಿಡದೆ ಅತ್ಯಾಚಾರ ಮಾಡಿ ಬಲುಮೆ ಮಾಡಲಾಗುತ್ತಿತ್ತು. ಧರ್ಮಹಿಂಸೆಯಲ್ಲಿ ಪೋರ್ತುಗೀಜರು ಅಲ್ಲಾಉದ್ದೀನ ಹಾಗು ಔರಂಗಜೇಬರನ್ನು ಮೀರಿಸಿದ್ದರು.

ಪೋರ್ತುಗೀಜ ಸರಕಾರವು ಈ ಕಾರ್ಯಕ್ಕಾಗಿ ಅನೇಕ ಪ್ರಸಿದ್ಧ ಕ್ರಿಸ್ತೀ ಧರ್ಮೋಪದೇಶಕರನ್ನು ಭಾರತಕ್ಕೆ ಕಳಿಸಿತು. ಅವರಲ್ಲಿ ಫ್ರಾನ್ಸಿಸ್ ಝೇವಿಯರ ಮತ್ತು ಅಲೆಕ್ಸ, ಡಿ. ಮೆನೆಝಿಸ್ ಇವರು ವಿಶೇಷವಾಗಿ ಪ್ರಸಿದ್ಧರಿದ್ದಾರೆ. ಫ್ರಾನ್ಸಿಸ್ ಝೇವಿಯರನು ಸಂತ ಇಗ್ನೆಶಸ್ ಲೋಯೋಲಾನ ಪಟ್ಟದ ಶಿಷ್ಯನಾಗಿದ್ದನು. ಪೋರ್ತುಗೀಜರ ವಶದೊಳಗಿನ ದೇಶೀಯರಿಗೆ ಕ್ರಿಸ್ತೀ ಧರ್ಮದ ದೀಕ್ಷೆಯನ್ನು ಕೊಡಲು ಕಂಕಣಬದ್ಧನಾಗಿ ಅವನು ಭಾರತಕ್ಕೆ ಬಂದನು (ಸ. ೧೫೪೨). ತ್ರಾವಣಕೋರದಲ್ಲಿ ಅವನು ೪೫ ಕ್ರಿಸ್ತೀ ವಸಾಹತುಗಳನ್ನು ಸ್ಥಾಪಿಸಿದನು. ಸಿಲೋನ, ಮಲಾಕ್ಕಾ ಮತ್ತು ಮಸಾಲೆಯ ನಡುಗಡ್ಡೆ ಇವುಗಳ ವರೆಗೆ ಸಂಚಾರ ಮಾಡಿ,

ಅವನು ಕ್ರಿಸ್ತೀ ಧರ್ಮದ ಪ್ರಚಾರಕಾರ್ಯವನ್ನು ಮಾಡಿದನು. ಸ. ೧೫೪೯ ರಲ್ಲಿ ಅವನು ಜಪಾನಕ್ಕೆ ಹೋದನು. ಸ. ೧೫೫೨ ರಲ್ಲಿ ಚೀನಕ್ಕೆ ಹೋದನು. ಬಳಿಕ ಅವನು ಅಲ್ಲಿಯೇ ಕ್ರೈಸ್ತವಾಸಿಯಾದನು. ಅವನ ಶವವನ್ನು ಗೋವೆಗೆ ತರಲಾಯಿತು. ಅಲ್ಲಿ ಒಂದು ಭವ್ಯ ಮಂದಿರದಲ್ಲಿ ಅದನ್ನು ಇಡಲಾಗಿದೆ. ವಿಶೇಷ ಪ್ರಸಂಗಗಳಲ್ಲಿ ಈ ಶವದ ದರ್ಶನವನ್ನು ಈಗಲೂ ಮಾಡಿಸಲಾಗುತ್ತದೆ. ಆ ವೇಳೆಯಲ್ಲಿ ಅನೇಕ ಭಾವಿಕ ಕ್ರಿಸ್ತೀ ಜನರು ಗೋವೆಗೆ ಹೋಗುತ್ತಾರೆ. ಈ ದರ್ಶನದಿಂದ ಪುನೀತರಾಗುವರೆಂದು ಅವರ ಶ್ರದ್ಧೆ ಇದೆ.

ಡಿ ಮೆನೆಝಿಸ್ ಎಂಬವನು ಮಲಬಾರದೊಳಗಿನ ಸೀರಿಯನ್ ಕ್ರಿಸ್ತೀ ಜನರಿಗೆ ಕೆಥೊಲಿಕ್ ಪಂಥದ ಧರ್ಮಾಚರಣೆಯನ್ನು ಕಲಿಸಿದನು. ಈ ರೀತಿಯಾಗಿ ಪೋರ್ತುಗೀಜರು ದಕ್ಷಿಣ ಹಿಂದುಸ್ಥಾನದಲ್ಲಿ ರೋಮನ್ ಕೆಥೊಲಿಕ್ ಪಂಥದ ಪ್ರಸಾರವನ್ನು ಒಳ್ಳೆ ಜೋರಿನಿಂದ ಮಾಡಿದರು. ಈ ಭಾಗದೊಳಗಿನ ಈ ಪಂಥದ ಅನೇಕ ಧರ್ಮಮಂದಿರಗಳು ಮತ್ತು ಅಸಂಖ್ಯ ರೋಮನ್ ಕೆಥೊಲಿಕ್ ಕ್ರೈಸ್ತರ ಅಸ್ತಿತ್ವವು ಪೋರ್ತುಗೀಜರ ಕಾರ್ಯದ ಫಲಗಳೇ ಆಗಿವೆ.

**ಅಕಬರನೂ ಜೆಸುಇಟರೂ :–** ‘ಜೆಸುಇಟ್’ ಪಂಥದ ಧರ್ಮೋಪದೇಶಕರ ಅನೇಕ ಶಿಷ್ಟಮಂಡಲಗಳು ಗೋವೆಯಿಂದ ಅಕಬರನ ಭೆಟ್ಟಿಗೆ ಹೋಗಿದ್ದವು. ಅಕಬರನ ಮನವನ್ನು ಒಲಿಸಿ ಅವನನ್ನು ಕ್ರೈಸ್ತನನ್ನಾಗಿ ಮಾಡಲು ಈ ‘ಜೆಸುಇಟ್’ ಪ್ರಚಾರಕರು ಬಹಳ ಪ್ರಯತ್ನ ಮಾಡಿ ನೋಡಿದರು. ಬಾದಶಹನೇ ಕ್ರೈಸ್ತನಾಗಿಬಿಟ್ಟರೆ ಪ್ರಜೆಗಳು ತಮ್ಮಷ್ಟಕ್ಕೆ ತಾವೇ ಕ್ರೈಸ್ತರಾಗುವರೆಂದು ಅವರಿಗೆ ಅನಿಸಿತ್ತು. ‘ಯಥಾ ರಾಜಾ ತಥಾ ಪ್ರಜಾ’ ಎಂಬ ಪದ್ಧತಿಯು ಯುರೋಪದಲ್ಲಿತ್ತು. ಭಾರತದಲ್ಲಿಯೂ ಅದೇ ಅವಸ್ಥೆಯು ನಿರ್ಮಾಣವಾಗುವದೆಂದು ಅವರ ತಪ್ಪು ಕಲ್ಪನೆ ಇತ್ತು. ಕ್ರಿಸ್ತೀ ಧರ್ಮದ ತತ್ವಗಳನ್ನು ತಿಳಿದುಕೊಳ್ಳಬೇಕೆಂಬ ಬಲವಾದ ಲವಲವಿಕೆಯಷ್ಟೆ ಅಕಬರನಿಗಿತ್ತು. ಆತನು ಇತರ ಧರ್ಮಪ್ರಚಾರಕರಂತೆಯೇ ಕ್ರಿಸ್ತೀಧರ್ಮಪ್ರಚಾರಕರೊಡನೆ ಬಹಳ ಒಳ್ಳೆ ರೀತಿಯಿಂದ ವರ್ತಿಸಿದನು. ಇಷ್ಟೇ ಅಲ್ಲದೆ ಶಾಂತ ಮಾರ್ಗದಿಂದ ಕ್ರಿಸ್ತೀಧರ್ಮದ ಪ್ರಸಾರ ಮಾಡಲು ಅನುಮತಿಯನ್ನಿತ್ತನು. ಆದರೆ ಅವನು ಸ್ವತಃ ಕ್ರಿಸ್ತೀಧರ್ಮವನ್ನು ಸ್ವೀಕರಿಸಲಿಲ್ಲವೆಂದು ಜೆಸುಇಟ್ ಧರ್ಮಗುರುಗಳಿಗೆ ಅತ್ಯಂತ ನಿರಾಶೆಯಾಯಿತು.

**ಪೋರ್ತುಗೀಜರ ಅಳಿಗಾಲ :—** ೧೬ನೆಯ ಶತಕದ ಕೊನೆಗೆ ಪೋರ್ತುಗೀಜ ಸತ್ತೆಯ ಅಳಿಗಾಲವು ಸುರುವಾಯಿತು. ಆದಕ್ಕೆ ಕಾರಣಗಳು ಎದ್ದು ಕಾಣುತ್ತವೆ. ಸ. ೧೫೬೫ರಲ್ಲಿ ವಿಜಯನಗರದ ನಾಶವಾಯಿತು. ಇದರಿಂದ ಈ ರಾಜ್ಯದೊಳಗಿನ ಪೋರ್ತುಗೀಜರ ಅತ್ಯಂತ ಲಾಭದಾಯಕವಾದ ವ್ಯಾಪಾರವು ನಿಂತುಹೋಗಿ ವಿಜಯನಗರದಿಂದ ಪೋರ್ತುಗೀಜರ ಬೊಕ್ಕಸಕ್ಕೆ ಹರಿದುಬರುವ ಸಂಪತ್ತಿನ ಓಘವು ತಡೆಯಲ್ಪಟ್ಟಿತು. ಸ. ೧೫೮೦ರಲ್ಲಿ ಸ್ಪೇನವು ಪೋರ್ತುಗಾಲವನ್ನು ಗೆದ್ದಿತು. ಸ್ಪೇನದ ಲಕ್ಷ್ಯವೆಲ್ಲವೂ ದಕ್ಷಿಣ ಅಮೇರಿಕೆಯ ಅರ್ಥಶೋಷಣೆಯ ಕಡೆಗೆ ಇದ್ದುದರಿಂದ ಸ್ಪೇನವು

ಹಿಂದುಸ್ಥಾನದ ವ್ಯಾಪಾರದ ಕಡೆಗೆ ದುರ್ಲಕ್ಷ್ಯ ಮಾಡಿತು. ಇದರಿಂದ ಹಿಂದುಸ್ಥಾನ-ದೊಳಗಿನ ಪೋರ್ತುಗೀಜ ಅಧಿಕಾರಿಗಳಿಗೆ ತಮ್ಮ ಸರಕಾರದ ಬೆಂಬಲವು ದೊರೆಯ-ದಾಯಿತು. ಧರ್ಮಪ್ರಸಾರದ ಕಾರ್ಯದಲ್ಲಿ ಪೋರ್ತುಗೀಜರು ಬಹಳ ಒತ್ತಾಯ ಮಾಡಿದ್ದರಿಂದಲೂ ಅನನ್ವಿತ ಅತ್ಯಾಚಾರ ಮಾಡಿದ್ದರಿಂದಲೂ ಭಾರತೀಯ ಬಹು ಜನ ಸಮಾಜವು ಅವರನ್ನು ದ್ವೇಷಿಸಹತ್ತಿತು. ಮರಾಠರು ಮತ್ತು ಮೊಗಲರು ಪೋರ್ತುಗೀಜರನ್ನು ಶತ್ರುಗಳೆಂದು ತಿಳಿದು ಅವರ ಮೇಲೆ ಶಸ್ತ್ರಾಸ್ತ್ರವನ್ನೆತ್ತಿದರು. ಈ ಆಘಾತದಿಂದ ಪೋರ್ತುಗೀಜ ಸತ್ತೆಯು ದುರ್ಬಲವಾಯಿತು. ಅಲ್ಬುಕರ್ಕನ ನಂತರ ಬಂದ ಪೋರ್ತುಗೀಜ ಅಧಿಕಾರಿಗಳು ಅತ್ಯಂತ ವಿಲಾಸಿ ಮತ್ತು ಸೋಮಾರಿ ಯಾಗಿದ್ದರು. ಹಿಂದೀಮಹಾಸಾಗರದ ಮೇಲಿನ ತಮ್ಮ ಪ್ರಭುತ್ವವನ್ನು ಯಾರು ಕಸಿದುಕೊಳ್ಳುವದೂ ಸಾಧ್ಯವಿಲ್ಲ ಎಂಬ ಭ್ರಮೆಯಲ್ಲಿ ಅವರು ನಿಶ್ಚಿಂತರಾಗಿದ್ದರು. ಅವರ ಈ ಭ್ರಮೆಯು ೧೭ನೆಯ ಶತಕದ ಪ್ರಾರಂಭದಲ್ಲಿ ಒಮ್ಮೆಲೇ ದೂರವಾಯಿತು. ಡಚ್ ಮತ್ತು ಇಂಗ್ಲಿಷ ಜನರು ಪೂರ್ವಭಾರತದಲ್ಲಿ ಕಾಲಿಟ್ಟು ಪೋರ್ತುಗೀಜರ ಗುತ್ತಿಗೆಯನ್ನು ನಾಶಮಾಡಿದರು.

ಸ. ೧೫೯೫ ರಲ್ಲಿ ಡಚ್ಚರ ಮೊದಲನೆಯ ಯುದ್ಧನೌಕೆಯು ಇಂಡೋ-ನೇಶಿಯಾದ ವರೆಗೆ ಬಂತು. ಅದಕ್ಕೆ ಪ್ರತೀಕಾರ ಮಾಡಲು ಪೋರ್ತುಗೀಜರಿಗೆ ಆಗಲಿಲ್ಲ. ಡಚ್ಚರು ಸ. ೧೬೪೧ರಲ್ಲಿ ಮಲಾಕ್ಕಾ ವಶಪಡಿಸಿಕೊಂಡರು. ಕೋಲಂಬೊ-ವನ್ನು ಕೂಡ ತೆಗೆದುಕೊಂಡರು. ಸ. ೧೬೬೩ರ ಸುಮಾರಿಗೆ ಮಲಬಾರದ ದಂಡೆಯ ಮೇಲೆ ಡಚ್ಚರೂ ತಮ್ಮ ವಸಾಹತನ್ನು ಸ್ಥಾಪಿಸಿದರು. ಡಚ್ಚರು ಸಿಲೋನವನ್ನು ಗೆದ್ದ ಬಳಿಕ ಪೋರ್ತುಗೀಜರ ಸತ್ತೆಯು ಸಂಪುಷ್ಟಕ್ಕೆ ಬಂತು.

**ಡಚ್ಚರ ಆಗಮನ :—** ಪೋರ್ತುಗೀಜರ ಪತನಕ್ಕೆ ಡಚ್ಚರು ಮುಂದಾಳಾದ-ರೆಂಬುದನ್ನು ನಾವು ನೋಡಿದ್ದೇವೆ. ಅವರು ಉಗ್ರ ಪ್ರೊಟೆಸ್ಟಂಟರಾದುದರಿಂದ ರೋಮದ ಪೋಪನು ಪೋರ್ತುಗಾಲ ಮತ್ತು ಸ್ಪೇನಕ್ಕೆ ಕೊಟ್ಟ ಪ್ರಾದೇಶಿಕ ಪ್ರಭು-ತ್ವದ ಆಜ್ಞಾಪತ್ರಕವು ಅವರಿಗೆ ಮಾನ್ಯವಿದ್ದಿಲ್ಲ. ಸ. ೧೫೮೮ರಲ್ಲಿ ಆಂಗ್ಲರು ಸ್ಪೇನದ ಅಜಿಂಕ್ಯವೆಂದು ಗಣಿಸಲ್ಪಟ್ಟ ನೌಕಾಬಲದ ಉಚ್ಚಾಟನವನ್ನು ಮಾಡಿದ್ದರಿಂದ ಸ್ಪೇನದ ಅಜಿಂಕ್ಯಪದದ ಬಡಬಡಿಕೆಯು ಒಡೆದುಹೋಯಿತು. ಲಿಕೋಟನ್ನನೆಂಬ ಡಚ್ ಗೃಹಸ್ಥನು ೭ ವರ್ಷ ಗೋವೆಯಲ್ಲಿ ಪೋರ್ತುಗೀಜ ಧರ್ಮಪ್ರಮುಖನ ಕಾರ್ಯದರ್ಶಿ ಎಂದು ಕೆಲಸ ಮಾಡುತ್ತಿದ್ದನು. ಅವನು ತನ್ನ ದೇಶಕ್ಕೆ ಕಳಿಸಿದ ಪತ್ರಗಳ ಮೇಲಿಂದ ಹಿಂದುಸ್ಥಾನದಲ್ಲಿಯ ಪೋರ್ತುಗೀಜರ ಸ್ಥಾನವು ಹೊಯ್ದಾಡತೊಡಗಿತ್ತೆಂಬ ಕಲ್ಪ-ನೆಯು ಡಚ್ ಜನರಿಗೆ ತಿಳಿಯಿತು. ಇ. ಸ. ೧೬೦೬ರಲ್ಲಿ ಮಲಕ್ಕಾ ಸಾಮುದ್ರಧುನಿ-ಯಲ್ಲಿ ಡಚ್ಚರು ಪೋರ್ತುಗೀಜರನ್ನು ಸೋಲಿಸಿದರು. ಅಲ್ಲಿಂದ ಮುಂದೆ ಇಸ್ಟ ಇಂಡೀಜ ನಡುಗಡ್ಡೆಗಳು ಡಚ್ಚರ ಪ್ರಭುತ್ವಕ್ಕೆ ಒಳಗಾದವು. ಜಾವಾದಲ್ಲಿ ಬಾಂಟಮ್ ಮತ್ತು ಜಕಾರ್ತಾದಲ್ಲಿ ಡಚ್ಚರು ತಮ್ಮ ವಸಾಹತುಗಳನ್ನು ಮಾಡಿ ಅಲ್ಲಲ್ಲಿ ಕೋಟಿ-ಕೊತ್ತಲಗಳನ್ನು ಕಟ್ಟಿಸಿದರು. ಮುಂದೆ ಬಟೆವ್ಹಿಯಾದಲ್ಲಿ ಡಚ್ಚರ ಪೂರ್ವದ ಕಡೆಯ

ಸಾಮ್ರಾಜ್ಯದ ರಾಜಧಾನಿಯು ಸ್ಥಾಪಿತವಾಯಿತು. ಇ. ಸ. ೧೬೦೨ರಲ್ಲಿ ಡಚ್ ವ್ಯಾಪಾರಿ ಕಂಪನಿಯು ಸ್ಥಾಪಿತವಾಯಿತು. ಅದಕ್ಕೆ ಹಾಲಂಡದ ಸರ್ವಶ್ರೇಷ್ಠ ವಿಧಿಮಂಡಳವು ವ್ಯಾಪಾರ ವಿಸ್ತಾರ ಮತ್ತು ಒಡಂಬಡಿಕೆ ಮಾಡಿಕೊಳ್ಳುವ, ಕೋಟಿ-ಕೊತ್ತಳಗಳನ್ನು ಕಟ್ಟಿಸುವ ಮತ್ತು ಮಾರಾಟದ ಅಧಿಕಾರಗಳನ್ನು ಕೊಟ್ಟಿತು. ಪೋರ್ತುಗೀಜರ ಶತ್ರುವಾದ ಕಾಲಿಕತ್ತದ ಝಾಮೋರಿನ್‌ನ ಕೂಡ ಡಚ್ಚರು ಮಿತ್ರತ್ವದ ಒಡಂಬಡಿಕೆಯನ್ನು ಮಾಡಿಕೊಂಡರು (ಇ.ಸ. ೧೬೦೪). ಆದರೂ ಅವರ ಎಲ್ಲ ವ್ಯಾಪಾರಿ ಠಾಣೆಗಳು ಪೂರ್ವ ಕರಾವಳಿಯ ಮೇಲೆ ಇದ್ದವು. ಮಚ್ಛಲೀಪಟ್ಟಣ ಮತ್ತು ಪುಲಿಕತ ಇವು ಅವರ ಪ್ರಮುಖ ಠಾಣೆಗಳಾಗಿದ್ದವು. ಸಿಂಹಳ ದೇಶದ ರಾಜಾ ಸಿಂಹನ ಸಹಾಯದಿಂದ ಅವರು ಪೋರ್ತುಗೀಜರನ್ನು ಸೋಲಿಸಿ ಸಿಲೋನವನ್ನು ಗೆದ್ದರು. ಸಿಲೋನ ಮತ್ತು ಹಿಂದುಸ್ಥಾನ ಈ ಎರಡು ದೇಶಗಳಲ್ಲಿ ಅವರು ಸುಮಾರು ೧೬೦ ಕಡೆಗಳಲ್ಲಿ ತಮ್ಮ ಠಾಣೆಗಳನ್ನು ಸ್ಥಾಪಿಸಿ ಪೋರ್ತುಗೀಜರನ್ನು ಓಡಿಸಿದರು. ಅವು-ಗಳಲ್ಲಿ ಪಶ್ಚಿಮ ಕರಾವಳಿಯಲ್ಲಿ ಸುರತ, ಕಾಲಿಕತ್ತ, ಕೊಚ್ಚಿ, ಸಿಲೋನದಲ್ಲಿ ಕ್ಯಾಂಡಿ, ಕೋಲಂಬೊ, ತ್ರಿಂಕೋಮಾಲಿ, ಬಂಗಾಲದ ಕಡೆಗೆ ಚಿನ್ಸುರಾ ಮತ್ತು ಪಾಟಣಾ, ಪೂರ್ವ ಕರಾವಳಿಯಲ್ಲಿ ಮಚ್ಛಲೀಪಟ್ಟಣ, ಪುಲಿಕತ, ನೇಗಾಪಟ್ಟಂ ಇವು ಉಲ್ಲೇಖ-ನೀಯವಾಗಿವೆ. ಕಡೆಯ ಎರಡು ಸ್ಥಳಗಳಲ್ಲಿ ಅವರ ರಾಜಧಾನಿಗಳಿದ್ದವು.

**ಡಚ್ಚರ ಮುಂಧೋರಣೆ:—** ಹಿಂದುಸ್ಥಾನದಲ್ಲಿಯ ರಾಜರೊಡನೆ ಅವರು ಬಹಳ ಸ್ನೇಹಭಾವದಿಂದ ಇದ್ದರು. ಯಾವದೇ ರಾಜಕೀಯ ಮಹತ್ವಾಕಾಂಕ್ಷೆಯನ್ನು ಅವರು ಇಟ್ಟುಕೊಂಡಿದ್ದಿಲ್ಲ. ಪೋರ್ತುಗೀಜರ ಧರ್ಮಾಂಧತೆ ಅವರಲ್ಲಿದ್ದಿಲ್ಲ. ಕೇವಲ ವ್ಯಾಪಾರ ವಿಸ್ತಾರವು ಅವರ ಅಲಂಬನವಾಗಿದ್ದಿತು. ಹಿಂದುಸ್ಥಾನದಲ್ಲಿ ಅಗ್ಗವಾಗಿ ದೊರೆಯುವ ಬಟ್ಟೆಬರೆಗಳನ್ನು ಯುರೋಪದೊಳಗೆ ಒಯ್ದು ಮಾರಿ ಅದರಿಂದ ದೊರೆತ ಲಾಭದಿಂದ ಮಸಾಲೆಯ ಸಾಮಾನುಗಳನ್ನು ಕೊಂಡು ಮತ್ತೆ ಅವನ್ನು ಯುರೋಪ-ದಲ್ಲಿ ಒಯ್ದು ಮಾರಿ ಲಾಭಪಡೆಯುತ್ತಿದ್ದರು. ಇ. ಸ. ೧೬೭೪ರ ಸುಮಾರಿಗೆ ಅವರಿಗೆ ಹಿಂದುಸ್ಥಾನದಲ್ಲಿಯ ವ್ಯಾಪಾರದಿಂದ ೧೨ ಲಕ್ಷ ಗಿಲ್ಡರ ಲಾಭವಾದ ಉಲ್ಲೇಖವಿದೆ. ಇದರಿಂದ ಅವರಿಗೆ ಅಲ್ಲಿ ಎಷ್ಟು ಲಾಭದಾಯಕ ವ್ಯಾಪಾರವಾಗುತ್ತಿತ್ತೆಂಬುದರ ಕಲ್ಪನೆಯು ಸಹಜವಾಗಿ ಆಗಬಹುದು. ಮುಂದೆ ಇ. ಸ. ೧೮೨೫ರಲ್ಲಿ ಆಂಗ್ಲರು ಹಿಂದುಸ್ಥಾನದಿಂದ ಮತ್ತು ಸಿಲೋನದಿಂದ ಡಚ್ಚರನ್ನು ಸಂಪೂರ್ಣವಾಗಿ ಹೊರಗೆ ಹಾಕಿದರು. ಪೂರ್ವದ ಕಡೆಯ ಹೋರಾಟದಲ್ಲಿ ಆಂಗ್ಲರು ಬರುವ ಮುಂಚೆ ಡಚ್ಚರು ಪೋರ್ತುಗೀಜರನ್ನು ಸೋಲಿಸಿದ್ದರು. ಆದರ ಲಾಭವು ಅನಾಯಾಸವಾಗಿ ಆಂಗ್ಲರಿಗೆ ಸಿಕ್ಕಿತು. ಡಚ್ಚರ ಆದರ್ಶ ವಸಾಹತುಗಳ ಅನುಕರಣವನ್ನು ಆಂಗ್ಲರು ಮಾಡಿದರು. ಹಿಂದುಸ್ಥಾನದಲ್ಲಿ ಕ್ರಿಸ್ತೀಧರ್ಮಪ್ರಸಾರದ ಧೋರಣದಿಂದ ಅಲಿಪ್ತವಾಗಿರುವ ಡಚ್ಚರ ಧೋರಣವು ಬಹಳ ಜಾಣತನದ್ದಾಗಿತ್ತು. ಅದರಿಂದ ಆಂಗ್ಲರೂ ಯೋಗ್ಯ ಪಾಠ-ವನ್ನು ಕಲಿತರು.

**ಫ್ರೆಂಚರ ಆಗಮನ:—** ಡಚ್ಚರು ಪೋರ್ತುಗೀಜರನ್ನು ಸೋಲಿಸಿದ್ದುದನ್ನು

ನೋಡಿ ಆಂಗ್ಲರಂತೆ ಫ್ರೆಂಚರೂ ಪೂರ್ವ ಕರಾವಳಿಯ ವ್ಯಾಪಾರ ಮತ್ತು ವಸಾಹತಿಯ ಸ್ಪರ್ಧೆಯ ಕಣದಲ್ಲಿ ಇಳಿದರು. "ಪೋರ್ತುಗೀಜ, ಆಂಗ್ಲರು ಮತ್ತು ಡಚ್ಚರು ಪೂರ್ವದ ಕಡೆಯಿಂದ ತಮ್ಮ ದೇಶಗಳಿಗೆ ತೆಗೆದುಕೊಂಡು ಹೋದ ಅಪಾರ-ವಾದ ಸಂಪತ್ತನ್ನು ನೋಡಿ ಅತಿ ದೂರ ಮತ್ತು ಅಜ್ಞಾತ ದೇಶಗಳಲ್ಲಿಯ ಲಾಭ-ದಾಯಕ ವ್ಯಾಪಾರದಲ್ಲಿ ತಾವೂ ಸೇರಬೇಕೆಂಬ ಪ್ರೇರಣೆಯು ಫ್ರೆಂಚರಿಗೆ ಆಯಿತು" ಎಂದು ಫ್ರೆಂಚ ಇತಿಹಾಸಕಾರನಾದ ಗೀಯಾಂ ಎಂಬವನು ಇ. ಸ. ೧೭೭೪ರಲ್ಲಿ ಬರೆದಿರುವನು. ಪೋರ್ತುಗೀಜ ಮತ್ತು ಸ್ಪ್ಯಾನಿಶ್ ಜನರ ಅನುಕರಣವನ್ನು ಮಾಡುವ ಆದೇಶವನ್ನು ಫ್ರೆಂಚ್ ರಾಜನು ತನ್ನ ಪ್ರಜೆಗಳಿಗೆ ಕೊಟ್ಟನು. ಆ ಪ್ರಕಾರ ಇ. ಸ. ೧೬೧೫ರಲ್ಲಿ ಫ್ರೆಂಚರ ಮೊದಲನೆಯ ವ್ಯಾಪಾರಿ ಕಂಪನಿಯು ಸ್ಥಾಪಿತ-ವಾಯಿತು. ಆದರೆ ಅದರಿಂದ ಕೆಲಸವಾಗಲಿಲ್ಲ. ಇ. ಸ. ೧೬೬೪ ರಲ್ಲಿ ಫ್ರೆಂಚ್ ಅರಸ-ನಾದ ೧೪ ನೆಯ ಲುಯಿಯ ಮುಖ್ಯಮಂತ್ರಿ ಕೋಲಬರ್ಟನು ಈ ಕಂಪನಿಗೆ ತುಂಬ ರಾಜಾಶ್ರಯವನ್ನು ಕೊಟ್ಟು ಅದರಲ್ಲಿ ನವಚೈತನ್ಯವನ್ನು ತುಂಬಿದನು. ಮಡಗಾಸ್ಕರದ ಬಳಿಯಲ್ಲಿಯ ಫ್ರಾನ್ಸ ಮತ್ತು ಬೂರಬೋನ್ ನಡುಗಡ್ಡೆಗಳನ್ನು ( ಮೊರಿಶಸ್ ) ವಶ-ಪಡಿಸಿಕೊಂಡು ಇ. ಸ. ೧೬೭೦ ರಲ್ಲಿ ಫ್ರೆಂಚರು ಹಿಂದುಸ್ಥಾನದ ಕಡೆಗೆ ಹೊರಳಿದರು.

ಫ್ರೆಂಚರ ಮೊದಲನೆಯ ಅಧಿಕಾರಿ ಕ್ಯಾರನ್ನನು ಇ. ಸ. ೧೬೬೭ರಲ್ಲಿ ಕೋಚೀ-ನಕ್ಕೆ ಬಂದಿಳಿದು ಸುರತಕ್ಕೆ ಹೋಗಿದ್ದನು. ಇ. ಸ. ೧೬೬೮ರಲ್ಲಿ ಅವನು ಸುರತದಲ್ಲಿ ಮೊದಲನೆಯ ಫ್ರೆಂಚ ಉಗ್ರಾಣವನ್ನು ಸ್ಥಾಪಿಸಿದನು. ಗೋವಳಕೊಂಡದ ಸುಲ್ತಾ-ನನ ಕಡೆಯಿಂದ ಮಚ್ಛಲೀಪಟ್ಟಣದಲ್ಲಿ ಉಗ್ರಾಣವನ್ನು ತೆಗೆಯುವ ಪರವಾನಿಗೆ ಯನ್ನು ದೊರಕಿಸಿದನು. ಸಿಲೋನದಲ್ಲಿಯ ತ್ರಿಂಕೋಮಾಲಿಯನ್ನು ತೆಗೆದುಕೊಳ್ಳುವ ಪ್ರಯತ್ನದಲ್ಲಿ ಡಚ್ಚರು ಫ್ರೆಂಚರನ್ನು ಹೊಡೆದು ಓಡಿಸಿದರು. ಸೆಂಟ ಥಾಮುಸದಲ್ಲಿ ಡಚ್ಚರು ಫ್ರೆಂಚರನ್ನು ಸೋಲಿಸಿದರು. ಆದರಿಂದ ಫ್ರೆಂಚರು ಬಹಳ ಬಲಹೀನರಾದರು.

**ಮಾರ್ಟಿನನ ಕಾರ್ಯ:—** ಇಂತಹ ಪ್ರತಿಕೂಲ ಪರಿಸ್ಥಿತಿಯಲ್ಲಿ ಬಂದ ಫ್ರೆಂಚ ಅಧಿಕಾರಿ ಮಾರ್ಟಿನನು ಬಹಳ ಮುಂಘೋರಣದಿಂದ ವರ್ತಿಸಿ ಫ್ರೆಂಚರ ಬಲವನ್ನು ಮತ್ತೆ ಚನ್ನಾಗಿ ಸುಧಾರಿಸಿದನು. ಮಾರ್ಟಿನನು ಪಾಂಡಿಚೆರಿಯ ಸ್ಥಾಪನೆಯನ್ನು ಮಾಡಿ ಸೆಂಟ ಥಾಮ ಮತ್ತು ತ್ರಿಂಕೋಮಾಲಿ ಇವುಗಳ ಹಾನಿಯನ್ನು ತುಂಬಿಕೊಂಡನು. ಪೋರ್ತುಗೀಜರ ಇತಿಹಾಸದಲ್ಲಿ ಅಲ್ಬುಕರ್ಕನಿಗೆ ಇದ್ದ ಸ್ಥಾನವೇ ಫ್ರೆಂಚರ ಇತಿಹಾಸದಲ್ಲಿ ಮಾರ್ಟಿನನಿಗೆ ಇದೆ. ಫ್ರೆಂಚ ಹಿಂದುಸ್ಥಾನದ ನಿರ್ಮಾತ-ನೆಂಬ ಅವನ ಪ್ರತೀತಿಯು ಅತ್ಯಂತ ಯೋಗ್ಯವಾಗಿದೆ. ಅರ್ಕಾಟದ ನವಾಬನ ಕಡೆಯಿಂದ ಪೂರ್ವ ಕರಾವಳಿಯಲ್ಲಿ ೧೧೩ ಚೌ. ಮೈಲು ಸ್ಥಳವನ್ನು ದೊರಕಿಸಿ ಪಾಂಡಿಚೇರಿಯಲ್ಲಿ ೧೬೭೪ ರಲ್ಲಿ ಆದರ್ಶ ಫ್ರೆಂಚ ವಸಾಹತನ್ನು ಸ್ಥಾಪಿಸಿದನು.

ಇ. ಸ. ೧೬೯೩ ರಲ್ಲಿ ಡಚ್ಚರು ಪಾಂಡಿಚೆರಿಯ ಮೇಲೆ ದಾಳಿ ಮಾಡಿ ಆ ಸುಂದರ ವಸಾಹತನ್ನು ಹಾಳು ಮಾಡಿದರು. ಆ ಕಾಲಕ್ಕೆ ಫ್ರಾನ್ಸವು ಯುರೋಪ ದಲ್ಲಿ ಇಂಗ್ಲಂಡ, ಹಾಲಂಡ ಮುಂತಾದ ರಾಷ್ಟ್ರಗಳ ವಿರುದ್ಧ ಒಂದು ದೊಡ್ಡ ಯುದ್ಧ

ದಲ್ಲಿ ತೊಡಗಿದ್ದಿತು. ಆ ಯುದ್ಧದ ಕೊನೆಗೆ ಆದ ಒಡಂಬಡಿಕೆಯ ಪ್ರಕಾರ ಪಾಂಡಿಚೆರಿಯು ಪುನಃ ಫ್ರೆಂಚರ ಕಡೆಗೆ ಬಂದಿತು. ಮತ್ತು ಮಾರ್ಟಿನನೇ ಹಿಂದುಸ್ತಾನದಲ್ಲಿಯ ಫ್ರೆಂಚರ ಪ್ರಮುಖನಾಗಿ ಮತ್ತೆ ಬಂದನು (ಇ. ಸ. ೧೭೦೧). ಆ ಕಾಲದಲ್ಲಿ ಮಚ್ಛಲೀಪಟ್ಟಣ, ಚಂದ್ರನಗರ, ಹುಗಳಿ, ಮುಂತಾದ ಸ್ಥಳಗಳು ಫ್ರೆಂಚ ಪ್ರದೇಶದಲ್ಲಿದ್ದವು. ಇ. ಸ. ೧೭೨೫ ರಿಂದ ೩೯ರ ಅವಧಿಯಲ್ಲಿ ಮಾಹೆ, ಮತ್ತು ಕಾರಿಕಲ್ಲ ಇವುಗಳನ್ನು ದೊರಕಿಸಲಾಯಿತು. ಮಾರ್ಟಿನನ ನಂತರ ಫ್ರೆಂಚರ ಹಿನ್ನೆಟ್ಟುವಿಕೆಯು ಮತ್ತೆ ಆರಂಭವಾಗಿ ಇ. ಸ. ೧೭೧೪ರಲ್ಲಿ ಸುರತದ ಉಗ್ರಾಣವನ್ನು ಮುಚ್ಚಿಬಿಡುವ ಪ್ರಸಂಗವು ಅವರಿಗೆ ಬಂದಿತು. ಆದರಿಂದ ಹಿಂದುಸ್ಥಾನದಲ್ಲಿ ಅವರ ಪ್ರತಿಷ್ಠೆಯು ಬಹಳ ಇಳಿಯಿತು. ಅದನ್ನು ಸರಿಗೊಳಿಸುವ ಕಾರ್ಯವನ್ನು ಈ ಮುಂದಿನ ಅಧಿಕಾರಿಗಳು ಮಾಡಿದರು. ಮಾರ್ಟಿನನ ನಂತರದ ಡ್ಯೂಮಾ ( ಇ. ಸ. ೧೭೩೫–೪೧ ) ಮತ್ತು ಡುಪ್ಲೆ ( ೧೭೪೧–೧೭೫೪ ) ಇವರು ವಿಶೇಷ ಕರ್ತೃತ್ವಶಾಲಿಗಳಾಗಿದ್ದರು. ಪುನಃ ಫ್ರೆಂಚರು ವಿಶೇಷವಾಗಿ ಭರಭರಾಟಿಯನ್ನು ಹೊಂದುವಂತೆ ಅವರು ಮಾಡಿದರು. ಆ ಸಂಗತಿಯ ಅರಿಕೆಯು ಮುಂದೆ ಆಗಲಿದೆ.

**ಆಂಗ್ಲರ ಆಗಮನ :—** ಎಲಿಝಾಬೆಥ್ ರಾಣಿಯ ಸನದಿನ ಬಲದಿಂದ ಆಂಗ್ಲ ಜನರು ಈಸ್ಟ ಇಂಡಿಯಾ ಕಂಪನಿಯನ್ನು ಇ. ಸ. ೧೬೦೦ ರಲ್ಲಿ ಹಿಂದುಸ್ಥಾನದಲ್ಲಿ ಸ್ಥಾಪಿಸಿದರು. ಇದಕ್ಕೆ ಮುಂಚೆ ೧೫೭೯ ರಲ್ಲಿ ಮೊದಲನೆಯ ಆಂಗ್ಲ ಜೆಸುಇಟ ಧರ್ಮಪ್ರಚಾರಕನಾದ ಥಾಮಸ್ ಸ್ಟೀವನ್ಸನು ಬಂದಿದ್ದನು. ಅವನು ಗೋವೆಯಲ್ಲಿ ೪೦ ವರ್ಷ ಇದ್ದನು. ಅವನು ಮರಾಠಿಯಲ್ಲಿ ಪದ್ಯರೂಪಿಯಾದ 'ಕ್ರಿಸ್ತೀ ಪುರಾಣ' ವನ್ನು ಬರೆದನಲ್ಲದೆ ಕೊಂಕಣೀ ಭಾಷೆಯ ಮೊದಲನೆಯ ವ್ಯಾಕರಣವನ್ನು ಸಿದ್ಧಗೊಳಿಸಿದನು. ಬಳಿಕ ಇ. ಸ. ೧೫೮೩ ರ ಸುಮಾರಿಗೆ ಕೆಲವು ಆಂಗ್ಲ ವ್ಯಾಪಾರಿಗಳು ಬಂದರು. ಅವರಲ್ಲಿ ಫಿಚ್ಚನೆಂಬ ಆಂಗ್ಲ ಗೃಹಸ್ಥನು ಮಾಡಿದ ಮೊಗಲಕಾಲದ ಲೋಕಸ್ಥಿತಿಯ ವರ್ಣನೆಯು ಮನೋರಂಜಕವಾಗಿದೆ. "ವಿಸ್ತಾರ ಮತ್ತು ಜನವಸತಿ ಇವುಗಳ ದೃಷ್ಟಿಯಿಂದ ಆಗ್ರಾ ಮತ್ತು ಫತ್ತೇಪೂರ ಸಿಕ್ರಿ ಈ ಎರಡು ನಗರಗಳು ಲಂಡನ್ನಿಗಿಂತ ಎಷ್ಟೋ ಪಟ್ಟು ದೊಡ್ಡವಾಗಿವೆ. ಇರಾಣದ ಮತ್ತು ಭಾರತದ ಹೊರಗಿನ ಅನೇಕ ವ್ಯಾಪಾರಿಗಳು ಇಲ್ಲಿ ರೇಶಿಮೆ ಬಟ್ಟೆ ಮತ್ತು ಮುತ್ತು ರತ್ನ ಇವುಗಳ ವ್ಯಾಪಾರವನ್ನು ಮಾಡುತ್ತಾರೆ." ಎಂದು ಅವನು ಬರೆದಿದ್ದಾನೆ. ವೈಯಕ್ತಿಕ ರೀತಿಯಿಂದ ಅಕಬರನ ಓಲಗಕ್ಕೆ ಬಂದ ಕೊನೆಯ ಆಂಗ್ಲನಾದ ಮಿಲ್ಡನ ಹಾಲ ಎಂಬವನು ವ್ಯಾಪಾರಿ ಸವಲತ್ತುಗಳನ್ನು ಕೊಡಬೇಕೆಂಬ ಆಶಯದ ಪತ್ರವನ್ನು ಎಲಿಝಾಬೆಥ ರಾಣಿಯ ಕಡೆಯಿಂದ ತೆಗೆದುಕೊಂಡು ಬಂದು ಅಕಬರನಿಗೆ ಕೊಟ್ಟು ಅವನಿಗೆ ೨೯ ಸುಂದರ ಕುದುರೆಗಳನ್ನು ಕಾಣಿಕೆಯಾಗಿ ಕೊಟ್ಟನು. ಬಾದಶಹನ ದರಬಾರದಲ್ಲಿದ್ದ ಪೋರ್ತುಗೀಜ ಜನರು, ಆಂಗ್ಲರು, "ಕಳ್ಳರೂ, ಗುಪ್ತಚಾರರೂ", ಎಂದು ಬಾದಶಾಹನ ಮನಸ್ಸನ್ನು ಅವರ ವಿಷಯದಲ್ಲಿ ಕಲುಷಿತಗೊಳಿಸುವ ಪ್ರಯತ್ನವನ್ನು ವಿಶೇಷವಾಗಿ ಮಾಡಿದರು. ಆದರೂ

ಆಕಬರನು ಮಿಲ್ಡನಹಾಲನ ಯೋಗ್ಯ ಆಶ್ವಾಸನವನ್ನಿಟ್ಟುಕೊಂಡು ಇ. ಸ. ೧೬೦೫ ರಲ್ಲಿ ವ್ಯಾಪಾರ ಮಾಡುವ ಅನುಜ್ಞೆಯನ್ನು ಕೊಟ್ಟನು. ಸ್ಪೇನದ ವಿರುದ್ಧ ತನ್ನ ಶೂರತನವನ್ನು ಪ್ರದರ್ಶಿಸಿದ ಜಾನ ಹಾಕಿನ್ಸ್ ಎಂಬ ಆಂಗ್ಲ ಪ್ರಮುಖ ನಾವಿಕನು ತನ್ನ ಹೆಪ್ಟರ ಎಂಬ ಹೆಸರಿನ ಹಡಗದಲ್ಲಿ ಇ. ಸ. ೧೬೦೮ರಲ್ಲಿ ಸುರತಕ್ಕೆ ಬಂದಿಳಿದನು. ಅವನಿಗೆ ತುರ್ಕಿ ಮತ್ತು ಪರ್ಶಿಯನ ಇವೆರಡೂ ಭಾಷೆಗಳು ಚನ್ನಾಗಿ ಬರುತ್ತಿದ್ದವು. ಆದರಿಂದ ಆವನ ಮತ್ತು ಜಹಾಂಗೀರನ ನಡುವೆ ಭಾಷಾಂತರಕಾರನ ಸಹಾಯ ವಿಲ್ಲದೆ ಸಂಭಾಷಣೆಯು ಜರುಗಿತು. ಹಿಂದುಸ್ತಾನದಲ್ಲಿಯ ಜೆಸುಇಟ ಧರ್ಮಪ್ರಚಾ ರಕರು ಹಾಕಿನ್ಸನಿಗೆ ಬಹಳ ವಿರೋಧ ಮಾಡಿದರು. ಆದರಿಂದ ಬೇಸರಗೊಂಡು ಇ. ಸ. ೧೬೧೧ ರಲ್ಲಿ ಆವನು ತನ್ನ ದೇಶಕ್ಕೆ ಮರಳಿಹೋದನು.

**ರೋನ ರಾಯಭಾರ :—** ಹಿಂದುಸ್ಥಾನದಲ್ಲಿ ಆಂಗ್ಲ ರಾಷ್ಟ್ರದ ಪ್ರತಿನಿಧಿ ಯಾಗಿ ಬಂದ ಮೊದಲನೆಯ ಹೆಸರಾಂತ ರಾಯಭಾರಿ ಎಂದರೆ ಸರ್ ಥಾಮಸ್ ರೊ ( ಆವನು ಇ. ಸ. ೧೬೧೫ ರಲ್ಲಿ ಇಲ್ಲಿಗೆ ಬಂದು ೧೬೧೯ ರಲ್ಲಿ ತಿರುಗಿ ಹೋದನು ). ಆವನು ಇಲ್ಲಿಗೆ ಬಂದಾಗ ಮೊಗಲ ದರ್ಬಾರದಲ್ಲಿ ಆಂಗ್ಲರ ವಿರುದ್ಧ ವಿಶೇಷವಾದ ಅಪಪ್ರಚಾರವನ್ನು ನಡೆಸಿದ್ದರು. ಆದರಿಂದ ರೋನ ಕಾರ್ಯವು ಬಹಳ ಬಿಕ್ಕಟ್ಟಿನದಾಗಿ ದ್ದಿತು. ಆದರೆ ರೋ ಇವನು ಹುಟ್ಟು ಮುತ್ಸದ್ದಿಯಾದುದರಿಂದ ದರಬಾರದವರ ಕೂಡ ನಡೆದುಕೊಳ್ಳುವಲ್ಲಿ ಬಹಳ ಜಾಣನಾಗಿದ್ದನು. ಆತನ ಪ್ರಯತ್ನಗಳಿಗೆ ವಿಶೇಷವಾದ ಯಶಸ್ಸುಂಟಾಗಲಿಲ್ಲ. ಇತರ ಪರಕೀಯ ರಾಷ್ಟ್ರಗಳ ವ್ಯಾಪಾರಿಗಳಿಗೆ ದೊರೆಯುತ್ತಿದ್ದ ಸವಲತ್ತುಗಳನ್ನು ಆಂಗ್ಲರಿಗೂ ಕೊಡಲಾಗುವದೆಂದು ಜಹಾಂಗೀರನು ರೋನಿಗೆ ಆಶ್ವಾಸನವಿತ್ತನು. ಈ ಪ್ರಸಂಗದಲ್ಲಿ ರೋನು ತನ್ನ ದೇಶಬಾಂಧವರಿಗೆ ಮಾಡಿದ ಉಪದೇಶವು ಆತನ ದೂರದೃಷ್ಟಿಯ ನಿದರ್ಶನವಾಗಿದೆ. “ವ್ಯಾಪಾರ ಮತ್ತು ಯುದ್ಧ ಇವು ಒಂದಕ್ಕೊಂದು ಹೊಂದಿಕೆಯಾಗದ ಸಂಗತಿಗಳು. ನಾವು ನಮ್ಮ ವ್ಯವಹಾರ ವನ್ನು ಸಮುದ್ರದ ಮಟ್ಟಿಗೆ ಮರ್ಯಾದಿತವಾಗಿಟ್ಟುಕೊಳ್ಳಬೇಕೆಂದು ನನ್ನ ನಿಶ್ಚಿತ ಮತವಿದೆ. ಪೋರ್ತುಗೀಜರು ಹಿಂದುಸ್ಥಾನದಲ್ಲಿ ಸೈನ್ಯವನ್ನಿಟ್ಟು ಅಲ್ಲಿಯ ಪ್ರದೇಶ ವನ್ನು ವಶಪಡಿಸಿಕೊಳ್ಳುವ ಉದ್ಯೋಗವನ್ನೇನು ಮಾಡಿದರೋ ಅದರಲ್ಲಿ ಅವರಿಗೆ ಯಾವ ಲಾಭವೂ ಆಗಿಲ್ಲ. ಡಚ್ಚರದಾದರೂ ಅದರಂತೆಯೇ. ಲಾಭವು ಬೇಕಾಗಿದ್ದರೆ ಸಮುದ್ರದ ಮೇಲಿನ ವ್ಯಾಪಾರವನ್ನು ಶಾಂತತಾಮಯ ಮಾರ್ಗದಿಂದ ಮಾಡುವಷ್ಟು ಎಚ್ಚರಿಕೆಯನ್ನು ಇಟ್ಟುಕೊಳ್ಳಬೇಕು. ನಾವು ಈ ತತ್ವದ ಅನುಕರಣವನ್ನು ಒಂದು ನಿಯಮವೆಂದು ಮಾಡಬೇಕು. ಹಿಂದುಸ್ಥಾನದಲ್ಲಿ ನಮ್ಮ ಸಿಬ್ಬಂದಿಯನ್ನಿಟ್ಟು ತಟಬಂದಿಯನ್ನು ಮಾಡುವದು ದೊಡ್ಡ ತಪ್ಪು, ಎಂದ ನಿಃಸಂಶಯವಾಗಿ ತಿಳಿಯಿರಿ ” ಎಂದು ಆವನು ಬರೆದಿದ್ದಾನೆ. ಆದರೆ ಆಂಗ್ಲರು ಈ ಉಪದೇಶದಂತೆ ನಡೆದಿದ್ದರೆ ಹಿಂದುಸ್ಥಾನದಲ್ಲಿ ಅವರ ರಾಜ್ಯಸ್ಥಾಪನೆಯೇ ಆಗುತ್ತಿ- ದ್ದಿಲ್ಲ. ಆಂಗ್ಲರಿಗೆ ರೋನ ಉಪದೇಶವು ರುಚಿಸಲಿಲ್ಲ. ಇ. ಸ. ೧೬೧೨ ರಲ್ಲಿ ಸುರತ ದಲ್ಲಿ ಅವರು ಪೋರ್ತುಗೀಜ ಹಡಗುಪಡೆಯನ್ನು ಸೋಲಿಸಿದರು. ಇ. ಸ. ೧೬೧೨

ರಲ್ಲಿ ಅವರು ಓರ್ಮುಝು ( ಇರಾಣ ಆಖಾತದಲ್ಲಿಯದು ) ವನ್ನು ವಶಪಡಿಸಿಕೊಂಡರು. ಮುಂದೆ ೧೬೮೭ ರಲ್ಲಿ ಮುಂಬಯಿಯು ಕೈವಶವಾಗುವವರೆಗೆ, ಸುರತವೇ ಆಂಗ್ಲರ ಮುಖ್ಯ ಠಾಣೆಯಾಗಿತ್ತು.



ಸರ್ ಥಾಮಸ್ ರೋ

**ಆಂಗ್ಲರು ಮತ್ತು ಡಚ್ಚರು** :— ಮಸಾಲೆಯ ನಡುಗಡ್ಡೆಗಳಲ್ಲಿ ಪ್ರವೇಶಿಸುವ ಪ್ರಯತ್ನವನ್ನು ಆಂಗ್ಲರೂ ಮಾಡಿ ನೋಡಿದರು. ಆದರೆ ಅವರಿಗೆ ಅದರಲ್ಲಿ ಯಶಸ್ಸು ದೊರೆಯಲಿಲ್ಲ. ಇ. ಸ. ೧೬೨೩ ರಲ್ಲಿ ಆಂಬೋಯಿನಾದಲ್ಲಿ ಡಚ್ಚರು ಆಂಗ್ಲರನ್ನು ಪರಾಜಯಗೊಳಿಸಿದರು. ಆಗ ಆಂಗ್ಲರು ಆ ನಡುಗಡ್ಡೆಗಳ ಆಶೆಯನ್ನು

ಬಿಟ್ಟು ತಮ್ಮ ಲಕ್ಷವನ್ನೆಲ್ಲ ಹಿಂದುಸ್ಥಾನದ ಕಡೆಗೆ ಹೊರಳಿಸಿದರು. ಮೆಲ್ಲಮೆಲ್ಲನೆ ಮಚ್ಛಲೀಪಟ್ಟಣ (೧೬೧೧), ಸುರತ (೧೬೧೩), ಮದ್ರಾಸ (೧೬೩೯), ಮುಂಬಯಿ (೧೬೬೮), ಕಲಕತ್ತೆ (೧೬೯೦) ಇವುಗಳಲ್ಲಿ ಆಂಗ್ಲರು ತಮ್ಮ ವಸಾಹತುಗಳನ್ನು ಸ್ಥಾಪಿಸಿದರು. ಇಂಗ್ಲಂಡದ ೨ನೆಯ ಚಾರ್ಲಸ ಅರಸನು ವರ್ಷಕ್ಕೆ ೧೦ ಪೌಂಡು ಗಳ ಬಾಡಿಗೆಯ ಕರಾರಿನಿಂದ ಮುಂಬೈ ನಡುಗಡ್ಡೆಯನ್ನು ಈಸ್ಟ ಇಂಡಿಯಾ ಕಂಪ-ನಿಗೆ ಕೊಟ್ಟನು. ಹೀಗೆಯೇ ಮದ್ರಾಸ ಮತ್ತು ಕಲಕತ್ತಾ ಇವುಗಳನ್ನಾದರೂ ಅನುಕ್ರಮವಾಗಿ ಚಂದ್ರನಗರದ ರಾಜ ಮತ್ತು ಬಂಗಾಲದ ನವಾಬ ಇವರ ಕಡೆ-ಯಿಂದ ಕಂಪನಿಯು ಬಾಡಿಗೆಯ ಕರಾರಿನಿಂದ ದೊರಕಿಸಿತು. ಇಂಗ್ಲಂಡದ ಆಗಿನ ಕಾಲದ ಸರ್ವಾಧಿಕಾರಿಯಾದ ಕ್ರಾಮುವೆಲ್ಲನು ಯುರೋಪದಲ್ಲಿ ಹಾಲಂಡದ ಪರಾ-ಭವವನ್ನು ಮಾಡಿ ಅಂಬೋಯಿನಾದಲ್ಲಿ ಆದ ಕೊಲೆಯ ಪೂರ್ಣವಾದ ಸೇಡನ್ನು ತೀರಿಸಿಕೊಂಡನು. ಈ ವಿಜಯದಿಂದ ಆಂಗ್ಲರ ಪರಿಸ್ಥಿತಿಯು ಬಹಳ ಬದಲಾಗಿ ಬಿಟ್ಟಿತು. ಆದುದರಿಂದಲೇ ಕಂಪನಿಯ ಅಧ್ಯಕ್ಷನಾಗಿದ್ದ ಚಾಯಿಲ್ಡನು ಇ. ಸ. ೧೬೮೭ ರಲ್ಲಿ ( ಹಿಂದುಸ್ಥಾನದಲ್ಲಿ ಔರಂಗಜೇಬನಂಥ ಬಲಾಢ್ಯ ಬಾದಶಹನು ರಾಜ್ಯವಾಳುತ್ತಿದ್ದ ಕಾಲದಲ್ಲಿ ) ಬಹಿರಂಗವಾಗಿ " ಭದ್ರವಾದ ತಳಹದಿಯ ಮೇಲೆ ಚಿರಸ್ಥಾಯಿಯಾದ ಆಂಗ್ಲ ರಾಜ್ಯವನ್ನು ಹಿಂದುಸ್ಥಾನದಲ್ಲಿ ಸ್ಥಾಪಿಸುವ ಪ್ರಯತ್ನ ವನ್ನು ನಾವು ಈಗ ಮಾಡಲೇಬೇಕು " ಎಂಬ ಒಂದು ಸಂಕಲ್ಪವನ್ನು ವ್ಯಕ್ತಪಡಿ ಸಿದನು.

ಮುಂದಿನ ಇತಿಹಾಸದಿಂದ ಆಂಗ್ಲರಾಷ್ಟ್ರಕ್ಕೆ ರೋನ ಅಭಿಪ್ರಾಯಕ್ಕಿಂತಲೂ ಚಾಯಿಲ್ಡನ ಮಾತೇ ಹೆಚ್ಚು ಗ್ರಾಹ್ಯವೆನಿಸಿತೆಂದು ಕಂಡು ಬರುತ್ತದೆ.

**ಧೋರಣೀ ಆಂಗ್ಲರು:—** ಹೀಗಿದ್ದರೂ ಆಂಗ್ಲರು ತಮ್ಮ ರಾಜಕೀಯ ಮಹತ್ವಾಕಾಂಕ್ಷೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಬಹಳ ಧೂರ್ತತನದಿಂದ ಮತ್ತು ಧೀರತೆಯಿಂದ ತಮ್ಮ ಅಡಿಗಳನ್ನು ಇಟ್ಟರು. ಪೋರ್ತುಗೀಜರ ಅಳಿಗಾಲದ ಕಾರಣ ಗಳು ಅವರಿಗೆ ಗೊತ್ತಿದ್ದವು. ಅಂತೆಯೇ ಅವರು ಕ್ರಿಸ್ತೀಧರ್ಮ ಪ್ರಸಾರದ ಪ್ರಯತ್ನ ವನ್ನು ಎಂದೂ ಮಾಡಲಿಲ್ಲ. ಡಚ್ಚರ ಅನುಕರಣವನ್ನು ಮಾಡಿ ಅವರು ಆದರ್ಶ ವಸಾಹತುಗಳನ್ನು ರಚಿಸಿದರು. ಇಲ್ಲಿಯ ರಾಜರೊಡನೆ ಅವರು ಬಹಳ ಗೌರವ ದಿಂದ ನಡೆದುಕೊಂಡರು.

ಕಂಪನಿಯು ಅಲ್ಪಾವಧಿಯಲ್ಲಿಯೇ ಹಿಂದುಸ್ಥಾನದಲ್ಲಿ ಬಹಳ ಹಣವನ್ನು ಸಂಪಾದಿಸಿತು. ಇ. ಸ. ೧೬೬೨ ರಲ್ಲಿ ನೂರಕ್ಕೆ ೨೦ ಮತ್ತು ೧೬೬೫ ರಲ್ಲಿ ನೂರಕ್ಕೆ ೪೦ ರಷ್ಟು ಲಾಭಾಂಶವನ್ನು ತನ್ನ ಪಾಲುಗಾರರಿಗೆ ಕೊಟ್ಟಿತು. ಕಂಪನಿಯ ರಾಜ-ಕೀಯ ಅಧಿಕಾರವು ಬೆಳೆಯಿತು. ಇ. ಸ. ೧೬೬೬ ರಲ್ಲಿ ಮದ್ರಾಸದ ಏಜಂಟನಿಗೆ ಗವ್ಹರ್ನರನ ಹುದ್ದೆಯು ದೊರೆಯಿತು. ಇ.ಸ. ೧೬೮೭ ರಲ್ಲಿ ಮುಂಬಯಿಯು ಮುಖ್ಯ ಠಾಣೆಯಾಯಿತು. ಮತ್ತು ಸುರತದ ಅಧ್ಯಕ್ಷನು ಮುಂಬಯಿ ನಡುಗಡ್ಡೆಯ ಗವ್ಹರ್ನರನಾದನು.

**ಎಚ್ಚರಗೇಡಿ ಭಾರತೀಯರು :–** ಹಿಂದುಸ್ಥಾನಕ್ಕೆ ಬಂದ ಯುರೋಪಿಯನ್ ಜನರ ಬಗ್ಗೆ ಭಾರತದ ರಾಜ್ಯಕರ್ತರು ಅನುಸರಿಸಿದ್ದ ಧೋರಣವು ಎಷ್ಟು ತಪ್ಪಾಗಿ-ತ್ತೆಂಬುದು ನೋಡುವಂತಿದೆ. ಮೊಗಲ ಬಾದಶಾಹ ಮತ್ತು ದಕ್ಷಿಣ ಹಿಂದುಸ್ಥಾನದಲ್ಲಿಯ ರಾಜರು ಯುರೋಪಿಯನ್ನರಿಗೆ ತುಂಬ ವ್ಯಾಪಾರಿ ಸವಲತ್ತುಗಳನ್ನು ಕೊಟ್ಟರು. ಇಷ್ಟೇ ಅಲ್ಲದೆ ಕ್ರಿಸ್ತೀಧರ್ಮ ಪ್ರಸಾರಕ್ಕೂ ಎಡೆ ಮಾಡಿಕೊಟ್ಟರು. ಹೀಗಿರುವಾಗ ಯುರೋಪಿಯನ್ನರು ಮಾತ್ರ ಕೃತಘ್ನತೆಯಿಂದ ವರ್ತಿಸಿದರು. ಯಾರ ರಾಜ್ಯದಲ್ಲಿ ಮತ್ತು ಯಾರ ಅನುಮತಿಯಿಂದ ವ್ಯಾಪಾರಮಾಡಿ ಅಪಾರ ಲಾಭವನ್ನು ಮಾಡಿಕೊಳ್ಳುತ್ತಿದ್ದರೋ ಅವರ ಮೇಲೆಯೇ ಯುರೋಪಿಯನ್ನರು ತಮ್ಮ ಕೈ ಎತ್ತಿದರು. ಸುಂಕ ತಪ್ಪಿಸುವದು, ಕಳ್ಳವ್ಯಾಪಾರ ಮಾಡುವದು, ಲಂಚ ತಿನ್ನುವದು ಇವೇ ಮೊದಲಾದವುಗಳನ್ನು ಯುರೋಪಿಯನ್ನರು ಮಾಡಿದರು. ಎಲ್ಲಕ್ಕಿಂತಲೂ ಹೆಚ್ಚಿನದೆಂದರೆ ಮಕ್ಕಾಯಾತ್ರೆಗೆ ಹೊರಟ ಮುಸಲ್ಮಾನ ಯಾತ್ರಿಕರ ಹಡಗುಗಳನ್ನು ಸೂರೆಗೊಳ್ಳಲು ಕೂಡ ಅವರು ಹಿಂಜರಿಯಲಿಲ್ಲ. ಆದರಿಂದ ಶಾಹಾಜಹಾನನು ಪೋರ್ತುಗೀಜರ ಮೇಲೆ ಮತ್ತು ಔರಂಗಜೇಬನು ಆಂಗ್ಲರ ಮೇಲೆ ಶಸ್ತ್ರವನ್ನೆತ್ತಿದರು. ಆದರೆ ಪ್ರಬಲ ಹಡಗುಪಡೆಯು ಇಲ್ಲದ ಮೂಲಕ ಬಲಾಢ್ಯ ಮೊಗಲ ಬಾದಶಾಹ-ನಿಗೂ ಕೂಡ ಯುರೋಪಿಯನ್ನರನ್ನು ಚನ್ನಾಗಿ ಹಣಿಯುವದಾಗಲಿಲ್ಲ. ತದ್ವಿರುದ್ಧ ಮಕ್ಕಾ ಯಾತ್ರಿಕರನ್ನು ಸಂರಕ್ಷಿಸುವ ಆಶ್ವಾಸನವನ್ನು ಯುರೋಪಿಯನ್ನರಿಂದ ತೆಗೆದುಕೊಂಡು ಅದರಲ್ಲಿಯೇ ಸಮಾಧಾನ ಹೊಂದಿದರು. ಯುರೋಪಿಯನ್ನರಿಗೆ ಸರಿಸಾಟಿಯಾದ ಹಡಗುಪಡೆಯನ್ನು ಕಟ್ಟಬೇಕೆಂಬ ಮಾತಿನ ಮಹತ್ವವು ಮೊಗ-ಲರಿಗೆ ಹೊಳೆಯದಿದ್ದರೂ ಶಿವಾಜಿಯು ಮಾತ್ರ ಅತ್ಯಂತ ಕಾರ್ಯಕ್ಷಮವಾದ ಮರಾಠಾ ಹಡಗುಪಡೆಯನ್ನು ಕಟ್ಟಿ ಪಶ್ಚಿಮ ಕರಾವಳಿಯ ಮೇಲಿನ ಯುರೋಪಿ-ಯನ್ನರನ್ನು ಹಿಡಿತದಲ್ಲಿ ಇಟ್ಟನು.

ಔರಂಗಜೇಬನಂತಹ ಬಲಾಢ್ಯ ಬಾದಶಾಹನು ರಾಜ್ಯವಾಳುತ್ತಿರುವಾಗ ಆಂಗ್ಲರು ಸುಂಕವನ್ನು ತಪ್ಪಿಸಿದರು. ಸ. ೧೬೮೬ ರಲ್ಲಿ ಹುಗಳಿ ಮತ್ತು ಸ. ೧೬೮೭ ರಲ್ಲಿ ಬಾಲಾಸೋರ ಎಂಬ ಮೊಗಲರ ವ್ಯಾಪಾರಿ ಕೇಂದ್ರಗಳನ್ನು ಆಂಗ್ಲರು ಸುಟ್ಟು ಲೂಟಿಮಾಡಿ ನೆಲಸಮಗೊಳಿಸಿದರು! ಕಾರಣವೇನು? ಮೊಗಲ ಅಧಿಕಾರಿಗಳು ಆಂಗ್ಲರಿಂದ ಒತ್ತಾಯದಿಂದ ಸುಂಕವನ್ನು ಆಕರಿಸುತ್ತಿದ್ದರೆಂದು! ಚಾಯಿಲ್ಡನ ರಾಜ್ಯಸ್ಥಾಪನೆಯ ಹುಚ್ಚು ಈ ವೇಳೆಯಲ್ಲಿ ಆಂಗ್ಲರ ತಲೆಯಲ್ಲಿ ಕುಣಿಯುತ್ತಿತ್ತು. ಅದರ ಪರಿಣಾಮವಿದು. ಕೊನೆಗೆ ಮೊಗಲ ಅಧಿಕಾರಿಗಳು ಸುರತದ ಉಗ್ರಾಣವನ್ನು ಸುಡಿಸಿ ಆಂಗ್ಲ ಪ್ರಮುಖರನ್ನು ಕಾರಾವಾಸದಲ್ಲಿಟ್ಟರು. ಬಾದಶಾಹನ ಕ್ಷಮೆ ಬೇಡಿ, ದಂಡವನ್ನು ತೆತ್ತಬಳಿಕ ಈ ಆಂಗ್ಲ ಅಧಿಕಾರಿಗಳ ಬಿಡುಗಡೆಯಾಯಿತು.

ಈ ರೀತಿ ಮಾಡುವ ಈ ಯುರೋಪಿಯನ್ ಜನರಿಗೆ ಸಡಿಲು ಬಿಡುವಲ್ಲಿ ಮೊಗಲ ಇತ್ಯಾದಿ ರಾಜರು ಬಹಳ ಅದೂರ ದರ್ಶಿತ್ವವನ್ನು ತೋರಿಸಿದರು. ಇಲ್ಲಿಯ ಜನರ ಹುಚ್ಚು ಔದಾರ್ಯವು ಮತ್ತು ಒಳ್ಳೆಯತನ ಈ ಗುಣಗಳು ದೋಷಗಳಾದವು.

ಈ ದೋಷಗಳ ಲಾಭವನ್ನು ಪಡೆದು ಆಂಗ್ಲರು ಹಿಂದುಸ್ಥಾನದ ಒಡೆಯರಾದರು.

## ಅವತರಣಿಕೆ

ಮೊಗಲ ಆಡಳಿತದಲ್ಲಿ ಹಿಂದುಸ್ಥಾನಕ್ಕೆ ಬಂದ ಯುರೋಪಿಯನ್ನರ ತಲೆಯಲ್ಲಿ ಯಾವ ವಿಚಾರಗಳಿದ್ದವೆಂಬುದು ಕೆಳಗಿನ ಅವತರಣಿಕೆಯಿಂದ ಲಕ್ಷ್ಯದಲ್ಲಿ ಬರಬಹುದು. ಬೋಲ್ಟನೆಂಬ ಆ ಕಾಲದ ಯುರೋಪಿಯನ್ನನ ಲೇಖದಲ್ಲಿಯ ಕೆಲವು ಭಾಗವನು ಕೆಳಗೆ ಕೊಡಲಾಗಿದೆ.

" ಮೊಗಲ ಸಾಮ್ರಾಜ್ಯದಲ್ಲಿ ಬೆಳ್ಳಿ ಬಂಗಾರಗಳ ಗಟ್ಟಿಗಳು ಹರಿದಾಡುತ್ತವೆ. ಈ ಸಾಮ್ರಾಜ್ಯದ ಸಂರಕ್ಷಣೆಯ ವ್ಯವಸ್ಥೆ ಏನೂ ಇಲ್ಲ. ಆದರಿಂದ ಅದು ದುರ್ಬಲವಾಗಿದೆ. ನಾವಿಕ ಪ್ರಭುತ್ವವು ಕೈಯಲ್ಲಿರುವ ಯುರೋಪಿಯನ್ ರಾಜನು ಬಂಗಾಲದಂತಹ ಸಮೃದ್ಧ ಪ್ರಾಂತದ ಮೇಲೆ ಇಂದಿನವರೆಗೆ ದಾಳಿಯನ್ನು ಹೇಗೆ ಮಾಡಿಲ್ಲವೊ ಆಶ್ಚರ್ಯಕರವಾಗಿದೆ. ಒಂದೇ ಹೊಡೆತಕ್ಕೆ ದೊಡ್ಡ ಸಂಪತ್ತಿಯು ಕೈಗೆ ಬರಬಹುದು. ಅದರ ಮುಂದೆ ಬ್ರಾಝಿಲ್ ಮತ್ತು ಪೇರು ಈ ದೇಶಗಳಲ್ಲಿಯ ಗಣಿಯೊಳಗಿನ ಬೆಳ್ಳಿ ಬಂಗಾರವು ಕಡಿಮೆ ಬೀಳಬಹುದು. ಮೊಗಲರ ಧೋರಣೆಯು ಅವಿಚಾರಿಯಾಗಿದೆ. ಅವರ ಸೈನ್ಯದ ಪರಿಸ್ಥಿತಿಯು ಸಮಾಧಾನಕರವಿಲ್ಲ. ಅವರ ಹತ್ತಿರ ಹಡಗು-ಪಡೆಯು ಇಲ್ಲ. ಒಂದೇ ಸವನೆ ಬಂಡಾಯಗಳು ನಡೆಯುತ್ತವೆ. ಅವರ ನದಿಗಳು ಮತ್ತು ನಗರಗಳು ಪರಕೀಯರಿಗೆ ತೆರವಾಗಿವೆ. ಸ್ಪಾನಿಶ್ ಜನರು ಅಮೇರಿಕೆಯಲ್ಲಿಯ ರೆಡ್ಇಂಡಿಯನ್ನರನ್ನು ಸುಲಭವಾಗಿ ಜಯಿಸಿದಂತೆ ಹಿಂದೀ ಜನರನ್ನೂ ಸುಲಭವಾಗಿ ಜಯಿಸಬಹುದು. "

## ಅಭ್ಯಾಸ

೧. ಕಾರಣಗಳನ್ನು ಕೊಡಿರಿ :—
   (ಅ) ಪೋರ್ತುಗೀಜ ಮತ್ತು ವಿಜಯನಗರ ಇವುಗಳ ಸಂಬಂಧವು ಬಹಳ ಸ್ನೇಹದ್ದಾಗಿತ್ತು.
   (ಆ) ಪೋರ್ತುಗೀಜರ ಮುಂದೆ ಝಾಮೋರಿನನ ಆಟವು ಸಾಗಲಿಲ್ಲ.
   (ಇ) ಅಲ್ಬುಕರ್ಕನು ಗೋವೆಯನ್ನು ಪೋರ್ತುಗೀಜರ ಮುಖ್ಯ ಠಾಣೆಯನ್ನಾಗಿ ಮಾಡಿದನು.
   (ಈ) ಮಾರ್ಟಿನನನ್ನು ಫ್ರೆಂಚರ ಅಲ್ಬುಕರ್ಕನೆಂದು ಕರೆಯುತ್ತಾರೆ.
   (ಉ) ಡಚ್ಚರು ಹಿಂದುಸ್ಥಾನವನ್ನು ದುರ್ಲಕ್ಷಿಸಿದರು.

೨. ಅಕಬರನ ದರಬಾರಕ್ಕೆ ಹೋಗಿದ್ದ ಜೆಸುಇಟ ಧರ್ಮ ಪ್ರಚಾರಕರು ಯಾವ ಪ್ರಯತ್ನವನ್ನು ಮಾಡಿದರು ? ಯಾಕೆ ? ಅದರ ಪರ್ಯವಸಾನವು ಏನಾಯಿತು ?

೩. ಹಿಂದುಸ್ಥಾನದಲ್ಲಿ ಪೋರ್ತುಗೀಜರ ಅವನತಿಯ ಕಾರಣಗಳು ಏನು ?

೪. ಹಾಕಿನ್ಸ ಮತ್ತು ರೋ ಇವರು ಯಾವ ರಾಯಭಾರವನ್ನು ಮಾಡಿದರು ? ಅದಕ್ಕೆ ಎಷ್ಟರ ಮಟ್ಟಿಗೆ ಯಶಸ್ಸು ದೊರೆಯಿತು ?

ರೋ ಮತ್ತು ಚಾಯಿಲ್ಡ ಇವರ ರಾಜಕೀಯ ಮತಗಳಲ್ಲಿಯ ಅಂತರವನ್ನು ಸ್ಪಷ್ಟ

೬. ಬೋಲ್ಟ ಎಂಬ ಯುರೋಪಿಯನ್ ಲೇಖಕನ ಅಭಿಪ್ರಾಯದಲ್ಲಿ ಹಿಂದುಸ್ಥಾನದಲ್ಲಿಯ ಪರಿಸ್ಥಿತಿಯು ರಾಜ್ಯಸ್ಥಾಪನೆಗೆ ಅನುಕೂಲವಾಗಿತ್ತು ; ಅವನಿಗೆ ಹೀಗೇಕೆ ಅನಿಸಿತು ?

## ೧೩ನೆಯ ಪಾಠ

# ಮೊಗಲ ಕಾಲದ ಭಾರತ

**ಪ್ರಾಸ್ತಾವಿಕ:—** ಇ. ಸ. ೧೫೨೬ ರಲ್ಲಿ ಬಾಬರನು ಪಾನಿಪತ್ತದ ಯುದ್ಧದಲ್ಲಿ ಇಬ್ರಾಹಿಮ ಲೋದಿಯನ್ನು ಸೋಲಿಸಿದನು. ಇದಕ್ಕೂ ಮುಂಚೆ ೩೨೦ ವರ್ಷಗಳ ವರೆಗೆ ದಿಲ್ಲಿಯು ಮುಸಲ್ಮಾನ ಸುಲ್ತಾನರ ರಾಜಧಾನಿಯಾಗಿತ್ತು. ಸ. ೧೨೦೬ ರಲ್ಲಿ ಕುತುಬುದ್ದೀನ ಐಬಕನು ದಿಲ್ಲಿಯಲ್ಲಿ ಸುಲ್ತಾನರ ರಾಜ್ಯವನ್ನು ಸ್ಥಾಪಿಸಿದನು. ಆನಂತರದ ೩೨೦ ವರ್ಷದ ಅವಧಿಯಲ್ಲಿ ಈ ತುರ್ಕ ವಿಜೇತರು ಭಾರತದೊಳಗಿನ ಬಹುತರ ಎಲ್ಲ ಹಿಂದು ಅರಸರನ್ನು ಸೋಲಿಸಿ ಪಶ್ಚಿಮದಲ್ಲಿ ಅಟಕ, ಪೂರ್ವಕ್ಕೆ ಆಸಾಮ, ದಕ್ಷಿಣಕ್ಕೆ ಕನ್ಯಾಕುಮಾರಿ, ಉತ್ತರಕ್ಕೆ ಪಂಜಾಬ ಇವುಗಳ ಮಧ್ಯದೊಳಗಿನ ವಿಸ್ತಾರವಾದ ಪ್ರದೇಶವನ್ನು ಇಸ್ಲಾಮಿ ಆಡಳಿತಕ್ಕೆ ಒಳಪಡಿಸಿದ್ದರು. ಅಲ್ಲಾವುದ್ದೀನ ಖಿಲಜಿ ಮತ್ತು ಮಹಮ್ಮದ ಬಿನ್ ತುಗಲಕ ಇವರು ಈ ವಿಸ್ತಾರವಾದ ಪ್ರದೇಶದ ಮೇಲೆ ತಮ್ಮ ರಾಜಕೀಯ ಪ್ರಭುತ್ವವನ್ನು ಸ್ಥಾಪಿಸುವ ಪ್ರಯತ್ನ ಮಾಡಿದರು. ಆದರೆ ಅವರ ವ್ಯವಸ್ಥೆಯು ಬಹು ದಿವಸ ಬಾಳಲಿಲ್ಲ. ಮುಸಲ್ಮಾನರು ಸಂಪಾದಿಸಿದ ದೊಡ್ಡ ದೊಡ್ಡ ವಿಜಯಗಳಿಂದ ಹಿಂದೂ ರಾಜರು ಸೈನಿಕ ದೃಷ್ಟಿಯಿಂದ ದುರ್ಬಲರಾಗಿದ್ದರೆಂದು ಮಾತ್ರ ಸಿದ್ಧವಾಗುತ್ತದೆ.

ಆದರೂ ಮುಸಲ್ಮಾನರ ವಿಜಯವು ಕೇವಲ ಬಾಹ್ಯಸ್ವರೂಪದ್ದಾಗಿತ್ತು. ಕೆಲವು ಮುಖ್ಯ ನಗರಗಳು ಮತ್ತು ಕೋಟೆಕೊತ್ತಲಗಳು ಮಾತ್ರ ಅವರ ಕೈವಶವಾಗಿದ್ದವು. ಭಾರತದೊಳಗಿನ ಉಳಿದ ಎಲ್ಲ ಗ್ರಾಮಸಂಸ್ಥೆಗಳಿಗೆ ಸ್ವಲ್ಪ ಕೂಡ ಧಕ್ಕೆ ತಟ್ಟಿದ್ದಿಲ್ಲ. ಮುಸಲ್ಮಾನರು ಹಿಂದುಗಳ ಅನೇಕ ಪವಿತ್ರ ಮಂದಿರಗಳನ್ನು ಸುಲಿದು ನಾಶಮಾಡಿದರು. ಕೆಲವು ಮಂದಿರಗಳ ಸ್ಥಳದಲ್ಲಿ ಮಸೀದೆಗಳನ್ನು ಕಟ್ಟಿದರು. ಆದರೂ ಹಿಂದೂ ಬಹುಜನ ಸಮಾಜದ ಧರ್ಮವನ್ನೂ ಸಂಸ್ಕೃತಿಯನ್ನೂ ಈ ಮುಸಲ್ಮಾನ ಆಕ್ರಮಕರು ಅಳಿಸಿಬಿಡಲು ಶಕ್ತರಾಗಲಿಲ್ಲ. ಭಾರತದ ಹೊರಗಿನ ದಾಳಿಗಳಲ್ಲಿ ಅವರು ತಾವು ಗೆದ್ದ ಜನರ ಧರ್ಮಸಂಸ್ಕೃತಿಗಳನ್ನು ನಷ್ಟಪಡಿಸುವಲ್ಲಿ ಯಶಸ್ವಿಗಳಾದಂತೆ ಭಾರತದಲ್ಲಿ ಯಶಸ್ವಿಗಳಾಗಲಿಲ್ಲ. ಸುಲ್ತಾನಶಾಹಿಯು ಮೂಲತಃ

ದುರ್ಬಲವಾಗಿತ್ತು. ಆದಕ್ಕೆ ಪ್ರಜೆಗಳ ಬೆಂಬಲವಿದ್ದಿಲ್ಲ ಆದುದರಿಂದಲೇ ಮೊಗಲರು ಅದರ ಉಚ್ಚಾಟನೆಯನ್ನು ತೀವ್ರವಾಗಿ ಮಾಡಲು ಸಮರ್ಥರಾದರು. ಒಂದು ದೊಡ್ಡ ಮಹಾಪೂರದಂತೆ ಮೊಗಲರ ಆಕ್ರಮಣದ ಮುಂದೆ ತುರ್ಕರೂ ಅಫಗಾಣರೂ ಸ್ಥಾಪಿಸಿದ್ದ ಎಲ್ಲ ರಾಜ್ಯಗಳು ನಾಮಶೇಷವಾದವು. ಇ. ಸ. ೧೫೫೬ ರಲ್ಲಿ ಪಾನಿಪತ್ತದ ಎರಡನೆಯ ಯುದ್ಧದಲ್ಲಿ ಮೊಗಲರು ವಿಜಯಿಗಳಾಗಿ ಅಫಗಾಣಪ್ರಭುತ್ವವನ್ನು ಸಂಪೂರ್ಣವಾಗಿ ನಾಶಮಾಡಿದರು ಇ. ಸ. ೧೫೫೬ ರಿಂದ ೧೭೦೭ರ ವರೆಗಿನ ೧೫೦ ವರ್ಷಗಳ ಅವಧಿಯಲ್ಲಿ ಅಕಬರನು ಮತ್ತು ಔರಂಗಜೇಬನು ದೊಡ್ಡ ದೊಡ್ಡ ವಿಜಯುಗಳನ್ನು ಸಂಪಾದಿಸಿದರೇನೋ ನಿಜ. ಆದರೆ ಕಟ್ಟಕಡೆಗೆ ರಾಜಪುತಾನಿಗಳು ಕಳೆದುಕೊಂಡ ತಮ್ಮ ಸ್ವಾತಂತ್ರ್ಯವನ್ನು ಮರಳಿ ಗಳಿಸಿದರು. ಮರಾಠರು ಮೊಗಲರನ್ನು ಸೋಲಿಸಿದರು. ಇದರಿಂದ ಹಿಂದೂ ಅರಸರನ್ನು ಶಾಶ್ವತವಾಗಿ ಗೆಲ್ಲುವದು ಸಾಧ್ಯವಿಲ್ಲೆಂದು ಸಿದ್ಧವಾಯಿತು. ಹಿಂದುಸ್ಥಾನದಲ್ಲಿ "ದಾರ್-ಉಲ್-ಇಸ್ಲಾಮು"ವನ್ನು ಸ್ಥಾಪಿಸಬೇಕೆಂಬ ಆಲಂಗೀರನ ಮನೋರಥವು ಕುಪ್ಪಳಿಸಿತು. ಪ್ರಾ. ಶ್ರೀ. ರಾ. ಶರ್ಮ ಇವರು ತಮ್ಮ "ದಿ ಕ್ರಿಸೆಂಟ ಇನ್ ಇಂಡಿಯಾ" ಎಂಬ ಗ್ರಂಥದಲ್ಲಿ ಹೇಳಿದಂತೆ "ಅಕಬರನ ಕಾಲದಲ್ಲಿ ಮುಸಲ್ಮಾನರು ಪರಮಾವಧಿ ಉತ್ತಮ ಕೆಲಸಗಳನ್ನು ಮಾಡಿದರೆ ಔರಂಗಜೇಬನ ಕಾಲದಲ್ಲಿ ಅತ್ಯಂತ ಕೆಟ್ಟ ಕೆಲಸಗಳನ್ನು ಮಾಡಿದರು. ಆದರೆ ಎರಡರಲ್ಲಿಯೂ ಅವರಿಗೆ ಯಶಸ್ಸು ದೊರೆಯಲಿಲ್ಲ."

ಇ. ಸ. ೧೨೦೬ ರಿಂದ ೧೭೦೭ರ ವರೆಗಿನ ೫೦೦ ವರ್ಷಗಳ ಕಾಲಾವಧಿಯಲ್ಲಿ ಮುಸಲ್ಮಾನರ ಪ್ರಭುತ್ವವು ಭಾರತದಲ್ಲಿ ಊರ್ಜಿತಾವಸ್ಥೆಯಲ್ಲಿತ್ತು. ಈ ಇತಿಹಾಸದಿಂದ ಒಂದು ಮಹತ್ವದ ಸಂಗತಿಯು ಸಿದ್ಧವಾಯಿತು. ಭಾರತ ದೇಶವು ಕೇವಲ ಹಿಂದು ಅಥವಾ ಕೇವಲ ಮುಸಲ್ಮಾನರ ವರ್ಚಸ್ಸಿಗೊಳಗಾಗಿರಲಾರದೆಂಬುದೇ ಆ ಮಾತು. ಭಾರತವು ಇಬ್ಬರ ಪಿತೃಭೂಮಿಯಿದ್ದು ಭಾರತದ ಪ್ರಾಚೀನ ಸಂಸ್ಕೃತಿಯ ಹಿನ್ನೆಲೆಯಲ್ಲಿ ಇಬ್ಬರೂ ತಮ್ಮ ತಮ್ಮ ಸಂಸ್ಕೃತಿಯ ಸಮನ್ವಯವನ್ನು ಸಾಧಿಸಲು ಯತ್ನಿಸಬೇಕು. ಹೆಚ್ಚೇನು ? ಇಂತಹ ಪ್ರಯತ್ನವನ್ನು ಅಕಬರನೂ ಶಿವಾಜಿಯೂ ಮಾಡಿನೋಡಿದರು. ಪ್ರಾಚೀನ ಪರಂಪರೆಯನ್ನು ಅನುಸರಿಸಿ ವಿವಿಧತೆಯಲ್ಲಿ ಏಕತೆಯನ್ನು ಸಾಧಿಸುವ ಪ್ರಶ್ನೆಯು ಮೊಗಲರ ಕಾಲದ ಭಾರತದ ಮುಂದೆ ಇತ್ತು. ಈ ಧ್ಯೇಯವನ್ನು ಸಾಧಿಸಿಕೊಳ್ಳುವ ಕಾರ್ಯದಲ್ಲಿ ಮುಂಚಿನ ಸುಲ್ತಾನರಿಗಿಂತ ಮೊಗಲರು ಹೆಚ್ಚು ಯಶಸ್ವಿಯಾದರು. ಇದು ಹೇಗಾಯಿತೆಂಬುದನ್ನು ನಾವೀಗ ವಿಚಾರಿಸಲಿರುವೆವು.

**ಮೊಗಲರ ಆಡಳಿತ:**— ಇ. ಸ. ೧೫೨೬ ರಲ್ಲಿ ಬಾಬರನು ಮೊಗಲರಾಜ್ಯವನ್ನು ಸ್ಥಾಪಿಸಿದನು. ಆದರಲ್ಲಿ ಅನೇಕ ಕರ್ತೃತ್ವಶಾಲಿ ಆಡಳಿತೆಗಾರರು ಒಬ್ಬರ ಹಿಂದೊಬ್ಬರು ಆಗಿ ಹೋದರು. ಈ ಬಗೆಯ ಕರ್ತೃತ್ವಶಾಲಿ ಅರಸರ ಪರಂಪರೆಯು ಜಗತ್ತಿನಲ್ಲಿ ದೊರೆಯುವದು ವಿರಲ. ಈ ಮನೆತನದಲ್ಲಿಯ ಕೊನೆಯ ರಾಜ್ಯಕರ್ತನಾದ ೨ನೆಯ ಬಹಾದ್ದೂರಶಾಹನನ್ನು ೧೮೫೮ರಲ್ಲಿ ಬ್ರಿಟಿಷರು ಪದಭ್ರಷ್ಟ

ಮಾಡಿ ಮೊಗಲ ಸಾಮ್ರಾಜ್ಯವನ್ನು ನಾಮಶೇಷ ಮಾಡಿದರು. ೩೩೩ ವರ್ಷಗಳ ಈ ಕಾಲವು ಭಾರತದ ಇತಿಹಾಸದಲ್ಲಿ ಮಾತ್ರವಲ್ಲದೆ ಜಗತ್ತಿನ ಇತಿಹಾಸದಲ್ಲಿಯೆ ಮಹತ್ವದ್ದಾಗಿ ಪರಿಣಮಿಸಿತು. ಯುರೋಪದಲ್ಲಿಯ ಜ್ಞಾನದ ಪುನರುಜ್ಜೀವನ ಮತ್ತು ಧರ್ಮಸುಧಾರಣೆಯ ಚಳವಳಿಗಳಾಗಿ ಅವುಗಳ ಬೆನ್ನಾಬೆನ್ನು ಮಹತ್ವದ ರಾಜಕೀಯ ಮತ್ತು ಆರ್ಥಿಕ ಅಲ್ಲಕಲ್ಲೋಲಗಳಾದವು. ಅವುಗಳ ವಿಚಾರವನ್ನು ನಾವು ಹಿಂದಿನ ಪಾಠದಲ್ಲಿ ಮಾಡಿರುವೆವು ಇಲ್ಲಿ ನಾವು ೧೫೨೬ ರಿಂದ ೧೭೦೭ ರ ವರೆಗಿನ ಅವಧಿಯ ವಿಚಾರವನ್ನು ಮಾಡುವಾ. ಬಾಬರನಿಂದ ಔರಂಗಜೇಬನ ವರೆಗಿನ ಈ ಕಾಲವು ದೊಡ್ಡ ಮೊಗಲರ ಕಾಲವೇ ಸರಿ. ತದನಂತರದ ೧ ನೇ ಬಹಾದ್ದೂರಶಾಹಾನಿಂದ ೨ನೆಯ ಬಹಾದ್ದೂರಶಾಹಾನ ಕಾಲಕ್ಕೆ ಈ ಹೆಸರನ್ನು ಕೊಡಲಿಕ್ಕಾಗದು.

ಮಾನವೀ ಇತಿಹಾಸದಲ್ಲಿ ಬಾಬರನು ಒಬ್ಬ ಸಾಹಸೀ ಸೇನಾನಿಯೂ ವಿಜೇತನೂ ಆಗಿಹೋದನು. ಫೆರಿಸ್ತಾನು ಹೇಳಿದಂತೆ "ಆತನ ದೈವವು ಕಾಲುಚೆಂಡಿನಂತೆ ಅತ್ತಿಂದ ಇತ್ತ ಒಂದೇಸವನೆ ಒದಿಕೆಗಳನ್ನು ತಿನ್ನುತ್ತಿತ್ತು. ಹಿಂದುಸ್ಥಾನಕ್ಕೆ ಬರುವ ಮುಂಚೆ ಎರಡು ರಮಜಾನಗಳನ್ನೇನೂ ಒಂದು ಸ್ಥಳದಲ್ಲಿ ನೆರವೇರಿಸಲು ಅವನಿಗಾಗಲಿಲ್ಲ."

ಆದರೆ ೧೫೨೬ ರಿಂದ ೧೫೩೦ ರ ವರೆಗಿನ ಅಲ್ಪಾವಧಿಯಲ್ಲಿ ಯಾವ ಸಾಮ್ರಾಜ್ಯ ಸತ್ತೆಯ ತಳಹದಿಯನ್ನು ಅವನು ಹಾಕಿದನೋ ಆ ಸಾಮ್ರಾಜ್ಯವು ಜಾಗತಿಕ ಇತಿಹಾಸದಲ್ಲಿ ಅತ್ಯಂತ ವೈಭವಶಾಲಿಯೆಂದೆನಿಸಿಕೊಂಡಿತು. ಬಾಬರನ ಮೊಮ್ಮಗನಾದ ಅಕಬರನ ಕರ್ತೃತ್ವದ ಫಲವಿದಾಗಿತ್ತು. ಅಕಬರನಿಗಿಂತ ಮುಂಚಿನ ರಾಜ್ಯಕರ್ತರ ವಿಚಾರವನ್ನು ಮೊದಲು ಮಾಡಿದ ಬಳಿಕ ಅಕಬರನ ಕಾರ್ಯದ ಸವಿಸ್ತಾರ ವಿಚಾರವನ್ನು ಮಾಡಲಿರುವೆವು.

**ಬಾಬರ:**— ಇವನೊಬ್ಬ ಶೂರ ಸಿಪಾಯಿ, ಯಶಸ್ವಿ ಸೇನಾಪತಿ ಮತ್ತು ದೊಡ್ಡ ವಿದ್ವಾಂಸನಾಗಿದ್ದ ಅಸಾಮಾನ್ಯ ಪುರುಷನಾಗಿದ್ದನು. ಅಫಗಾಣ ಮತ್ತು ರಜಪೂತರಂತಹ ಬಲಿಷ್ಠರನ್ನು ಕೂಡ ಮಣ್ಣುಮುಕ್ಕಿಸಿ ಐದು ವರ್ಷಗಳ ಅವಧಿಯಲ್ಲಿ ಉತ್ತರ ಹಿಂದುಸ್ಥಾನವನ್ನೆಲ್ಲ ಗೆದ್ದುಕೊಂಡಿದ್ದನು. ಮಂಗೋಲ ಸೇನಾಪತಿ ಚೆಂಗೀಜಖಾನ ಮತ್ತು ತುರ್ಕ ಸಮ್ರಾಟ ತೈಮೂರ ಈ ಎರಡೂ ಮನೆತನಗಳ ವಂಶಜನು ಈ ಬಾಬರನು. ಇರಾಣೀ ಸಂಸ್ಕೃತಿಯ ಪ್ರಭಾವದಿಂದ ಬಾಬರನ ಕ್ರೌರ್ಯವು ಬಹಳ ಕಡಿಮೆಯಾಗಿದ್ದಿತು.

**ಹುಮಾಯೂನ:**— ಇವನು ಬಾಬರನ ಮಗನೂ ಅಕಬರನ ತಂದೆಯೂ ಆಹುದು. ಅಂತೆಯೆ ಆತನಲ್ಲಿ ಅವರೀರ್ವರ ಮಾನವೀ ಸದ್ಗುಣಗಳು ಕೂಡಿದ್ದವು. ತಂದೆಯ ಸೈನಿಕ ಸಾಹಸ ಮತ್ತು ಮಗನ ರಾಜಕೀಯ ದೂರದೃಷ್ಟಿ ಇವುಗಳಲ್ಲಿ ಯಾವುದೂ ಆತನಲ್ಲಿದ್ದಿಲ್ಲ. ಆದುದರಿಂದ ಧೂರ್ತನೂ ಸಾಹಸಿಯೂ ಆದ ಅಫಗಾಣ ವಿಜೇತ ಶೇರಶಾಹಾನು ಹುಮಾಯೂನನ ಮೇಲೆ ಏರಿ-

ಹೋದುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಹುಮಾಯೂನನಿಗೆ ೧೫ ವರ್ಷಗಳನ್ನು ವನವಾಸದಲ್ಲಿ ಕಳೆಯುವ ಪ್ರಸಂಗವು ಬಂದಿತು. ಈ ಅವಧಿಯಲ್ಲಿ ಹಿಂದುಸ್ಥಾನವು ಪುನಃ ಅಫಗಾಣರ ಅಧಿಕಾರಕ್ಕೊಳಗಾಯಿತು. ಆದರೂ ಹುಮಾಯೂನನು ಬಾಬರನಿಗೆ ಒಪ್ಪುವ ರೀತಿಯಲ್ಲಿ ನಡೆದುಕೊಂಡನು. ಧೈರ್ಯ ಮತ್ತು ಜಿಗುಟುತನಗಳನ್ನು ಬಿಡದೆ ಅವನು ಮತ್ತೆ ಹೋರಾಡಿ ದಿಲ್ಲಿಯ ಸಿಂಹಾಸನನ್ನು ಮರಳಿ ಪಡೆದನು. ಶೇರಶಾಹಾನ ನಂತರ ಅಫಗಾಣ ಅಧಿಕಾರವು ನಷ್ಟವಾಗಿ ಭಾರತದಲ್ಲಿ ವೈಭವ-ಶಾಲಿ ಯುಗವು ಆರಂಭವಾಯಿತು.



ಶೇರಶಾಹಾ

**ಶೇರಶಾಹಾ :**— ಶೇರಶಾಹಾನು ಅಫಗಾಣನಾಗಿದ್ದರೂ ಆತನು ಹಿಂದುಸ್ಥಾನದಲ್ಲಿ ಹುಟ್ಟಿದ್ದನು. ಬಾಬರನಂತೆ ಅವನೂ ಗಟ್ಟಿಗನಾದ ಯೋದ್ಧನಾಗಿದ್ದನು. ಅಲ್ಲದೆ ಬಹಳ ಚತುರನೂ ಆಗಿದ್ದನು. ಬಾಬರನಲ್ಲಿ ರಾಜಕೀಯ ಮುತ್ಸದ್ದಿತನವಿಲ್ಲದುದರಿಂದ ಗೆದ್ದ ರಾಜ್ಯಗಳನ್ನು ಸಂಘಟಿಸುವದು ಅವನಿಂದಾಗಲಿಲ್ಲ. ತದ್ವಿರುದ್ಧ ಕೇವಲ ಐದು ವರ್ಷಗಳ ಅವಧಿಯಲ್ಲಿ ಶೇರಶಾಹಾನು ಮಾಡಿದ ರಾಜ್ಯಸಂಘಟನೆಯ ತಳಹದಿಯ ಮೇಲೆ ಅಕಬರನು ತನ್ನ ಶಾಸನವ್ಯವಸ್ಥೆಯ ಭವ್ಯ ಕಟ್ಟಡವನ್ನು ವಿಚಾರಪೂರ್ವಕ ಕಟ್ಟಿದನು.



ಶೇರಶಾಹಾನ ನಾಣ್ಯ

ಸುರಕ್ಷಿತತೆ ಮತ್ತು ಪ್ರಗತಿ ಎಂಬ ಎರಡು ತತ್ವಗಳನ್ನು ಶೇರಶಾಹಾನ ಧೋರಣವು ಅವಲಂಬಿಸಿತ್ತು. ಸುರಕ್ಷಿತತೆಗಾಗಿ ಅವನು ಆಯಕಟ್ಟಿನ ಸ್ಥಳಗಳಲ್ಲಿ ಭದ್ರವಾದ ಕೋಟೆ ಕೊತ್ತಳಗಳನ್ನು ಕಟ್ಟಿದನು. ಸೈನಿಕ ಚಲನವಲನ ಮತ್ತು ವ್ಯಾಪಾರೀ

ಸಂಪರ್ಕ ಇವುಗಳಿಗೆ ಉಪಯುಕ್ತವಾಗುವ ದೃಷ್ಟಿಯಿಂದ ಅವನು ತನ್ನ ರಾಜ್ಯದಲ್ಲಿ ಹೆದ್ದಾರಿಗಳನ್ನು ಹಾಕಿದನು. ಪ್ರವಾಸಿಕರ ಸುಖಸೌಕರ್ಯಗಳಿಗಾಗಿ ಅಂಚೆ ಕಟ್ಟೆಗಳನ್ನು ಏರ್ಪಡಿಸಿ ಪತ್ರಗಳನ್ನು ತರುವ ಹಾಗು ಒಯ್ಯುವ ಅನುಕೂಲತೆ ಯನ್ನು ಮಾಡಿದನು. ಶೇರಶಾಹಾನ ಆರ್ಥಿಕ ಧೋರಣವು ಬಹಳ ಮುತ್ಸದ್ದಿತನ ದ್ದಾಗಿತ್ತು. "ಒಕ್ಕಲಿಗರ ಉನ್ನತಿಯನ್ನೇ ರಾಜ್ಯದ ಕಲ್ಯಾಣವು ಅವಲಂಬಿಸಿದೆ" ಎಂದು ಅವನು ಅನ್ನುತ್ತಿದ್ದನು. ಒಕ್ಕಲತನದ ಹೊಲಗಳನ್ನು ಶಾಸ್ತ್ರೀಯ ದೃಷ್ಟಿ ಯಿಂದ ಪರೀಕ್ಷಿಸಿ ಜಮಾಬಂದಿಯ ವ್ಯವಸ್ಥೆಯನ್ನು ಹಾಕಿಕೊಟ್ಟನು. ರಾಜ್ಯದಲ್ಲಿಯ ಎಲ್ಲ ಹೊಲಗಳ ಮಾಹಿತಿಯನ್ನು ಬರೆದಿಡುವ ರಜಿಸ್ಟರ ಪದ್ಧತಿಯನ್ನು ಸಿದ್ಧಪಡಿಸಿ ದನು. "ಕಂದಾಯವನ್ನು ಆಕರಿಸುವಾಗ ಶಕ್ಯವಿದ್ದಷ್ಟು ಸೌಜನ್ಯವನ್ನು ತೋರಿಸ ಬೇಕು. ಆದರೆ ವಸೂಲ ಮಾಡುವಾಗ ಮಾತ್ರ ಉಗ್ರ ಧೋರಣವನ್ನು ಇಟ್ಟು ಕೊಳ್ಳಬೇಕು" ಎಂಬ ತತ್ವವನ್ನು ಅವನು ಪುರಸ್ಕರಿಸಿದನು. ಹಿಂದು ಮುಸಲ್ಮಾನ ರನ್ನು ಭೇದಭಾವವಿಲ್ಲದೆ ನಡೆಸಿಕೊಳ್ಳುತ್ತಿದ್ದನು. ಅಕಬರನಿಗಿಂತ ಮುಂಚೆ ಅನೇಕ ಮಹತ್ವಪೂರ್ಣ ಸುಧಾರಣೆಗಳನ್ನು ಮಾಡಿದ ಮುಸಲ್ಮಾನ ರಾಜ್ಯಕರ್ತನಿವನೊ ಬ್ಬನೇ.

**ಅಕಬರನ ಕಾರ್ಯ:—** ಶೇರಶಾಹಾನಂತೆ ಅಕಬರನೂ ಹಿಂದುಸ್ಥಾನದ ಲ್ಲಿಯೇ ಹುಟ್ಟಿದನು. "ಭಾರತೀಯ ರಾಷ್ಟ್ರವಾದದ ಜನಕ" ನೆಂದು ಅಕಬರನ ವರ್ಣನೆಯನ್ನು ಪಂಡಿತ ಜವಾಹರಲಾಲ ನೆಹರೂ ಅವರು ಮಾಡಿರುವರು. ರಾಜ್ಯವು ಬಲಶಾಲಿಯಾಗಬೇಕಾದರೆ ಪ್ರಜೆಗಳಲ್ಲಿ ಒಕ್ಕಟ್ಟಿರುವದು ಅವಶ್ಯವೆಂಬ ಒಂದೇ ವಾಕ್ಯದಲ್ಲಿ ಅಕಬರನ ಧ್ಯೇಯವನ್ನು ಹೇಳಬಹುದು. ಒಕ್ಕಟ್ಟಿಗಾಗಿ ಒಂದೇ ಸರ ಕಾರವು ಬೇಕೇಬೇಕು. ಶಕ್ಯವಿದ್ದರೆ ಒಂದೇ ಒಂದು ಧರ್ಮವೂ ಬೇಕು. ಈ ಧ್ಯೇಯಸಿದ್ಧಿಗಾಗಿ ಅವನು ರಾಷ್ಟ್ರೀಯ ಸರಕಾರವನ್ನು ಸ್ಥಾಪಿಸಿ ಸಂತ ಕಬೀರನ ಉಪದೇಶದಂತೆ ಪ್ರಮುಖ ಧರ್ಮಗಳಲ್ಲಿಯ ಶ್ರೇಷ್ಠ ತತ್ವಗಳನ್ನು ಹೊಂದಿಸಿಕೊಂಡ 'ದಿನೇ ಇಲಾಹಿ' ಧರ್ಮವನ್ನು ಸ್ಥಾಪಿಸುವ ಪ್ರಯತ್ನವನ್ನು ಮಾಡಿದನು. ಭಾರತಕ್ಕೆ ಒಂದೇ ಧರ್ಮವನ್ನು ಕೊಡಬೇಕೆಂಬ ಪ್ರಯತ್ನದಲ್ಲಿ ಅಪಯಶಸ್ಸುಂಟಾದುದರ ಕಾರಣವು ಹೀಗಿದೆ. ಈ ಬಗೆಯ ಧರ್ಮವು ಜನರಿಗೆ ರುಚಿಸುವಂತೆ ದೇಶದ ಅಥವಾ ಜಗತ್ತಿನ ಪರಿಸ್ಥಿತಿಯಿದ್ದಿಲ್ಲ. ಅವನ ಧ್ಯೇಯವೇನೂ ತಪ್ಪಾಗಿದ್ದಿಲ್ಲ. ಬೇರೆ ಕಡೆಗಳಲ್ಲಿ ಧರ್ಮದ ಬಗ್ಗೆ ಇದಕ್ಕಿಂತಲೂ ಹೆಚ್ಚು ಕೆಟ್ಟ ಪರಿಸ್ಥಿತಿಯಿತ್ತು. ಜ್ಞಾನದ ಪುನರುಜ್ಜೀವನವಾದ ಮೇಲೂ ಯುರೋಪದಲ್ಲಿ ನಡೆದ ಧಾರ್ಮಿಕ ಛಲನೆ ಮತ್ತು ಯುದ್ಧಗಳು ಅಕಬರನ ಮರಣದ ನಂತರದ ಕಾಲದಲ್ಲಿಯೂ ಯುರೋಪದಲ್ಲಿ ನಡೆದಿದ್ದವು. ಇಂಗ್ಲಂಡದ ರಾಜರ (ಮೊಗಲ ಸಮ್ರಾಟರ ಸಮಕಾಲೀನರು) ಕಾಲದಲ್ಲಿ ಕೆಥೊಲಿಕ್ ಮತ್ತು ಪ್ರೊಟೆಸ್ಟಂಟರು ಒಬ್ಬರನ್ನೊಬ್ಬರು ನಾಶಮಾಡ ಬೇಕೆಂದು ಹೋರಾಡುತ್ತಿದ್ದರು. ಇದಕ್ಕೆ ವಿರುದ್ಧವಾಗಿ ಭಾರತದಲ್ಲಿ ಮೊದಲಿನ ಸುಲ್ತಾನರು ಹೇರಿದ್ದ ಜಿಜಿಯಾ ಮತ್ತು ಯಾತ್ರಿಕರ ಮೇಲಿನ ತಲೆಪಟ್ಟಿಗಳನ್ನು

ಅಕಬರನು ರದ್ದುಗೊಳಿಸಿದನು. ಧರ್ಮ ಮತ್ತು ಜಾತಿಗೋತ್ರಗಳ ವಿಚಾರವನ್ನು ಮಾಡದೆ ಕೇವಲ ಪಾತ್ರತೆಯನ್ನು ನೋಡಿ ತನ್ನ ರಾಜ್ಯದಲ್ಲಿಯ ವರಿಷ್ಠ ದರ್ಜೆಯ ಸೈನಿಕ ಹಾಗೂ ಮುಲಕೀ ಅಧಿಕಾರಸ್ಥಳಗಳಿಗೆ ಜನರನ್ನು ಅವನು ನೇಮಿಸಿದನು. ತಾವು ಒಬ್ಬ ಮುಸಲ್ಮಾನ ರಾಜ್ಯಕರ್ತನ ಪ್ರಜೆಗಳಿರುವೆವೆಂಬ ಭಾವನೆಯನ್ನೇ ಹಿಂದೂ ಪ್ರಜೆಗಳು ಮರೆತುಬಿಟ್ಟರು. ಆ ದೊಡ್ಡ ಸುಸಂಸ್ಕೃತ ಸಮ್ರಾಟನು ಮುಸಲ್ಮಾನ ರಷ್ಟೇ ಹಿಂದುಗಳಿಗೂ ಪ್ರಿಯನಾಗಿದ್ದನು. ಅಕಬರನ ಉದಾರ ಧೋರಣಕ್ಕೆ ಎರಡು ಮುಖ್ಯ ಕಾರಣಗಳಿದ್ದವು. ವ್ಯಕ್ತಿಶಃ ಅವನಿಗೆ ವಿಶಾಲ ಧರ್ಮದ ಮಹತ್ವವು ಮನವರಿಕೆಯಾಗಿತ್ತು. ರಾಜನೆಂಬ ದೃಷ್ಟಿಯಿಂದ ಭದ್ರವಾದ ಸಾಮ್ರಾಜ್ಯವನ್ನು ಕಟ್ಟಬೇಕೆಂಬ ಧ್ಯೇಯವು ಅವನಿಗಿತ್ತು. ಏಕೇಶ್ವರೀಮತ ಮತ್ತು ವಿಶ್ವಬಂಧುತ್ವ ಗಳಲ್ಲಿ ಆತನಿಗೆ ದೃಢವಾದ ಶ್ರದ್ಧೆ ಇತ್ತು.

ಬೇರೆ ಬೇರೆ ಧಾರ್ಮಿಕ ಆಚಾರಗಳ ಮೂಲಕ ಮಾನವ ಸಮಾಜವು ವಿಭಾಗಿತ ವಾಗಿದೆಯೆಂಬ ಸಂಗತಿಯು ಇಬಾದತ ಖಾನೆಯಲ್ಲಿ ನಡೆಯುತ್ತಿದ್ದ ಚರ್ಚೆಗಳಿಂದ ಅವನ ಲಕ್ಷ್ಯಕ್ಕೆ ಬಂದಿತ್ತು. ಹಾಗೆಯೆ ಧಾರ್ಮಿಕ ಚರ್ಚೆಗಳ ಮೂಲಕ ಧಾರ್ಮಿಕ



ಅಕಬರನ ನಾಣ್ಯ

ಘರ್ಷಣೆಯು ಹೆಚ್ಚಾಗುವದೆಂಬುದನ್ನೂ ಅವನು ಅರಿತಿದ್ದನು. ಜಹಾಂಗೀರನು ತನ್ನ ಆತ್ಮಚರಿತ್ರೆಯಲ್ಲಿ ಹೇಳಿದಂತೆ ಅಕಬರನು ನಿರಕ್ಷರಿಯಾಗಿದ್ದನು. ಆದರೆ ಆತನು ತನ್ನ ಸಂಭಾಷಣೆಯಲ್ಲಿ ತೋರಿಸುತ್ತಿದ್ದ ಬಹುಶ್ರುತತ್ವದಿಂದ ಅವನು ನಿರಕ್ಷ ರಿಯಾಗಿರಬೇಕೆಂದು ಯಾರಿಗೂ ಅನಿಸುತ್ತಿರಲಿಲ್ಲ. ಆತನು ಅತ್ಯಂತ ಸಂಪತ್ತಿ ವಂತನೂ ಸಾಮರ್ಥ್ಯಶಾಲಿಯೂ ಆದ ಸಮ್ರಾಟನಾಗಿದ್ದನು. ಆದರೆ ಅವನು ಪರ ಮೇಶ್ವರನ ಮುಂದೆ ಬಹಳ ವಿನಮ್ರನಾಗಿದ್ದನು. ಜನರ ಮನಸ್ಸು ಅಕಬರನಷ್ಟು ಸುಸಂಸ್ಕೃತವಾಗಿದ್ದಿಲ್ಲ. ಅದರಿಂದ ಆತನ 'ದಿನೇ ಇಲಾಹಿ' ಧರ್ಮವು ಬಾಳಲಿಲ್ಲ. ರಾಜಕೀಯ ದೃಷ್ಟಿಯಿಂದ ವಿಚಾರ ಮಾಡಿದರೆ ಭಾರತದ ಹೊರಗಿನ ಸಮಕಾಲೀನ ರಾಜ್ಯಕರ್ತರಲ್ಲಿ ಅಕಬರನಷ್ಟು ಸುಸಂಸ್ಕೃತನಾದ ರಾಜನು ಬೇರೆಡೆಯಲ್ಲಿ ಎಲ್ಲಿಯೂ ಇದ್ದಿಲ್ಲ. ಜಗತ್ತಿನ ಇತರ ರಾಜ್ಯಕರ್ತರ ಮಾನದಿಂದ ಧಾರ್ಮಿಕ ವಿಷಯಗಳಲ್ಲಿ ಅವನು ಎಷ್ಟೋ ಉದಾರನಾಗಿದ್ದನು. ಧರ್ಮ ಮತ್ತು ಜಾತಿಗೋತ್ರಗಳ ವಿಚಾರ ವನ್ನು ಮಾಡದೆ ತನ್ನ ಭಿನ್ನ ಧರ್ಮೀಯ ಪ್ರಜೆಗಳನ್ನು ತನ್ನವರೆಂದೇ ಭಾವಿಸುವ ಅಕಬರನಂತಹ ರಾಜ್ಯಕರ್ತರು ಆ ಕಾಲದಲ್ಲಿ ಯುರೋಪದಲ್ಲಿದ್ದಿಲ್ಲ.

ಅಲ್ಲದೆ ಸಾಮಾಜಿಕ ವಿಷಯಗಳಲ್ಲಿಯೂ ಅಕಬರನು ಉದಾರನೂ ಪ್ರಗತಿಪರನೂ ಆಗಿದ್ದನು. ರಾಜಪೂತರೊಡನೆ ಮಾಡಿಕೊಂಡ ವಿವಾಹ ಸಂಬಂಧವು ಕೇವಲ ರಾಜಕೀಯ ಸ್ವರೂಪದ್ದಿದ್ದಿಲ್ಲ. ಹಿಂದೂ ಮುಸಲ್ಮಾನರನ್ನು ಒಂದುಗೂಡಿಸುವ ಪ್ರಯತ್ನವದಾಗಿದ್ದಿತು. ಹುಡುಗ ಹುಡಿಗೆಯರ ಮದುವೆಯ ಕನಿಷ್ಠ ವಯೋಮರ್ಯಾದೆಯನ್ನು ಅನುಕ್ರಮವಾಗಿ ೧೬ ಮತ್ತು ೧೪ ಎಂದು ಅವನು ಗೊತ್ತುಮಾಡಿಕೊಟ್ಟನು. ಎಳೆ ವಯಸ್ಸಿನಲ್ಲಿ ಮದುವೆಯಾದರೆ ಸಂತತಿಯು ಅಶಕ್ತವಾಗುವದೆಂಬ ಮಾತು ಅವನಿಗೆ ಮನವರಿಕೆಯಾದುದೇ ಈ ಸುಧಾರಣೆಗೆ ಕಾರಣ. ಅಬುಲ್ ಫಜಲನೂ ಹೀಗೆಯೇ 'ಐನೇ ಅಕಬರಿ'ಯಲ್ಲಿ ಬರೆದಿರುವನು.

ಸಮಾಜಕಲ್ಯಾಣವಾದಿ ಅಕಬರನು ಮದ್ಯಪಾನವನ್ನು ನಿಯಂತ್ರಿಸುವ ಪ್ರಯತ್ನವನ್ನು ಮಾಡಿದನು. ವೇಶ್ಯಾ ವ್ಯವಸಾಯದ ಮೇಲೂ ನಿಯಂತ್ರಣವಿಟ್ಟನು. ನಗರದ ಹೊರಗೆ ದೂರದಲ್ಲಿ "ಸೈತಾನಪುರ"ವೆಂಬಲ್ಲಿಯೇ ವೇಶ್ಯೆಯರು ಇರತಕ್ಕದ್ದೆಂದು ನಿಯಮ ಮಾಡಿದನು. ಗೋಹತ್ಯೆಯನ್ನು ಪ್ರತಿಬಂಧಿಸುವಲ್ಲಿ ಆತನ ಉದ್ದೇಶವು ಕೇವಲ ಹಿಂದೂ ಪ್ರಜೆಗಳ ಧರ್ಮಭಾವನೆಯ ಬಗ್ಗೆ ಆದರವನ್ನು ವ್ಯಕ್ತ ಮಾಡುವದಷ್ಟೇ ಆಗಿದ್ದಿಲ್ಲ; ಆದರೆ ಭಾರತದಂತಹ ಒಕ್ಕಲತನ ದೇಶದಲ್ಲಿ ತುರು-ಕರುಗಳು ಅವೌಲ್ಯ ಸಂಪತ್ತೆಂದು ಅವನು ಬಗೆದಿದ್ದನು.

ಅಕಬರನು ನಿರ್ಮಿಸಿದ್ದ ಭದ್ರವಾದ ರಾಜ್ಯಕಾರಭಾರವಿಷಯಕವಾದ ಸಂಘ



ಅಕಬರನ ನಾಣ್ಯ

ಟನೆಯ ಕಡೆಗೆ ನಮ್ಮ ನೋಟವನ್ನು ಹೊರಳಿಸಿದರೆ ಆ ಸಂಘಟನೆಯು ಬುದ್ಧಿ ಪ್ರಧಾನ ತತ್ವವನ್ನು ಅವಲಂಬಿಸಿತ್ತೆಂಬ ಸಂಗತಿಯು ಗೊತ್ತಾಗಬಲ್ಲದು. ಮನಸಬದಾರ ಪದ್ಧತಿಯು ಈ ಸಂಘಟನೆಯ ಜೀವಾಳವಾಗಿತ್ತು. ಅದರಲ್ಲಿಯ ತರಗತಿಗಳು ಸುಸ್ಪಷ್ಟವಾಗಿದ್ದವು. ಅಕಬರನು ತನ್ನ ಅಧಿಕಾರಿ ವರ್ಗಕ್ಕಾಗಿ ಸಿದ್ಧಪಡಿಸಿದ್ದ ಸೂಚನಾಸಂಗ್ರಹವು ವಿಚಾರಸರಣಿಯ ದೃಷ್ಟಿಯಿಂದ ಅತ್ಯಾಧುನಿಕವಾಗಿತ್ತು. ಒಕ್ಕಲಿಗರ ಕಲ್ಯಾಣವು ವ್ಯವಸ್ಥೆಯ ಆತ್ಮವಾಗಿತ್ತು. ಈ ವಿಷಯದಲ್ಲಿ ಅಕಬರನು ಶೇರಶಾಹಾನ ಹೆಜ್ಜೆಯಲ್ಲಿ ಹೆಜ್ಜೆ ಇಟ್ಟಿದ್ದನು. ಸಾಲವು ಬೇಕಾದ ಒಕ್ಕಲಿಗರಿಗೆ ಧಾನ್ಯದ ರೂಪದಲ್ಲಾಗಲಿ ಹಣದ ರೂಪದಲ್ಲಾಗಲಿ ಸರಕಾರದ ಕಡೆಯಿಂದ ಸಾಲವು ದೊರೆಯುತ್ತಿತ್ತು. ತೋಡರಮಲ್ಲನ 'ಬಂದೋಬಸ್ತ' ಎಂಬ ಭೂಕಂದಾಯ ವ್ಯವ-



ಮೊಗಲ ಕಾಲದ ಚಿತ್ರ

(ಅಕಬರನು ಬೇಟೆಯಾಡುತ್ತಿದ್ದಾನೆ)

ಸ್ಥೆಯು ಶಾಸ್ತ್ರಶುದ್ಧವೂ, ನ್ಯಾಯವೂ ಆಗಿತ್ತು. ಜೆಸುಇಟ ಪಂಥದ ಕ್ರಿಸ್ತೀ ಧರ್ಮೋಪದೇಶಕರಂತಹ ಪರಕೀಯರು ಕೂಡ ಅಕಬರನ ನ್ಯಾಯವ್ಯವಸ್ಥೆಯಲ್ಲಿಯ ಸಂಯಮವನ್ನು ಹೊಗಳಿರುವರು. ಮೂರು ಸಲ ವಿಚಾರಣೆ ಮಾಡಿ ಗಟ್ಟಿ ಮಾಡಲ್ಪಡುವ ವರೆಗೆ ದೇಹಾಂತ ಶಿಕ್ಷೆಯ ಆಜ್ಞೆಯು ಜಾರಿಯಲ್ಲಿ ಬರುತ್ತಿದ್ದಿಲ್ಲ. ಯಾಕಂದರೆ ಅವಸರದಿಂದ ಮಾಡಿದ ಶಿಕ್ಷೆಯ ಅಮಲ್‌ಬಜಾವಣೆಯಿಂದ ಅನ್ಯಾಯವಾಗುವ ಸಂಭವವಿದೆ. ಅಬುಲ್ ಫಜಲನು ಬರೆದಂತೆ "ಆಯುಸ್ಯದ ಎಳೆಯು ಹರೆಯುವ ವರೆಗೆ ಮನುಷ್ಯನು ಸುಧಾರಿಸುವ ಆಶೆಯು ಕೊನೆಯ ವರೆಗೂ ಇರುತ್ತದೆ." ಕಲಾ ಕೌಶಲ್ಯದ ವಿಷಯಗಳಿಗೂ ಅಕಬರನು ಗಮನವಿತ್ತನು. ಯಾಂತ್ರಿಕ ಕಲೆಯ ಕಡೆಗೆ ಆತನ ಸ್ವಾಭಾವಿಕ ಒಲವಿತ್ತು. ತುಬಾಕಿ ಹಾಗು ಶಸ್ತ್ರಾಸ್ತ್ರಗಳಲ್ಲಿ ಅವನು ಸ್ವತಃ ಸುಧಾರಣೆಯನ್ನು ಮಾಡಿದನು. ರಾಜಾಶ್ರಯವನ್ನಿತ್ತು ಕೈಗಾರಿಕೆಗಳನ್ನು ಪ್ರೋತ್ಸಾಹಿಸಿದನು. ಸರಕಾರಿ ಕಾರಖಾನೆಗಳೆಂದರೆ ಕೈಗಾರಿಕೆ, ಕಲಾಕೌಶಲ್ಯಗಳ ಪ್ರದರ್ಶನ ಗಳೇ ಆಗಿದ್ದವು. ಅಲ್ಲದೆ ಅವು ವಸ್ತುಸಂಗ್ರಹಾಲಯಗಳೂ ಆಗಿದ್ದವು. ಸಂಗೀತವೇ ಮೊದಲಾದ ಲಲಿತಕಲೆಗಳ ಮೇಲೆ ಆತನ ಪ್ರೀತಿಯು ವಿಶೇಷವಾಗಿತ್ತು. ಕಲೆ ಗಳೆಂದರೆ ಈಶ್ವರನ ಸಾಕ್ಷಾತ್ಕಾರದ ಸಾಧನಗಳೆಂದೇ ಆತನು ಬಗೆದಿದ್ದನು. ತಾನಸೇನ, ಬಸವನ, ದಸವಂಕ, ಹರಿಬಂಸ ಮೊದಲಾದ ಹೆಸರುಗಳು ಲಲಿತಕಲೆಯ ಕ್ಷೇತ್ರದಲ್ಲಿ ಪ್ರಸಿದ್ಧವಾಗಿವೆ.

'ಐನೇ ಅಕಬರಿ'ಯಲ್ಲಿ ಅಕಬರನ ಹಡಗುಪಡೆಯ ಸಂಘಟನೆಯ ಬಗೆಗೆ ವಿವರವಾದ ವರ್ಣನೆಯುಂಟು. ಬ್ರಿಟಿಶರ ಪೂರ್ವದಲ್ಲಿ ಹಡಗುಪಡೆಯ ಸಂಘಟನೆಯ ಕಡೆಗೆ ಗಮನವಿತ್ತ ರಾಜ್ಯಕರ್ತರು ವಿರಲ. ಪರರಾಷ್ಟ್ರಗಳ ಕೂಡ ಸ್ನೇಹಸಂಬಂಧ ವನ್ನಿಟ್ಟುಕೊಳ್ಳುವ ಕಡೆಗೂ ಗಮನವಿತ್ತ ರಾಜ್ಯಕರ್ತರು ವಿರಲ. ಪರರಾಷ್ಟ್ರಗಳ ಕೂಡ ಸ್ನೇಹಸಂಬಂಧವನ್ನಿಟ್ಟುಕೊಳ್ಳುವ ಕಡೆಗೂ ಗಮನವೀಯಲಾಯ್ತು. ಧಾರ್ಮಿಕ ಮತ್ತು ವ್ಯಾಪಾರೀ ಕಾರಣಗಳಿಗಾಗಿ ಅರಬಸ್ತಾನ ಮತ್ತು ಯುರೋಪ ಇವುಗಳ ಕೂಡ ದೃಢವಾದ ಸಂಬಂಧವನ್ನಿಟ್ಟುಕೊಳ್ಳುವ ಪ್ರಯತ್ನವನ್ನು ಅಕಬರನು ಮಾಡಿ ನೋಡಿದನು. ಗಡಿಯಾರ, ಪಿಯಾನೊ ಇವುಗಳಂತಹ ವಾದ್ಯಗಳೇ ಮೊದಲಾದ ಚಮತ್ಕೃತಿಪೂರ್ಣವಾದ ವಸ್ತುಗಳನ್ನು ಯುರೋಪದಿಂದ ತರಿಸುವದರ ಕಡೆಗೆ ಇದ್ದಷ್ಟೇ ಲಕ್ಷವು ಕ್ರಿಸ್ತೀ ಧರ್ಮದ ಉಪದೇಶದ ಕಡೆಗೂ ಆತನದು ಇತ್ತು. ಈ ಪ್ರಕಾರ ಅಕಬರನ ಸುಸಂಸ್ಕೃತ ಧೋರಣದ ಮೂಲಕ ಭಾರತಕ್ಕೆ ಆಧುನಿಕ ಜಗ ತ್ತಿನ ನಕಾಶೆಯಲ್ಲಿ ಸ್ಪೃಹಣೀಯ ಸ್ಥಾನವು ದೊರೆಯಿತು.

**ಅಕಬರನ ನಂತರದ ಬಾದಶಾಹರು :—** ಅಕಬರನು ಮಾಡಿದ ಪ್ರಗತಿಪರ ಸುಧಾರಣೆಗಳ ಸುಪರಿಣಾಮವು ಅವನ ನಂತರದ ಒಂದು ಶತಮಾನದಕಿಂತಲೂ ಹೆಚ್ಚು ಕಾಲದ ವರೆಗೆ ಉಳಿಯಿತು. ಆದರಿಂದಲೇ ಆತನ ದೊಡ್ಡತನವು ತಂತಾನೆ ಸಿದ್ಧವಾಗುತ್ತದೆ. ಮೇಲೆ ಮೇಲೆ ನೋಡಿದರೂ ಕೂಡ ಇ. ಸ. ೧೬೦೫ ರಿಂದ ೧೭೦೭ ರ ವರೆಗಿನ ನೂರು ವರ್ಷಗಳ ಕಾಲಾವಧಿಯಲ್ಲಿ ಮೊಗಲ ಸಾಮ್ರಾಜ್ಯದ ವಿಸ್ತಾರವು

ಬೆಳೆಯುತ್ತಲೇ ಹೋಯಿತು. ಔರಂಗಜೇಬನ ಅಧಿಕಾರಾವಧಿಯ ಕೊನೆಯ ಆರ್ಥಿಕ ಉನ್ನತಿಯು ಕಳಸಕ್ಕೇರಿತು. ಅಕಬರನ ಕಾಲದಲ್ಲಿ ರಾಜ್ಯದ ಉತ್ಪನ್ನವು ಹದಿಮೂರು ಕೋಟಿ ಇಪ್ಪತ್ತೊಂದು ಲಕ್ಷ ರೂಪಾಯಿ ಇದ್ದರೆ ಔರಂಗಜೇಬನ ಕಾಲದಲ್ಲಿ ಇಪ್ಪತ್ತೊಂಬತ್ತು ಕೋಟಿ ಎಪ್ಪತ್ತೇಳು ಲಕ್ಷದ ವರೆಗೆ ಏರಿತು. ವೈಭವದ ದೃಷ್ಟಿ-ಯಿಂದ ನೋಡಿದರೆ ಶಾಹಾಜಹಾನನ ಆಳಿಕೆಯು ಮೊಗಲ ಕಾಲದ ಸುವರ್ಣ ಯುಗವಾಗಿತ್ತು. ಅವನು ಕಟ್ಟಿಸಿದ ತಾಜಮಹಾಲ ಮೊದಲಾದ ಉತ್ಕೃಷ್ಟ ಕಟ್ಟಡ-ಗಳು ಅವರ ಕಲಾಕೃತಿಗಳಾಗಿವೆ. ಅದನ್ನು ನೋಡಿ ನಮ್ಮ ಕಣ್ಣಿಗೆ ಹಬ್ಬವನ್ನು ಮಾಡಿಕೊಳ್ಳಬೇಕೆಂದು ಪೃಥ್ವೀತಲದ ಮೂಲೆಗಳಿಂದ ಕಲಾಪ್ರೇಮಿ ಪ್ರೇಕ್ಷಕರು ಇಂದಿಗೂ ಬರುತ್ತಾರೆ. ಆ ಕಾಲದಲ್ಲಿಯ ಸಮುದ್ರ ವ್ಯಾಪಾರದ ವರ್ಣನೆಯನ್ನು ಬರ್ನಿಯರ್ ಎಂಬ ಫ್ರೆಂಚ್ ಪ್ರವಾಸಿಯು ಮಾಡಿರುವನು ಟ್ಯಾವರ್ಬಿಯರನು ಶಾಹಾಜಹಾನನ ನ್ಯಾಯಪ್ರಿಯತೆಯ ಸ್ತುತಿಯನ್ನು ಮುಕ್ತಕಂಠವಾಗಿ ಮಾಡಿರು-ವನು. "ಪ್ರಜಾಜನರಿಗೆ ಶಾಹಾಜಹಾನನು ಸಮ್ರಾಟನಿಗಿಂತಲೂ ತಂದೆಯ ಸಮಾನನಾಗಿ ತೋರುತ್ತಿದ್ದನು" ಎಂದು ಅವನು ಅಂದಿರುವನು.

ಆ ಕಾಲದ ಮೊಗಲ ಸಂಸ್ಕೃತಿಯಲ್ಲಿ ಹಿಂದು, ಇರಾಣಿ ಮತ್ತು ಮುಸಲ್ಮಾನಿ ಸಂಸ್ಕೃತಿಪ್ರವಾಹಗಳ ಸುಂದರ ಸಂಗಮವಾಗಿತ್ತು. ಬಹಿರಾಮಖಾನ, ಅಬುಲ್-ಫಜಲ್ ಮತ್ತು ಫೈಜಿ ಇವರಂತಹ ವಿದ್ವದ್ರತ್ನಗಳ ಪ್ರಭಾವದ ಮೂಲಕ ಅಕಬರನ ಕಾಲದಿಂದ ಇರಾಣಿ ಸಂಸ್ಕೃತಿಯ ಅಚ್ಚು ಒಡೆದು ಕಾಣುತ್ತಿತ್ತು. ಜಹಾಂಗೀರನ ಕಾಲದಲ್ಲಿ ನೂರಜಹಾನ್ ಮತ್ತು ಆಕೆಯ ಆಪ್ತೇಷ್ಟರ ಮೂಲಕ ಇರಾಣೀ ಸಂಸ್ಕೃತಿಯ ವರ್ಚಸ್ಸು ಇನ್ನಷ್ಟು ಬೆಳೆಯಿತು. ಭಾರತೀಯ ಮತ್ತು ಇರಾಣೀ ಸಂಸ್ಕೃತಿಗಳ ಎಲ್ಲ ಕ್ಷೇತ್ರಗಳಲ್ಲಿ ಕಂಡುಬರುತ್ತಿದ್ದ ಸಮನ್ವಯಕ್ಕೆ ವಿಶೇಷವಾದ ಕಳೆಯು ಶಾಹಾಜಹಾನನ ವೈಭವಶಾಲಿ ಆಳಿಕೆಯಲ್ಲಿ ಕಂಡುಬಂತು. ಚಿತ್ರಕಲೆ ಮತ್ತು ಸಂಗೀತಕಲೆ ಇವುಗಳಿಗೆ ದೊರೆಯುತ್ತಿದ್ದ ರಾಜಾಶ್ರಯವು ಔರಂಗಜೇಬನ ಕಾಲದಲ್ಲಿ ಕಡಿಮೆಯಾಯಿತು. ಆದರೂ ಈ ಕಲೆಗಳ ಪರಂಪರೆಯು ನಷ್ಟವಾಗಲಿಲ್ಲ. ಮೊಗಲ ಕಲೆ ಮತ್ತು ದರ್ಬಾರೀ ರೀತಿ-ನೀತಿ ಇವು ಇಂದಿಗೂ ವಿಶೇಷವಾಗಿ ಭಾರತದ ಉತ್ತರ ಭಾಗದಲ್ಲಿ ಉಳಿದಿವೆ.

ಜಹಾಂಗೀರ ಮತ್ತು ಶಾಹಾಜಹಾನರು ಅರ್ಧ ಶತಕದ ವರೆಗೆ ಆಳಿದರು. ಆದರೆ ಅಕಬರನಂತೆ ಔರಂಗಜೇಬನೊಬ್ಬನೆ ಅರ್ಧ ಶತಮಾನದ ವರೆಗೆ (೧೬೫೭-೧೭೦೭) ರಾಜ್ಯವಾಳಿದನು. ಈ ಇಡೀ ಶತಕದಲ್ಲಿ ಅಕಬರನು ನಿರ್ಮಿಸಿದ ರಾಜ್ಯವ್ಯವ-ಸ್ಥೆಯು ಅಬಾಧಿತವಾಗಿ ನಡೆಯಿತು. ಇಷ್ಟೇ ಅಲ್ಲದೆ, ಹೆಚ್ಚು ಕಾರ್ಯಕ್ಷಮ ಪದ್ಧತಿ-ಯಿಂದ ಅದು ಬಳಕೆಯಲ್ಲಿ ಇತ್ತು. ಒಕ್ಕಲಿಗರ ವರ್ಗ ಮತ್ತು ವ್ಯಾಪಾರಿಗಳ ವರ್ಗ ಮತ್ತು ಉದ್ಯೋಗ ವ್ಯವಸಾಯಗಳು ಇವುಗಳ ಏಳಿಗೆಯ ಕಡೆಗೆ ಹೆಚ್ಚು ಗಮನ ವನ್ನು ಕೊಡಲಾಯಿತು. ಆದರೆ ಧಾರ್ಮಿಕ ಧೋರಣವು ಮತ್ತೆ ಮೆಲ್ಲಮೆಲ್ಲನೆ ಅನು-ದಾರವಾಗುತ್ತ ಹೋಯಿತು. ಅಕಬರನಂತೆ ಜಹಾಂಗೀರನ ಧಾರ್ಮಿಕ ಮತಗಳು

ಉದಾರವಾಗಿದ್ದವು. ಅವನು ಎಲ್ಲ ಧರ್ಮಗಳನ್ನು ಸಮವಾಗಿ ನೋಡುತ್ತಿದ್ದನು. ಶಾಹಾಜಹಾನನು ಔರಂಗಜೇಬನಷ್ಟು ಧರ್ಮಾಂಧನಿರದಿದ್ದರೂ ಸನಾತನಿ ಮುಸಲ್ಮಾನ



ಇತಿಮಾದ—ಉದ್ದೌಲಾ ( ಆಗ್ರಾ )

ನಾಗಿದ್ದನು. ಅಕಬರನ ಮುಂಚಿನ ಕಾಲದಲ್ಲಿಯ ದರ್ಬಾರಿ ರೀತಿ ನೀತಿಗಳನ್ನು ಅವನು ಮತ್ತೆ ಆರಂಭಿಸಿದನು. ಆದರೂ ದಾರಾಶೇಖೋನಂತಹ ಉದಾರಮತವಾದಿ ವ್ಯಕ್ತಿಯು ಆ ಕಾಲದಲ್ಲಿ ಮಾನ ಮಾನ್ಯತೆಗಳನ್ನು ಪಡೆದಿದ್ದನೆಂಬ ಸಂಗತಿಯಿಂದ ಅಕಬರನ ಉಚ್ಚ ಧ್ಯೇಯವಾದವು ಇನ್ನೂ ಉಳಿದಿತ್ತೆಂಬ ಮಾತಿನ ನಿದರ್ಶನವು ದೊರೆಯುತ್ತದೆ. ಔರಂಗಜೇಬನು ದಾರಾನ ಅಮಾನುಷ ಕೊಲೆಯನ್ನು ಮಾಡಿದ್ದರಿಂದ ಮುಂದಿನ ಕಾಲದಲ್ಲಿಯ ದುಃಖದ ಘಟನೆಗಳ ಕೃಷ್ಣಛಾಯೆಯು ಬೀಳ-ತೊಡಗಿತು. ಹಿಂದು ದೇವಾಲಯಗಳ ವಿಧ್ವಂಸ, ಮತ್ತು ಜಜಿಯಾ ತೆರಿಗೆಯ ಒತ್ತಾಯ ಇವು ಆ ಕಾಲದ ಅನರ್ಥಗಳ ದುಶ್ಚಿಹ್ನಗಳಾಗಿದ್ದವು. ಶೀಖಜನರ ಬಂಡಾಯಗಳು ಮತ್ತು ರಾಜಪೂತರ ಕ್ರಾಂತಿ ಈ ಘಟನೆಗಳು ಮರಾಠಾ ಪ್ರಭುತ್ವದ ಉದಯದ ಪೂರ್ವಸೂಚನೆಗಳನ್ನು ಕೊಟ್ಟವು. ಆದರೆ ಔರಂಗಜೇಬನು ಧೃತರಾಷ್ಟ್ರನಂತೆ ಅಂಧನೂ, ದುರ್ಯೋಧನನಂತೆ ದುರಾಗ್ರಹಿಯೂ ಆಗಿದ್ದನು. ವಿವೇಕದ ಯಾವದೇ ಸಲಹೆಯನ್ನು ಕೇಳಿಕೊಳ್ಳುವ ಸಿದ್ಧತೆಯು ಅವನಲ್ಲಿ ಇದ್ದಿಲ್ಲ. ಜಜಿಯಾ ತೆರಿಗೆಯ ನಿಷೇಧಾರ್ಥವಾಗಿ ಶಿವಾಜಿಯು ಬರೆದ ಕಳಕಳಿಯ ಪತ್ರವು ಅರಣ್ಯರೋದನವೇ ಆಯಿತು. ವಿನಾಶದ ಬೀಜಗಳನ್ನು ಬಿತ್ತುವ ಉದ್ಯೋಗವನ್ನು ಅವನು ಹಾಗೆಯೇ ನಡೆಸಿದನು. ಅದರ ಕಟುಫಲಗಳನ್ನು ಆತನ ದಾಯಾದರು ತಿನ್ನಬೇಕಾಯಿತು.

**ಮೊಗಲ ಸಾಮ್ರಾಜ್ಯದ ಅವನತಿ:—** ಒಕ್ಕಟ್ಟೇ ಬಲವೆಂದು ಅಕಬರನು ತೋರಿಸಿಕೊಟ್ಟರೆ ಒಡಕಿನಿಂದ ತುಂಬಿದ ಮನೆಯು ಮುರಿದು ಬೀಳದೆ ಇರದು ಎಂಬುದನ್ನು ಔರಂಗಜೇಬನ ಅದೂರದರ್ಶಿ ಕೃತಿಯು ಸಿದ್ಧಮಾಡಿ ತೋರಿಸಿತು. ಅಕಬರನ ಮುತ್ಸದ್ದಿತನದ ಮೂಲಕ ಮುಸಲ್ಮಾನಿ ಪ್ರಭುತ್ವದ ಕಡು ವೈರಿಗಳಾಗಿದ್ದ ರಾಜಪುತರು ಮೊಗಲ ಸಾಮ್ರಾಜ್ಯದ ಆಧಾರಸ್ತಂಭರಾದರು. ಅವರನ್ನು ವೈರಿ-ಗಳನ್ನಾಗಿ ಮಾಡಿಕೊಳ್ಳುವದರಲ್ಲಿ ಹಾಗು ಹೊಸ ಹೊಸ ಶತ್ರುಗಳನ್ನು ಮಾಡಿ-ಕೊಳ್ಳುವಲ್ಲಿ ಔರಂಗಜೇಬನು ತನ್ನ ಕರ್ತೃತ್ವವನ್ನು ತೋರಿಸಿದನು.

ವೈಭವಸಂಪನ್ನವಾದ ಮತ್ತು ಸಾಮರ್ಥ್ಯಶಾಲಿಯಾದ ರೋಮನ ಸಾಮ್ರಾ-ಜ್ಯವು ಕುಸಿಯಿತು. ಅದರ ತಳದಲ್ಲಿ ಮುಖ್ಯವಾಗಿ ಎರಡು ಕಾರಣಗಳಿದ್ದವು. ಅಂತ-ರ್ಗತ ವಿಲಾಸಪ್ರಿಯತೆಯ ಅತಿರೇಕ ಮತ್ತು ಹೊರಗಿನಿಂದ ಆದ ಕಾಡು ಜನರ ಗುಂಪುಗಳ ದಾಳಿಗಳು. ಮೊದಲನೆ ಬಹಾದ್ದೂರಶಾಹನ ನಂತರ ದಿಲ್ಲಿಯ ಸಿಂಹಾಸನ ವನ್ನೇರಿದವರು ವಿಲಾಸಿಗಳೂ ದುರಾಚಾರಿಗಳೂ ಆಗಿದ್ದರು. ಅದರಿಂದ ಮೊಗಲ ಪ್ರಭುತ್ವದ ಅವನತಿಯು ಆರಂಭವಾಯಿತು. ಹೊರಗಿನ ಶತ್ರುಗಳ (ಅಬ್ದಾಲಿ ನಾದಿರಶಹ) ದಾಳಿಗಳ ಮೂಲಕ ಕುಸಿದು ಬೀಳತೊಡಗಿದ್ದ ಮೊಗಲ ಸಾಮ್ರಾ-ಜ್ಯವು ಪೂರ್ಣವಾಗಿ ಪತನವಾಯಿತು. ವಿಲಾಸಪ್ರಿಯತೆ ಮತ್ತು ಅಧಿಕಾರದ ಅಭಿಲಾಷೆ ಇವುಗಳ ಸಲುವಾಗಿ ಮೊಗಲ ಸಾಮ್ರಾಟರ ಅರಮನೆಯು ಕಪಟ ಕಾರ-ಸ್ಥಾನದ ಆಗರವಾಯಿತು. 'ತಖ್ತ ಯಾ ತಖ್ತಾ' (ಸಿಂಹಾಸನ ಇಲ್ಲವೆ ಕಬ್ರಸ್ತಾನ) ಇದು ಆನಂತರದ ಆನೀತಿವಂತ ರಾಜಪುತ್ರರ ಘೋಷವಾಕ್ಯವಾಯಿತು. ಕಾಮ-ರಾನನ ಕಾಲದಿಂದ ಮೊಗಲ ರಾಜ್ಯಮನೆತನದಲ್ಲಿ ವಿಶ್ವಾಸಘಾತ ಮತ್ತು ಅಂತಃಕಲಹ ಇವು ಆರಂಭವಾದವು. ಸಲೀಮನು ಆಕಬರನ ವಿರುದ್ಧ; ಖುಸ್ರೂನು ಜಹಾಂಗೀರನ ವಿರುದ್ಧ; ಮತ್ತು ಔರಂಗಜೇಬನು ಶಾಹಾಜಹಾನನ ವಿರುದ್ಧ ಸಾರಿದ ಬಂಡುಗಳು ಎಷ್ಟು ಸೂಚಕವಾಗಿವೆ? ಅಣ್ಣ ತಮ್ಮಂದಿರಲ್ಲಿಯ ಯಾದವೀ ಯುದ್ಧವು ಮತ್ತು ಅಮಾನುಷ ದುಷ್ಕೃತ್ಯಗಳು ಇವುಗಳಿಂದ ತುಂಬಿದ ಮೊಗಲ ಬಾದಶಾಹಿಯ ಉತ್ತ-ರಾರ್ಧವು ಒಂದು ಅತಿ ದುಃಖಪರ್ಯವಸಾಯಿಯಾದ ಇತಿಹಾಸವೇ ಆಗಿದೆ.

ಇಂತಹ ಪರಿಸ್ಥಿತಿಯಲ್ಲಿ ನಾದಿರಶಹ ಮತ್ತು ಅಹಮ್ಮದಶಹ ದುರಾಣಿ ಅವರಂತಹ ಆಕ್ರಮಕರು ದಿಲ್ಲಿಯ ಮೇಲೆ ಏರಿ ಬಂದುದು ಆಶ್ಚರ್ಯವಲ್ಲ. ಮೊಗಲ ಸಾಮ್ರಾಜ್ಯವು ಒಳಗಿಂದೊಳಗೆಯೇ ಎಷ್ಟು ಲಿಕಿಲಿಕಿಯಾಗಿತ್ತೆಂಬುದು ಈ ಪರಕೀಯ ಆಕ್ರಮಣದ ಕಾಲಕ್ಕೆ ಕಂಡುಬಂತು. ದಕ್ಷಿಣದಲ್ಲಿ ನಿಜಾಮ ಉಲ್–ಮುಲ್ಕ, ಪೂರ್ವಕ್ಕೆ ಆಯೋಧ್ಯೆಯ ವಜೀರ ಮತ್ತು ಬಂಗಾಲದ ನವಾಬ ಇವರು ಸ್ವತಂತ್ರ ಸತ್ತಾಧೀಶರಾದುದರಿಂದ ದಿಲ್ಲಿಯ ಮೊಗಲಬಾದಶಾಹಾನು ಒಬ್ಬ ನಾಮಧಾರಿ ಸತ್ತಾಧೀಶನಾದನು. ಶಾಹಾ ಆಲಮನ ಕಾಲದಲ್ಲಿಯಂತೂ ಮೊಗಲ ಅಧಿಕಾರವು "ದಿಲ್ಲಿಯಿಂದ ಪಾಲಮ್"ದ ವರೆಗೆ ಉಳಿದುಬಿಟ್ಟಿತು. ದಿಲ್ಲಿಯಲ್ಲಿ ಇರುತ್ತಿದ್ದ ಮೂವರು ಬೇರೆ ಬೇರೆ ಮೊಗಲಬಾದಶಾಹಾರು ತಮ್ಮ ತಮ್ಮ ಅರಮನೆಗಳಲ್ಲಿ ಕುಳಿತು ತಾವೇ

ಬಾದಶಾಹಾರಿಂದು ಹಾಸ್ಯಾಸ್ಪದ ರೀತಿಯಲ್ಲಿ ಸಾರತೊಡಗಿದರು. ಮೊಗಲರ ಅವ-ನತಿಯ ಈ ತಾತ್ಕಾಲಿಕ ಕಾರಣಗಳನ್ನಲ್ಲದೆ ಮೂಲಭೂತ ಸ್ವರೂಪದ ಕೆಲ ಕಾರಣಗಳನ್ನು ಲಕ್ಷ್ಯದಲ್ಲಿಡುವಂತಿದೆ.



ಔರಂಗಜೇಬ

ಮೊಗಲ ಸಾಮ್ರಾಜ್ಯದ ಅಳಿಗಾಲವು ಕಣ್ಣಿಗೆ ಕಾಣುವಷ್ಟು ಆಕಸ್ಮಿಕವಾಗಿ ಆಗಲಿಲ್ಲ. ಅದರ ವಿನಾಶದ ಬೀಜಾರೋಪಣವು; ಮುಂಚೆಯೆ ಆಗಿತ್ತು. ಆನು-ವಂಶಿಕ ರಾಜ್ಯಪದ್ಧತಿಯು ಮೂಲತಃ ಸದೋಷವಾಗಿದೆ. ಕರ್ತೃತ್ವಶಾಲಿಗಳಾದ ಅರಸರ ಪರಂಪರೆಯು ಮುಗಿಯಿತು. ಅದರಿಂದ ದರಬಾರದಲ್ಲಿ ಸರದಾರ ಸಯ್ಯದ ಬಂಧುಗಳಂತಹ ಸರದಾರರ ಪ್ರಸ್ಥವು ಬೆಳೆಯಿತು. ಬಾದಶಾಹಾರು ಪ್ರಬಲ ಸರದಾರರ ಕೈಗೊಂಬೆಗಳಾದರು.

ಸಿಂಹಾಸನಾರೂಢ ವ್ಯಕ್ತಿಯ ನಿಧನದ ನಂತರ ಪಟ್ಟಕ್ಕೆ ಯಾರು ಬರಬೇಕೆಂಬ ಬಗೆಗೆ ಮುಸಲ್ಮಾನ ರಾಜ್ಯಪದ್ಧತಿಯಲ್ಲಿ ಯಾವ ನಿಯಮಗಳಾಗಲಿ ಸಂಕೇತ ಗಳಾಗಲಿ ಇದ್ದಿಲ್ಲ. ಆದರಿಂದ ಪಟ್ಟಕ್ಕಾಗಿ ಯುದ್ಧಗಳು ಜರುಗಿ ರಾಜ್ಯದ ಶಕ್ತಿಯು ಕ್ಷೀಣವಾಯ್ತು. ಶಾಹಾಜಹಾನನು ಬದುಕಿದ್ದಾಗಲೇ ಅವನ ನಾಲ್ವರು ಮಕ್ಕಳಲ್ಲಿ ಆದ ಯಾದವಿಯು ಮೇಲಿನ ಮಾತನ್ನು ಸಿದ್ಧಪಡಿಸಲು ಒಂದು ಉದಾಹರಣೆಯಾ ಗಿದೆ.

ಇಂತಹ ಸ್ಥಿತಿಯಲ್ಲಿಯೂ ರಾಜ್ಯದ ಸ್ಥೈರ್ಯವನ್ನು ಉಳಿಸಿಕೊಂಡು ಹೋಗುವ ಸ್ವತಂತ್ರ ಸರದಾರವರ್ಗವಾಗಲಿ ಅಥವಾ ಧೀರ ಮನೋವೃತ್ತಿಯ ಮಧ್ಯಮ ವರ್ಗವಾಗಲಿ ಆ ಕಾಲದಲ್ಲಿ ಇದ್ದಿಲ್ಲ. ಇಂತಹ ವರ್ಗವಿದ್ದರೆ ಸಿಂಹಾಸನಾರೂಢ ವ್ಯಕ್ತಿಗಳು ಬದಲಾದರೂ ರಾಜ್ಯದ ವ್ಯವಸ್ಥೆಯು ಅಬಾಧಿತವಾಗಿ ಉಳಿಯುವದು. ಆದರೆ ದುರ್ದೈವದಿಂದ ರಾಜಪೂತ ರಾಜರನ್ನು ಔರಂಗಜೇಬನು ಶತ್ರುಗಳನ್ನಾಗಿ ಮಾಡಿಕೊಂಡದ್ದರಿಂದ ಅವರಲ್ಲಿದ್ದ ಅಂತಹ ಕರ್ತೃತ್ವವು ಈ ವಿಷಯದಲ್ಲಿ ನಿರುಪ-ಯುಕ್ತವಾಯ್ತು.

ಉತ್ತರ ಮೊಗಲ ರಾಜ್ಯವ್ಯವಸ್ಥೆಯಲ್ಲಿ ದರಬಾರದಲ್ಲಿ ಇರಾಣಿ, ತುರಕೀ, ಹಿಂದುಸ್ಥಾನೀ ಹೀಗೆ ಭೇದಗಳನ್ನು ಕಲ್ಪಿಸಿದ್ದರಿಂದ ಗೊಂದಲದ ಪರಿಸ್ಥಿತಿಯುಂಟಾ ಯಿತು.

ಮೊಗಲ ಸೇನೆಯ ಸೈನಿಕ ಕಾರ್ಯಕ್ಷಮತೆಯೂ ಕಾಲಾಂತರದಿಂದ ಇಳಿ ಯುತ್ತ ನಡೆಯಿತು. ಔರಂಗಜೇಬನ ದಕ್ಷಿಣದಿಕ್ಕಿನ ದಾಳಿಯಲ್ಲಿ ಇದು ನಿಚ್ಚಳವಾಗಿ ಕಂಡುಬಂದಿತು.

ಔರಂಗಜೇಬನ ದಕ್ಷಿಣ ದಿಕ್ಕಿನ ದಾಳಿಯ ಮೂಲಕ ಮತ್ತು ನಾದಿರಶಾಹಾ ಮೊದಲಾದವರು ಮಾಡಿದ ಲೂಟಿಗಳಿಂದ ಕೇಂದ್ರದಲ್ಲಿಯ ಬೊಕ್ಕಸವು ಬರಿದಾಗಿ ಬಿಟ್ಟಿತ್ತು. ದಿನದಿನಕ್ಕೆ ರಾಜ್ಯದ ವ್ಯವಸ್ಥೆಯ ನೀರಿಗೆಗಳು ಮುರಿದು ಒಂದೊಂದು ಪ್ರಾಂತವು ಸಿಡಿದು ಹೋಯ್ತು. ವ್ಯಾಪಾರವು ಯುರೋಪಿಯನ್ ಜನರ ಹಸ್ತಗತ ವಾಯ್ತು. ಆದರಿಂದ ರಾಜ್ಯದ ಆರ್ಥಿಕ ಸ್ಥಿತಿಯು ಔರಂಗಜೇಬನ ಕಾಲದಿಂದ ಇಳಿಮೊಗವಾಗಹತ್ತಿದ್ದುದು ಹಾಗೆಯೆ ಮುಂದುವರಿಯಿತು.

'ಯಥಾ ರಾಜಾ ತಥಾ ಪ್ರಜಾ' ಎಂಬಂತೆ ಆಗಿನ ಪರಿಸ್ಥಿತಿಯಾಗಿತ್ತು. ರಾಜಮನೆತನದಲ್ಲಿ ಮತ್ತು ಸರದಾರವರ್ಗದಲ್ಲಿ ಆರಂಭವಾಗಿದ್ದ ಅಧಃಪಾತವು ಕೆಳಮಟ್ಟದವರೆಗೂ ಹಬ್ಬಿದ್ದುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಬಂಗಾರಕ್ಕೇ ತುಕ್ಕು ಹತ್ತಿದರೆ ಕಬ್ಬಿಣವು ಜಂಗುತಿನ್ನುವದೇನಾಶ್ಚರ್ಯ!

ಒಂದು ಕಾಲಕ್ಕೆ ವೈಭವಶಿಖರದ ಮೇಲಿದ್ದ ಮೊಗಲ ಸಾಮ್ರಾಜ್ಯದ ಅವಶೇಷ ಗಳನ್ನು ಮುಂದೆ ಮರಾಠರೂ ಆಂಗ್ಲರೂ ಹೇಗೆ ಹಂಚಿಕೊಂಡರೆಂಬ ಈ ಇತಿಹಾಸವು ಮುಂದಿನ ಒಂದು ಭಾಗದಲ್ಲಿ ಬರಲಿರುವದು. ಅದನ್ನು ನಾವು ಮುಂದೆ ಓದುವೆವು.



ಮೊಗಲಕಾಲದ ರಾಜಕುಮಾರರು

## ಅವತರಣಿಕೆ

ಲಾರೆನ್ಸ ಬಿನಿಯನ್ ಎಂಬ ಕಲಾಕಾರ ಮತ್ತು ಇತಿಹಾಸಕಾರನು ಅಕಬರನ ದೊಡ್ಡತನದ ಬಗೆಗೆ ವ್ಯಕ್ತಪಡಿಸಿದ ವಿಚಾರಗಳು ಹೀಗಿವೆ :—

"ಭಿನ್ನ ಭಿನ್ನ ವಂಶ ಮತ್ತು ಬೇರೆ ಬೇರೆ ಧರ್ಮ ಇವುಗಳ ವಿಷಯದಲ್ಲಿ ನಿಷ್ಠೆಯನ್ನಿಟ್ಟುಕೊಂಡು ನಾನಾಬಗೆಯ ಜನರನ್ನೊಳಗೊಂಡ ಏಕರಾಷ್ಟ್ರವನ್ನು ನಿರ್ಮಿಸಿದ ಮಹಾಕಾರ್ಯವು ಅಕಬರನ ಮಹತ್ವದ ವೈಶಿಷ್ಟ್ಯವಾಗಿದೆ. ಅಕಬರನು ತನ್ನಲ್ಲಿದ್ದ ಅಸಾಮಾನ್ಯ ಸಂಘಟನಾಚಾತುರ್ಯದ ಉಪಯೋಗವನ್ನು ಮಾಡಿಕೊಂಡು ಈ ಕಾರ್ಯವನ್ನು ಮಾಡಿದನು. ಆದರಿಂದ ಬಾದಶಹಾನ ಧೋರಣವು ನ್ಯಾಯವೂ ಯೋಗ್ಯವೂ ಆಗಿದೆಯೆಂಬ ಮಾತು ಪ್ರಜೆಗಳಿಗೆ ಮನವರಿಕೆಯಾಯ್ತು. ಪರಕೀಯನಾಗಿದ್ದರೂ ತಾನು ಗೆದ್ದ ದೇಶದೊಡನೆ ಆವನು ಸಮರಸನಾದನು. ಆತನು ಹಾಕಿಕೊಟ್ಟ ವ್ಯವಸ್ಥೆಯು ದೀರ್ಘಕಾಲದ ವರೆಗೆ ಬಾಳಿತು. ಅಕಬರನ ರಾಜ್ಯವ್ಯವಸ್ಥೆಯಲ್ಲಿಯ ತತ್ವಗಳನ್ನು, ತಂತ್ರಪದ್ಧತಿಗಳನ್ನು ಮುಂದೆ ಆಂಗ್ಲರು ಬಹಳವಾಗಿ ಅಂಗೀಕರಿಸಿದರು."

## ಅಭ್ಯಾಸ

೧. ಭಾರತದ ಹೊರಗಿನ ದೇಶಗಳಲ್ಲಾದ ಮುಸಲ್ಮಾನರ ಆಕ್ರಮಣ ಹಾಗೂ ಭಾರತದಲ್ಲಾದ ಆಕ್ರಮಣ ಇವುಗಳಲ್ಲಿ ಪರಿಣಾಮದ ದೃಷ್ಟಿಯಿಂದ ಯಾವ ಭೇದವು ಕಂಡುಬರುತ್ತದೆ?

೨. ಹಿಂದುಸ್ಥಾನದ ರಾಜ್ಯವನ್ನು ಬಾಬರನು ಯಾವ ಸಂಗತಿಗಳ ಬಲದಿಂದ ಸಂಪಾದಿಸಿದನು? ಆ ರಾಜ್ಯವನ್ನು ಉಳಿಸಿಕೊಳ್ಳುವಲ್ಲಿ ಹುಮಾಯೂನನು ಯಾಕೆ ಅಯಶಸ್ವಿಯಾದನು?

೩. ಶೇರಶಾಹಾನ ರಾಜ್ಯವ್ಯವಸ್ಥೆಯಲ್ಲಿಯ ಮೂರು ವೈಶಿಷ್ಟ್ಯಪೂರ್ಣ ಉಪಕ್ರಮಗಳನು ಹೇಳಿರಿ.

೪. "ಭಾರತೀಯ ರಾಷ್ಟ್ರವಾದದ ಜನಕ" ಎಂಬ ಪದವಿಯು ಅಕಬರನಿಗೆ ಹೇಗೆ ಸಾರ್ಥಕವಾಗಿದೆಯೆಂಬುದನ್ನು ತೋರಿಸಿರಿ.

೫. ಅಕಬರನ ಸುಸಂಸ್ಕೃತ ಮನಸ್ಸಿನ ಅಚ್ಚು ಆತನ ರಾಜ್ಯಕಾರಭಾರದ ಮೇಲೆ ಹೇಗೆ ಬಿದ್ದಿದ್ದಿತೆಂಬುದನ್ನು ತೋರಿಸಿರಿ.

೬. ಮೊಗಲ ಸಾಮ್ರಾಜ್ಯದ ಅವನತಿಯ ಕಾರಣಗಳನ್ನು ಕೊಡಿರಿ.

## ೧೪ನೆಯ ಪಾಠ

# ಮರಾಠರ ಸ್ವರಾಜ್ಯ

**ವಿಷಯ ಪ್ರವೇಶ :—** ಮೊಗಲರ ಆಡಳಿತೆಯ ಹ್ರಾಸವು ಹೇಗಾಯಿತೆಂಬುದರ ವಿಚಾರವನ್ನು ಹಿಂದಿನ ಪಾಠದಲ್ಲಿ ಮಾಡಿದೆ. ಮರಾಠರ ಉದಯುವೇ ಮೊಗಲರ ಹ್ರಾಸದ ಒಂದು ಮುಖ್ಯ ಕಾರಣ. ಮೊಗಲರ ನಂತರ ಭಾರತದ ರಾಜಕೀಯ ವರ್ಚಸ್ಸು ಮರಾಠರ ಕಡೆಗೆ ಹೋಯಿತೆಂಬುದನ್ನು ಮರೆಯಲಿಕ್ಕಾಗದು. ಮೊಗಲರ ನಂತರ ಭಾರತದ ಸಾರ್ವಭೌಮತ್ವವು ಇಂಗ್ಲಿಷರ ಕಡೆಗೆ ಹೋಯಿತೆಂದು ಹಲವು ಇತಿಹಾಸಕಾರರು ವಿಶೇಷತಃ ಆಂಗ್ಲ ಲೇಖಕರು ಸತ್ಯಾಪಲಾಪವನ್ನು ಮಾಡಿರುವರು. ಆದರೆ ವಸ್ತುಸ್ಥಿತಿಯು ಹಾಗಿರುವದಿಲ್ಲ. ಔರಂಗಜೇಬನ ವೈಭವ ಸೂರ್ಯನು ಅಸ್ತಂಗತನಾಗಹತ್ತಿದ ಸಮಯದಲ್ಲಿಯೇ ಭಾರತದ ಕ್ಷಿತಿಜದ ಮೇಲೆ ಮರಾಠರ ಆಳಿಕೆಯ ಸೂರ್ಯೋದಯುವಾಯಿತೆಂಬುದು ನಿರ್ವಿವಾದವಾಗಿದೆ. ಶಿವಾಜಿಯ ರಾಜ್ಯಾಭಿಷೇಕದ ಕಾಲದಿಂದ ಅಂದರೆ ಇ. ಸ. ೧೬೭೪ ರಿಂದ ಖರ್ಡೆ ಕಾಳಗದ ವರೆಗೆ ಅಂದರೆ ೧೭೯೫ರ ವರೆಗೆ ಮರಾಠರ ಆಳಿಕೆಯು ಹೆಚ್ಚುಕಡಿಮೆ ಪ್ರಮಾಣದಲ್ಲಿ ಏರಿಕೆಯಲ್ಲಿತ್ತು. ನೂರು, ನೂರಿಪ್ಪತ್ತೈದು ವರುಷಗಳವರೆಗೆ ಇಡಿ ಹಿಂದುಸ್ಥಾನದಲ್ಲಿ ತನ್ನ ವೈಭವವನ್ನು ಮೆರೆಸಿದ ಮರಾಠರನ್ನು ಉಪೇಕ್ಷಿಸಿ ಅವರಿಗೆ 'ಗುಡ್ಡಗಾಡದಲ್ಲಿಯ ಇಲಿ', 'ಕಳ್ಳರು', 'ದರೋಡೆಗಾರರು' ಎಂಬ ಹೊಲಸು ವಿಶೇಷಣಗಳಿಂದ ಕರೆದ ಇತಿಹಾಸಕಾರರು ಮರಾಠರನ್ನು ಪೂರ್ವಗ್ರಹದೂಷಿತ ಮನೋವೃತ್ತಿಯಿಂದ ನೋಡಿದರೆಂದು ಹೇಳಬೇಕಾಗುವದು. ನಾವು ಮಾತ್ರ ಎಲ್ಲ ಬಗೆಯ ಸಾಧಕಬಾಧಕ ಪ್ರಮಾಣಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಮರಾಠರ ಇತಿಹಾಸದ ಸ್ವರೂಪವನ್ನು ಅತ್ಯಂತ ನಿರ್ವಿಕಾರ ದೃಷ್ಟಿಯಿಂದ ತಿಳಿದುಕೊಳ್ಳುವಾ.

**ಮರಾಠರು ಮತ್ತು ಅವರ ದೇಶ :—** ಮಹಾರಾಷ್ಟ್ರ ದೇಶದಲ್ಲಿ ಮರಾಠರು ಇರುವ ಭಾಗವು. ಉತ್ತರ ಭಾರತದ ದೃಷ್ಟಿಯಿಂದ ಬಹಳ ಕಡಿಮೆ ಫಲದ್ರೂಪವಿದೆ. 'ಕಲ್ಲು ಗುಂಡುಗಳ ದೇಶ' ಎಂದು ಮಾಡಿದ ವರ್ಣನೆಯು ಯಥಾರ್ಥವಾಗಿದೆ. ಗುಡ್ಡಗಾಡು ಪ್ರದೇಶದಲ್ಲಿ ಇರುವ ಮರಾಠರು ಬಹಳ ಕಷ್ಟದಿಂದ ಜೀವಿಸಬೇಕಾಗುವದು. ಆದುದರಿಂದ ಅಲ್ಲಿಯ ಜನರು ಕಷ್ಟ ಸಹಿಷ್ಣುಗಳೂ ಕಟ್ಟಾಳುಗಳೂ ಆಗಿರುವರು. ವಿಶೇಷವಾಗಿ ಘಟ್ಟದ ಮೇಲಿನ ಜನರು ಸ್ಪಾರ್ಟನ್‌ರಂತೆ ವೀರವೃತ್ತಿಯ ಮತ್ತು ಯುದ್ಧಪ್ರವೃತ್ತಿಯ ಜನರು. ಎರಡನೇ ಪುಲಕೇಶಿಯ ಕಾಲಕ್ಕೆ ಅಂದರೆ ೭ನೆಯ ಶತಮಾನದಲ್ಲಿ ಮಹಾರಾಷ್ಟ್ರಕ್ಕೆ ಬಂದಿದ್ದ ಚೀನೀ ಧರ್ಮಪಂಡಿತ ಯುವಾನಶ್ವಾಂಗನು ಮಹಾರಾಷ್ಟ್ರದಲ್ಲಿ ವಾಸಿಸುವ ಜನರ ಬಗ್ಗೆ ತೆಗೆದ ಉದ್ಗಾರಗಳು ಬಹಳ ಅರ್ಥಪೂರ್ಣವಾಗಿವೆ. "ಇಲ್ಲಿಯ ಜನರು ಬಹಳ ಸ್ವಾಭಿಮಾನಿಗಳು ಮತ್ತು ವೀರವೃತ್ತಿಯವರಾಗಿದ್ದು


ನರ್ಮದಾ ನದಿ
ತಾಪಿ ನದಿ
ಸುರತ
ಸಾಲ್ಹೇರ
ನಾಶೀಕ
ಔರಂಗಾಬಾದ
ಜುನ್ನರ
ಅಹಮದನಗರ
ಖರ್ಡೆ
ಉದಗೀರ
ಶಿವನೇರಿ
ಗೋದಾವರಿ ನದಿ
ಬೀದರ
ವಸಈ
ಮುಂಬಯಿ
ಕುಲಾಬಾ
ಜಂಜೀರಾ
ರಾಯಗಡ
ಸಾತಾರಾ
ಗೋವಳಕೊಂಡ
ಸಂಗಮೇಶ್ವರ
ವಿಶಾಲಗಡ
ಹೈದರಾಬಾದ
ರಾಜಾಪುರ
ಪನ್ಹಾಳ
ವಿಜಾಪುರ
ಕೊಲ್ಹಾಪುರ
ಸಿಂಧುದುರ್ಗ
ಕೃಷ್ಣಾ ನದಿ
ಬೆಳಗಾಂವಿ
ತುಂಗಭದ್ರಾ ನದಿ
ಫೋಂಡಾ
ಗೋವೆ
ಬಳ್ಳಾರಿ
ಹುಬ್ಬಳ್ಳಿ
ಕಾರವಾರ
ಬದನೂರ
ಬೆಂಗಳೂರ
ಜಿಂಜೀ
ಮೈಸೂರು
ಕಾವೇರಿ ನದಿ
ಕಾಲಿಕತ್ರ
ತಂಜಾವರ
– – – ಶಹಾಜಿಯ ಜಹಾಗೀರು
– - – - ಮರಾಠಾ ರಾಜ್ಯ
........ ಶಿವಾಜಿಯ ಸ್ವರಾಜ್ಯ

ಮರಾಠರ ಸ್ವರಾಜ್ಯ

ಅವರು ತಮಗೆ ಉಪಕಾರ ಮಾಡಿದವರಗೂಡ ಸೌಜನ್ಯದಿಂದ ವರ್ತಿಸುವರು. ಅವರಿಗೆ ತೊಂದರೆ ಕೊಡುವವರ ಮೇಲೆ ಮಾತ್ರ ಅವರು ಸೇಡು ತೀರಿಸಿಕೊಳ್ಳದೆ ಬಿಡಲಾರರು" ಎಂದು ಅವನು ಬರೆದಿರುವನು. ಮರಾಠರ ಈ ಸ್ವಭಾವವು ಬೆಳಕಿಗೆ ಬರಲು ಶಿವಾಜಿಯು ಕಾಲಕ್ಕಿಂತ ಮೊದಲು ಅವಕಾಶವು ದೊರೆಯಲಿಲ್ಲ. ಶಿವಾಜಿಯು ಈ ಗುಣವನ್ನು ಪರಿಪೋಷಿಸಲಿಕ್ಕೆ ಬಹಳ ಚಾತುರ್ಯವನ್ನು ತೋರಿಸಿದನು. ಶ್ರೀ ರಾಮಚಂದ್ರನು ವಾನರಸೇನೆಯನ್ನು ಕೂಡಿಸಿ ರಾವಣನ ಪಾರುಪತ್ಯ ಮಾಡಿದಂತೆ ಲಂಗೋಟಿ ಹಾಕಿಕೊಳ್ಳುವ ಮವಾಳಿಗಳು ಮತ್ತು ಕೋಳಿ ಜನರನ್ನು ಸಂಗ್ರಹಿಸಿ ಶಿವಾಜಿಯು ಮರಾಠರ ಆಡಳಿತೆಯನ್ನು ಸ್ಥಾಪಿಸಿದನು. ಯಃಕಶ್ಚಿತರೆಂದು ಭಾವಿಸಲಾಗುತ್ತಿದ್ದ ಮವಾಳರು ಮತ್ತು ಕೋಳಿ ಜನರು ಬಲಾಢ್ಯ ಮೊಗಲರನ್ನು ನಡುಗಿಸಿಬಿಟ್ಟ ಘಟನೆಯು ಎಷ್ಟೊಂದು ಮನೋವೇಧಕವಾಗಿದೆ!

ಮರಾಠರ ಈ ಪರಾಕ್ರಮಕ್ಕೆ ಅವರ ಸ್ವಭಾವವೈಶಿಷ್ಟ್ಯವಲ್ಲದೆ ಮಹಾರಾಷ್ಟ್ರದ ಭೌಗೋಲಿಕ ಪರಿಸ್ಥಿತಿಯೂ ಅನುಕೂಲವಾಗಿದೆ. ಗುಡ್ಡಗಾಡು ಪ್ರದೇಶವಿದ್ದುದರಿಂದ 'ಗತ್ತುಗಾರಿಕೆ'ಯ ಪದ್ಧತಿಯಿಂದ ಹೋರಾಡಿ ಬಲಾಢ್ಯ ಶತ್ರುಗಳನ್ನು ಹಣ್ಣಿಗೆ ತರಲು ಮರಾಠರಿಗೆ ಸಾಧ್ಯವಾಯಿತು. ಸಮುದ್ರ ಸಮೀಪಕ್ಕೆ ಇದ್ದುದರಿಂದ ಮೀನಗಾರರು ಭಂಡಾರಿಗಳು ಮೊದಲಾದ ಕುಶಲ ನಾವಿಕರು ಉದಯಕ್ಕೆ ಬಂದು ಕಾರ್ಯಕ್ಷಮ ಮರಾಠಾ ನೌಕಾಪಡೆಯನ್ನು ಸಂಸ್ಥಾಪಿಸಲು ಶಕ್ಯವಾಯಿತು. ಗುಡ್ಡಗಾಡು ಪ್ರದೇಶದಲ್ಲಿ ಕೋಟೆಕೊತ್ತಲಗಳನ್ನು ಕಟ್ಟಿಕೊಂಡು ಮರಾಠರಿಗೆ ತಮ್ಮ ಪ್ರದೇಶವನ್ನು ರಕ್ಷಿಸಿಕೊಳ್ಳಲು ಅವಕಾಶವುಂಟಾಯಿತು. ಈ ಸಂಬಂಧವಲ್ಲಿ ಶಿವಾಜಿಯು ಮೊಗಲ ಅಧಿಕಾರಿಗಳಿಗೆ ಕಳಿಸಿದ ಒಂದು ಪತ್ರದಲ್ಲಿ ಬಹಳ ಸಮರ್ಪಕ ಉದ್ಗಾರಗಳನ್ನು ತೆಗೆದಿರುವನು. "ಔರಂಗಜೇಬನ ಆಜ್ಞೆಯಂತೆ ನಮ್ಮ ದೇಶ ಮತ್ತು ಕೋಟೆ ಕೊತ್ತಳಗಳನ್ನು ವಶಪಡಿಸಿಕೊಳ್ಳಬೇಕೆಂಬ ನಿಮ್ಮ ಪ್ರಯತ್ನವು ಅನೇಕ ವರ್ಷಗಳಿಂದ ನಡೆದೇ ಇದೆ. ಅಷ್ಟೊಂದು ದ್ರುತಗತಿಯ ಪ್ರಯತ್ನರೂಪೀ ಅಶ್ವಕ್ಕೆ ಕೂಡ ನನ್ನ ಈ ದುರ್ಲಂಘ್ಯ ಪ್ರದೇಶದ ಮೇಲೆ ದಾಳಿಯನ್ನು ಮಾಡುವದು ಶಕ್ಯವಿಲ್ಲ. ಈ ಪ್ರದೇಶವನ್ನು ಗೆಲ್ಲುವ ಹೆಸರನ್ನೇ ಎತ್ತಬೇಡಿರಿ. ನನ್ನ ಮಾತೃ-ಭೂಮಿಯು ಕಲ್ಯಾಣ, ಬೀದರಗಳಲ್ಲ. ಇನ್ನೂರು ಯೋಜನೆ ಉದ್ದ ಮತ್ತು ನಲ್ವತ್ತು ಯೋಜನೆ ಅಳವಾಗಿರುವ ಉತ್ತುಂಗ ಪರ್ವತ ರಾಜಶ್ರೀಯಿಂದ ವೇಷ್ಟಿಸಿದ ಮತ್ತು ಎಲ್ಲೆಡೆ ಹಳ್ಳ, ಝರಿಗಳಿಂದ ತುಂಬಿದ ಪ್ರದೇಶವಾಗಿದೆ. ನನ್ನ ದೇಶವನ್ನು ರಕ್ಷಿಸುವದು ನನ್ನ ಕರ್ತವ್ಯವಾಗಿದೆ" ಎಂದು ಶಿವಾಜಿಯು ಬರೆದಿರುವನು. ಈ ಪರಿಸ್ಥಿತಿಯ ಮತ್ತು ಸ್ವಾಭಾವಿಕ ಗುಣದ ಬಲದಿಂದ ಶಾಂತಪ್ರಿಯ ಮತ್ತು ಸರಳ ವೃತ್ತಿಯ ರೈತರು ಮತ್ತು ಕೋಳಿ ಜನರು ದಕ್ಷಿಣದಲ್ಲಿಯ ಬಲಾಢ್ಯ ಸುಲ್ತಾನರೊಡನೆ ಮತ್ತು ಬಾದಶಾಹರೊಡನೆ ಹೋರಾಡಿದರು. ಸದಾ ರೈತರಾಗಿದ್ದ ಮರಾಠರು ವೀರಪುರುಷರೆಂತಾದರೆಂಬುದನ್ನು ವಿಚಾರಿಸುವಾಗ ಗುಬ್ಬಚ್ಚಿಗಳನ್ನು ಗರುಡ ಪಕ್ಷಿಗಳನ್ನಾಗಿ ಮಾಡಿದ ಶೀಖರ ಗುರುಗೋವಿಂದಸಿಂಗರ ನೆನಪಾಗದೆ ಇರದು. ಧರ್ಮ

ಭಾವನೆಯು ಪ್ರಜ್ವಲಿತವಾದುದರಿಂದ ಶೀಖರು ತಮ್ಮ ಕೈಯಲ್ಲಿಯ ನೇಗಿಲನ್ನೊಗೆದು ಭಲ್ಲೆಗಳನ್ನು ತೆಗೆದುಕೊಂಡಂತೆ ಮರಾಠರೂ ತಮ್ಮ ಕೈಯಲ್ಲಿ ಶಸ್ತ್ರಗಳನ್ನು ಧರಿಸಿದರು.

**ಧಾರ್ಮಿಕ ಪುನರುಜ್ಜೀವನ:—** ಮುಸಲ್ಮಾನರು ಮಾಡಿದ ಧರ್ಮಹ್ರಾಸವನ್ನೆದುರಿಸುವದಕ್ಕಾಗಿ ಉತ್ತರದಲ್ಲಿ ಶೀಖ ರಾಜ್ಯದ ಸ್ಥಾಪನೆಯಾದಂತೆ ಮೊದಲು ವಿಜಯನಗರದಲ್ಲಿ, ಅದರ ತರುವಾಯದಲ್ಲಿಯೆ ಮರಾಠರ ಆಡಳಿತೆಯು ದಕ್ಷಿಣದಲ್ಲಿ ಸ್ಥಾಪಿತವಾಯಿತು. ಹಿಂದುಧರ್ಮ ಮತ್ತು ಸಂಸ್ಕೃತಿ ರಕ್ಷಣೆಯ ಹೊಣೆಯು ವಿಜಯನಗರದವರಿಂದ ಮರಾಠರ ಮೇಲೆ ಬಿದ್ದಿತು. ಮರಾಠರ ಮನಸ್ಸು ಆಗ ಬಡಿದೆಬ್ಬಿಸಿದವರಂತೆ ಜಾಗ್ರತವಾಗಿತ್ತು. ಜ್ಞಾನೇಶ್ವರ, ನಾಮದೇವರಿಂದ ಹಿಡಿದು ತುಕಾರಾಮ ರಾಮದಾಸರ ವರೆಗೆ ಅನೇಕ ಸಾಧು ಸಂತರು ರಾಷ್ಟ್ರದಲ್ಲಿ ಉದಯಹೊಂದಿದ್ದರು. ಅವರೆಲ್ಲ ತಮ್ಮ ಪ್ರಭಾವಿಯಾದ ವಾಣಿಯಿಂದ ಮತ್ತು ಲೆಕ್ಕಣಿಕೆಯಿಂದ ಮರಾಠರಲ್ಲಿ ನವಚೈತನ್ಯವನ್ನುಂಟುಮಾಡಿದರು. ಈ ಸಂತರ ಮಾಲಿಕೆಯಲ್ಲಿ ಎಲ್ಲ ವರ್ಗಗಳಲ್ಲಿಯ ಸ್ತ್ರೀಯರು ಮತ್ತು ಪುರುಷರು ಆದರಣೀಯ ವಿಭೂತಿಗಳಾಗಿ ಹೋದರು. ಜ್ಞಾನದೇವರು ಬ್ರಾಹ್ಮಣರು, ನಾಮದೇವ ಶಿಂಪಿಗರು, ಗೋರಾ ಕುಂಬಾರ, ಸಾವತಾ ಮಾಳಿ, ನರಹರಿ ಪತ್ತಾರ, ಸೇನಾ ಕ್ಷೌರಿಕ, ಚೋಖಾ ಹೊಲೆಯ, ವೈಶ್ಯ ತುಕಾರಾಮ, ಸಂತ ಸಖುಬಾಯಿ ಮತ್ತು ಜನಾಬಾಯಿ ಇವರು ಒಕ್ಕಲಗಿತ್ತಿಯರು. ವೇಶ್ಯಾ ಕುಟುಂಬದಲ್ಲಿಯ ಕಾನ್ಹೋಪಾತ್ರಾ ಮೊದಲಾದ ಹೆಸರು ಚಿರಪರಿಚಿತವಿರುವವು. ಈ ಸಾಧುಸಂತರು ತಮ್ಮ ಉಪದೇಶವನ್ನು ಜನರ ಭಾಷೆಯಲ್ಲಿ ಮಾಡಿ ಮರಾಠರ ಮನಸ್ಸಿನಲ್ಲಿ ಧರ್ಮಾಭಿಮಾನದ ಜ್ಯೋತಿಯನ್ನು ಹೊತ್ತಿಸಿದರು. ಈ ಸಂತರ ಧರ್ಮಕಲ್ಪನೆಯು ಬಹಳ ವ್ಯಾಪಕವಾಗಿತ್ತು. ಹಿಂದುಗಳಂತೆ ಬೌದ್ಧರು, ಜೈನರು ಅಷ್ಟೇ ಅಲ್ಲ, ಮುಸಲ್ಮಾನರಿಗೆ ಕೂಡ ತಮ್ಮ ತಮ್ಮ ಧರ್ಮಗಳಂತೆ ನಡೆಯಲು ಅವಕಾಶವಿರಬೇಕೆಂಬ ಅಶೋಕ, ಹರ್ಷ ಮೊದಲಾದವರ ಧಾರ್ಮಿಕ ಔದಾರ್ಯದ ಪರಂಪರೆಯನ್ನು ಮಹಾರಾಷ್ಟ್ರ ಸಂತರು ತಮ್ಮ ಭಾಗವತ ಧರ್ಮಪ್ರಚಾರದ ಮೂಲಕ ಪ್ರಸಾರ ಮಾಡಿದರು. ಇದೇ ಉದಾರ ಧಾರ್ಮಿಕ ಧೋರಣವನ್ನು ಶಿವಾಜಿ, ಪೇಶವೆ ಮೊದಲಾದವರು ಅವಲಂಬಿಸಿದರು. ಈ ಸಾಧುಸಂತರು ಇನ್ನೊಂದು ಮಹತ್ವದ ಅವಶ್ಯ ಉಪದೇಶ ಮಾಡಿದರು. ಸಾಮಾಜಿಕ ಸಮತೆಯೆ ಅದಾಗಿತ್ತು. ಪರಮಾತ್ಮನ ದರಬಾರದಲ್ಲಿ ಎಲ್ಲವೂ ಹಾಗೆಯೆ ಸಮಾನವಾಗಿರುವದೆಂಬ ಬೋಧೆಯನ್ನು ಸಂತರು ಬಿಂಬಿಸಿದರು. ಅವರು ಪುರಸ್ಕರಿಸಿದ 'ಭಕ್ತಿಮಾರ್ಗವು' ಸಮಾನತೆಯನ್ನು ಆಧರಿಸಿದೆ. ಪಾಂಡುರಂಗನು ಭಕ್ತರನ್ನೆಲ್ಲ ಸಮಾನತೆಯಿಂದ ನೋಡುವನು. ಭಕ್ತನು ಯಾವದೇ ಜಾತಿಯವನಿರಲಿ ಪಂಥದವನಿರಲಿ ಪರಮಾತ್ಮನ ದೃಷ್ಟಿಯಲ್ಲಿ ಅವನು ಸಮಾನನು. ಪಂಢರಪುರದ ವಾರಕರಿಯಲ್ಲಿ ಇರುವ ಸಾಮಾಜಿಕ ಸಮತ್ವವನ್ನು ಇಂದಿಗೂ ಕಾಣಬಹುದು. ಈ ಸಾಧುಸಂತರು ಬೋಧಿಸಿದ ಭಾಗವತ ಧರ್ಮವು ಕೇವಲ ನಿವೃತ್ತಿಪರವಾಗಿತ್ತೆಂಬ ತಿಳಿವಳಿಕೆ ಸರಿಯಾದುದಲ್ಲ. ಈ ಸಂತರು ಮಹಾರಾಷ್ಟ್ರೀಯರನ್ನು

ಕೇವಲ ತಾಳಕುಟ್ಟುವ ಪಂಢರಪುರದ ವಾರಕರಿಯರನ್ನು ಮಾಡಲಿಲ್ಲ. ಅವರು ಬೋಧಿಸಿದ ಧರ್ಮವು ಕೃತಿಪ್ರಧಾನವಾಗಿದ್ದಿತು.

ಯವನರ ತೊಂದರೆಯು ವಿಪರೀತವಾದದ್ದರಿಂದ, ಜನರು ದೇವರನ್ನು ಮೊರೆ ಹೊಗುವರು. ಇದೇ ನಮ್ಮ ಮುಕ್ತಿಯ ಮಾರ್ಗವೆಂದು ನಾಮದೇವರು ಹೇಳುವರು.

ತುಕಾರಾಮರು "ವಿಷ್ಣುದಾಸರಾದ ನಾವು ಮಿದುವಾದ ಮೇಣದಿಂದಲೂ ಕಠಿಣವಾದ ವಜ್ರವನ್ನು ಭೇದಿಸಬಲ್ಲೆವು" ಎಂದು ಹೇಳಿದರು. ಎಷ್ಟೊಂದು ಆತ್ಮ-ವಿಶ್ವಾಸ ಅವರದು! ಈ ಮಾಲಿಕೆಯಲ್ಲಿಯ ಕೊನೆಯ ಸಂತರಾದ ರಾಮದಾಸ ಸಮರ್ಥ ಸ್ವಾಮಿಯವರು ತಮ್ಮ ರಾಮದಾಸೀ ಸಂಘಟನೆಯಿಂದ, ರಾಮದಾಸೀ ಮಠಗ-ಳನ್ನು ಮತ್ತು ಬಲಪ್ರದನಾದ ಹನುಮಂತನ ಮಂದಿರಗಳನ್ನು ದೇಶದಲ್ಲೆಲ್ಲ ಪ್ರಸಾರ ಮಾಡಿ ಜನರಿಗೆ ಬಲೋಪಾಸನೆ, ಸಂಘ-ಟನೆ ಮತ್ತು ಪ್ರತೀಕಾರದ ಸಂದೇಶವನ್ನು ಬೋಧಿಸಿದರು. "ಮರಾಠರನ್ನು ಹೆಚ್ಚು ಸಂಘಟಿಸಿ ನಮ್ಮ ಮಹಾರಾಷ್ಟ್ರ ಧರ್ಮ-ವನ್ನು ಬೆಳೆಸಬೇಕು, ಎಲ್ಲೆಡೆಯಲ್ಲಿ ಮಹಾ-ರಾಷ್ಟ್ರದ ರಾಜ್ಯವನ್ನು ಪ್ರಸಾರ ಮಾಡಬೇಕು. ಈ ವಿಷಯದಲ್ಲಿ ಹಿಂಜರಿಯಬಾರದು, ಹಿಂಜರಿದರೆ ಪೂರ್ವಜರು ನಗುವರು" ಎಂದು ಸಮರ್ಥರು ಹೇಳುವರು.



ಸಂತ ತುಕಾರಾಮ

ಜ್ಞಾನದೇವ ಮತ್ತು ನಾಮದೇವರು ಮಹಾರಾಷ್ಟ್ರದ ಮನೋಭೂಮಿಯನ್ನು ಹರಗಿ ಸ್ವಚ್ಛ ಮಾಡಿ ಆ ಭೂಮಿಯಲ್ಲಿಯ ಧಾರ್ಮಿಕ ಔದಾಸೀನ್ಯವನ್ನೂ ಸಾಮಾಜಿಕ ವಿಷಮತೆಯನ್ನೂ ಕಿತ್ತಿಹಾಕಿದರು. ಆನಂತರದ ತುಕಾರಾಮರ ವರೆಗಿನ ಸಂತರು ಧರ್ಮಾಭಿಮಾನದ ಗೊಬ್ಬರ, ನೀರು ಹಾಕಿದರು. ಇದೇ ಭೂಮಿಯಲ್ಲಿ ಶಿವಾಜಿಯು ಹಿಂದೂ ಸ್ವರಾಜ್ಯದ ಬೆಳೆಯನ್ನು ತುಂಬ ಬೆಳೆದುಕೊಂಡನು. ಸಮರ್ಥರು ಮತ್ತು ಅವರ ಮಹಾ ಶ್ರೇಷ್ಠ ಭಕ್ತ ಶಿವಾಜಿಯು ವಾರಕರಿಗಳನ್ನು 'ಧಾರಕರಿ' (ರಕ್ತ ಹರಿಸುವವರು) ಗಳನ್ನಾಗಿಸಿದರು. ನೇಗಿಲು, ದಿಂಡಿ, ಧ್ವಜಗಳನ್ನು ಬದಿಗಿರಿಸಿ ಮರಾಠರು ಅವೇ ಕೈಗಳಲ್ಲಿ ಕತ್ತಿ, ಢಾಲು, ಭಲ್ಲೆಗಳನ್ನು ಹಿಡಿದರು. ಧರ್ಮ ಮತ್ತು ಸಂಸ್ಕೃತಿಗಳ ರಕ್ಷಣೆಯ ಕಾರ್ಯವನ್ನು ಕೈಕೊಂಡ ಶಿವಾಜಿಯು ಮತ್ತು ರಾಮದಾಸರ ಜೋಡಿಯನ್ನು ನೋಡಿದರೆ ಇದೇ ಕಾರ್ಯದ ಸಂಕಲ್ಪವನ್ನು ಮಾಡಿದ್ದ ಹರಿಹರ ಮತ್ತು ವಿದ್ಯಾರಣ್ಯರು ವಿಜಯನಗರವನ್ನು ಸಂಸ್ಥಾಪಿಸಿದ ಘಟನೆಯು ನೆನಪಿಗೆ ಬರುವದು.

**ರಾಜಕೀಯ ಪರಿಸ್ಥಿತಿ :—** ಶಿವಾಜಿಯು ಪ್ರಾರಂಭಿಸಿದ ಕಾರ್ಯವು ನಿಜ-

ವಾಗಿ ಬಹಳ ಕಠಿಣವಾಗಿತ್ತು. ದಕ್ಷಿಣ ಭಾರತದಲ್ಲಿ ತಮ್ಮ ಸಾಮ್ರಾಜ್ಯವನ್ನು ಪ್ರಸ್ಥಾಪಿಸುವ ಕಾರ್ಯವನ್ನು ಬಲಾಢ್ಯ ಮೊಗಲ ಬಾದಶಾಹರು ಕೈಕೊಂಡಿದ್ದರು. ದೊಡ್ಡದೊಂದು ಸಮುದ್ರದ ದೊಡ್ಡ ತೆರೆಯಂತೆ ಉತ್ತರದಿಂದ ಬರುವ ಮೊಗಲರ ಆಕ್ರಮಣವನ್ನೆದುರಿಸಿ ಸ್ವರಾಜ್ಯಸ್ಥಾಪನೆಯ ಕಾರ್ಯವನ್ನು ಮರಾಠರು ಮಾಡಬೇಕಾಯಿತು. ದಕ್ಷಿಣದಲ್ಲಿ ವರ್ಚಸ್ಸನ್ನು ಕೂಡಿಸಬೇಕೆಂದು ಪ್ರವೃತ್ತರಾಗಿದ್ದ ಆದಿಲಶಾಹಿಯವರೂ ಮರಾಠರ ವಿರುದ್ಧ ಇದ್ದರು. ಮೊಗಲ ಬಾದಶಾಹರು ಮತ್ತು ಆದಿಲಶಾಹಿಯವರ ಹಗ್ಗ ಜಗ್ಗಾಟದಲ್ಲಿ ಸಿಕ್ಕು-ಬಿದ್ದ ಮರಾಠರು ನಡುವೇ ನುಜ್ಜುಗುಜ್ಜಾಗಿ ಹೋಗಲಿಲ್ಲ. ಇಷ್ಟೇ ಅಲ್ಲ, ತದ್ವಿರುದ್ಧವಾಗಿ ಶಿವಾಜಿಯು ಇಬ್ಬರಿಗೂ ಇಂಗುಹಚ್ಚಿ ಇಷ್ಟಾರ್ಥವನ್ನು ಸಾಧಿಸಿಕೊಂಡನು.



ಸಮರ್ಥ ರಾಮದಾಸ

**ಶಹಾಜಿ–ಶಿವಾಜಿ ಸಂಬಂಧ :—** ೧೬೩೦ನೆಯ ಇಸ್ವಿಯ ಫೆಬ್ರುವರಿಯ ೧೯ನೇ ದಿನಾಂಕ ಶುಕ್ರವಾರ, ಶಿವನೇರಿ ಕಿಲ್ಲೆಯಲ್ಲಿ ಶಿವಾಜಿಯು ಜನಿಸಿದನು. ಆ ಕಾಲಕ್ಕೆ ಅವರ ತಂದೆ ಶಹಾಜಿ ತನ್ನ ಆಯುಷ್ಯದಲ್ಲಿಯ ಅತ್ಯಂತ ಕಠಿಣ ಕಾಲವನ್ನು ಕ್ರಮಿಸುತ್ತಿದ್ದನು. ನಿಜಾಮಶಾಹಿಯನ್ನು ಉಳಿಸಬೇಕೆಂಬ ಭಗೀರಥ ಪ್ರಯತ್ನವನ್ನು ಮಾಡಿದರೂ (ಇ. ಸ. ೧೬೩೦–೩೬) ಕೊನೆಗೆ ಅದು ಮುಳುಗಿಹೋಯಿತು. ಆಗ ಶಹಾಜಿಯೂ ಉಪಾಯಗಾಣದೆ ವಿಜಾಪುರದವರ ಸೇವೆಗೆ ನಿಂತನು. ಕರ್ನಾಟಕದಲ್ಲಿಯ ಬಂಡನ್ನು ಮುರಿದು ಅದನ್ನು ಆದಿಲಶಾಹಿ ಆಡಳತೆಯಲ್ಲಿ ತರುವ ಕಠಿಣ ಕಾರ್ಯವನ್ನು ಶಹಾಜಿಯು ಸಾಧಿಸಿದನು. ಇ. ಸ. ೧೬೩೬—೬೦ ರಷ್ಟು ದೀರ್ಘ ಅವಧಿಯವರೆಗೆ ಶಹಾಜಿಯು ಆದಿಲಶಾಹಿ ನೌಕರಿಯನ್ನು ಮಾಡಿ ಕರ್ನಾಟಕದಲ್ಲಿ ಜಿಂಜಿ ಪ್ರಾಂತದ ಜಾಗೀರಿಯನ್ನು ಸಂಪಾದಿಸಿದನು. ಶಹಾಜಿಯು ತನ್ನ ಜಾಗೀರಿಯಲ್ಲಿ ಪುಣೆ–ಸುಪೆಗಳನ್ನು ಶಿವಾಜಿಗೆ ಮತ್ತು ಜಿಂಜಿ–ತಂಜಾವೂರಗಳನ್ನು ವ್ಯಂಕೋಜಿಗೆ ಒಪ್ಪಿಸಿಕೊಟ್ಟನು. ಶಹಾಜಿಯಂಥ ಕರ್ತೃತ್ವಶಾಲಿಯಾದ ತಂದೆಯ ಪಾರ್ಶ್ವಭೂಮಿಯಲ್ಲಿ ಶಿವಾಜಿಯ ಉದಯವಾಯಿತು. ಶಹಾಜಿಯ ಕೆಲಸವು ಶಿವಾಜಿಗೆ ಎಂತು ಪೋಷಕ

ವಾಯಿತೆಂಬುದನ್ನು ನೋಡಬಹುದಾಗಿದೆ. ನಿಜಾಮುಶಾಹಿ ಮತ್ತು ಆದಿಲಶಾಹಿಯವರ ಸೇವೆಯಲ್ಲಿ ಶಹಾಜಿಯೂ ಸೈನಿಕ ಅನುಭವವನ್ನು ಪಡೆದು ಸ್ವಕರ್ತೃತ್ವದಿಂದ ದೊಡ್ಡ ಯೋಗ್ಯತೆಯನ್ನು ಸಂಪಾದಿಸಿದನು. ಮೊದಲು ಪುಣೆ ಮತ್ತು ಸುಪೆ ಅನಂತರ ಕರ್ನಾಟಕದಲ್ಲಿಯ ಜಾಗೀರಿಯನ್ನು ಸಂಪಾದಿಸಿದನು. ಪರಕೀಯ ನೌಕರಿಯನ್ನು ಮಾಡಿ ವಸ್ತುತಃ ಸ್ವತಂತ್ರ ರಾಜ್ಯವನ್ನು ಕಟ್ಟುವ ಶಹಾಜಿಯು ಪರಕೀಯರನ್ನು ಸೋಲಿಸಲು ಅಸಮರ್ಥನಾಗಿದ್ದಿಲ್ಲ. ಮರಾಠರು ಉನ್ನತ ಸ್ಥಿತಿಯನ್ನು ಮುಟ್ಟ ಬೇಕೆಂಬುದು ಅವನ ಅಂತರಂಗದ ತಳಮಳವಾಗಿತ್ತು. 'ಜೇಧೇ ಶಕಾವಲಿ' ಎಂಬ ತಾತ್ಕಾಲೀನ ಜೇಧೆ ಮನೆತನದ ದೈನಂದಿನದಲ್ಲಿ ಶಹಾಜಿಯು ಕಾಹ್ನೋಜಿ ಜೇಧೆ ಇವನಿಗೆ (ಇ. ಸ. ೧೬೪೫ ರಲ್ಲಿ) ಈ ರೀತಿ ಬರೆಯುತ್ತಾನೆ. "ಒಂದು ವೇಳೆ ಆದಿಲಶಾಹಿ ಅಥವಾ ಮೊಗಲ ಸೇನೆ ಏರಿ ಬಂದರೆ ನೀವೆಲ್ಲ ನಿಮ್ಮ ಶಕ್ತಿಸರ್ವಸ್ವವನ್ನು ಸಂಘಟಿಸಿ ಶಿವಬಾನಿಗೆ ನಿಷ್ಠಾಪೂರ್ವಕವಾಗಿ ಸಹಾಯ ನಲ್ಲಿಸಿರಿ. ಮಾವಳ ಭಾಗದಲ್ಲಿ ಎಲ್ಲ ದೇಶಮುಖರು ಶಿವಬಾ ಇವನಿಗೆ ಶರಣು ಬಂದು ಅವನ ಆಜ್ಞೆಯಂತೆ ನಡೆಯುವಂತೆ ಮಾಡಿರಿ. ಮಾವಳ ಪ್ರಾಂತದಲ್ಲಿ ನಿಮ್ಮ ವರ್ಚಸ್ಸು ಬಹಳವಿದೆ."

**ಸ್ವರಾಜ್ಯ ಸ್ಥಾಪನೆಯ ಪೂರ್ವ ಸಿದ್ಧತೆ:—** ಶಹಾಜಿಯು ಸಂಪಾದಿಸಿದ ಪುಣೆ ಮತ್ತು ಸುಪೆ ಪ್ರಾಂತದ ಆಡಳಿತೆಯನ್ನು ಶಿವಾಜಿಯು ಬಾಲ್ಯ ವಯಸ್ಸಿನಲ್ಲಿಯೇ ನೋಡಿಕೊಳ್ಳಬೇಕಾಯಿತು. ಆ ಕಾಲಕ್ಕೆ ಅವನಿಗೆ ದಾದೋಜಿ ಕೊಂಡದೇವನು ರಾಜ್ಯಕಾರಭಾರದ ಶಿಕ್ಷಣವನ್ನು ಕೊಟ್ಟು ಭಾವೀ ರಾಜ್ಯದ ಪೂರ್ವ ಸಿದ್ಧತೆಯನ್ನು ಮಾಡಿಸಿದನು. ಮಾತೋಶ್ರೀ ಜೀಜಾಬಾಯಿಯಿಂದ ಬಾಲ ಶಿವಾಜಿಗೆ ಸ್ವಧರ್ಮ ರಕ್ಷಣೆಯ ಸ್ಫೂರ್ತಿಯು ದೊರೆಯಿತು. ಸ್ವತಃ ಶಿವಾಜಿಯೂ ಕೂಡ ನೆರೆ ಹೊರೆಯ ಪರಿಸ್ಥಿತಿಯನ್ನು ನಿರೀಕ್ಷಿಸಿ ವಿಚಾರಪೂರ್ವಕವಾಗಿ ತನ್ನ ಯೋಜನೆಯನ್ನು ಗೊತ್ತುಪಡಿಸಿದನು. ಮಹಾರಾಷ್ಟ್ರದ ಭೌಗೋಲಿಕ ಪರಿಸ್ಥಿತಿಯ ಲಾಭವನ್ನು ಎಂತು ಪಡೆಯಬಹುದು, ಮಾವಳರು, ಹೇಟಕರಿ ಇವರನ್ನು ಶೂರ ಸಿಪಾಯಿಗಳನ್ನಾಗಿ ಎಂತು ತರಬೇತಿ ಮಾಡಬಹುದು, ಸ್ವಕೀಯರಾರು? ವಿರೋಧಕರಾರು? ಅವರ ನಿಯಂತ್ರಣವನ್ನು ಹೇಗೆ ಮಾಡಬೇಕು? ಮೊದಲಾದ ಪ್ರಶ್ನೆಗಳೆಲ್ಲ ಶಿವಾಜಿಯ ಮುಂದೆ ಧುತ್ತೆಂದು ನಿಂತಿರಲು ಸಾಕು.

ಇ. ಸ. ೧೬೪೬ ರಲ್ಲಿ ಶಿವಾಜಿಯು ತೋರಣ ಕಿಲ್ಲೆಯನ್ನು ವಶಪಡಿಸಿಕೊಂಡು ಸ್ವರಾಜ್ಯದ ತೋರಣವನ್ನು ಕಟ್ಟಿದನು. ಆಗ ಅವನಿಗೆ ಕೇವಲ ೧೬ ವರ್ಷ ವಯಸ್ಸು. ತಂದೆಯಿಂದ ದೊರೆತ ಪುಣೆಯು ಶಿವಾಜಿಯ ಚಟುವಟಿಕೆಯ ಕೇಂದ್ರವಾಯಿತು. ಅನೇಕ ಕೋಟೆ ಕಿಲ್ಲೆಗಳಿಂದ ತುಂಬಿದ್ದ ಈ ಭಾಗವು ಸೈನಿಕ ದೃಷ್ಟಿಯಿಂದ ಬಹಳ ಅನುಕೂಲವಾಗಿದ್ದಿತು. ಸ್ವರಾಜ್ಯ ಸಂಪಾದನೆಯ ಧ್ಯೇಯದಿಂದ ಮುಂದೆ ಬಂದಿದ್ದ ಸಹಕಾರಿಗಳ (ತಾನಾಜಿ, ಯೇಸಾಜಿ, ನೇತಾಜಿ) ಸಹಾಯದಿಂದ ಶಿವಾಜಿಯು ತೋರಣ, ಸಿಂಹಗಡ, ಪುರಂದರ ಮೊದಲಾದ ಕಿಲ್ಲೆಗಳನ್ನು ವಶಪಡಿಸಿಕೊಂಡನು. ರಾಜಗಡ, ರಾಯಗಡ, ಪ್ರತಾಪಗಡ ಕೋಟೆಗಳನ್ನು ಮತ್ತು ವಿಜಯ-

ದುರ್ಗ ಜಂಜಿರಾ ಕಿಲ್ಲೆಗಳನ್ನು ಆಯಕಟ್ಟಿನ ಸ್ಥಳಗಳಲ್ಲಿ ಕಟ್ಟಿಸಿದನು. 'ಛತ್ರಪತಿ'ವೆಂಬ ಪದವಿಯನ್ನು ಧರಿಸಿ ಶಿವಛತ್ರಪತಿಯೆಂಬ ಸುಪ್ರಸಿದ್ಧ ಮುದ್ರೆಯನ್ನು * ಪ್ರಾರಂಭಿಸಿದನು



ಶಿವಛತ್ರಪತಿಯ ಮುದ್ರೆ

ಜಾವಳಿಯ ಮೋರೆ, ಶಿರ್ಕೆ, ಸುರ್ವೆ ಮೊದಲಾದ ವಿರೋಧಿಗಳ ವಾರುಪತ್ಯವನ್ನು ಮಾಡಿ, ಮತ್ತು ಸ್ವಕೀಯ ವಿರೋಧಿಗಳಿಗೆ ಭಯವನ್ನು ಹುಟ್ಟಿಸಿ, ಸ್ವಜನರಲ್ಲಿ ಆತ್ಮ ವಿಶ್ವಾಸವನ್ನು ನಿರ್ಮಾಣ ಮಾಡಿದನು. ಜಾವಳಿಯೂ ಕೈವಶವಾದ್ದರಿಂದ ಶಿವಾಜಿಗೆ ಆಯಕಟ್ಟಿನ ಸ್ಥಳವು ದೊರೆತಂತಾಗಿ ವಿಪುಲ ದ್ರವ್ಯವೂ ದೊರೆಯಿತು.

**ಆದಿಲಶಾಹಿಯ ಪ್ರತೀಕಾರ :—** ಶಿವಾಜಿಯ ಈ ಉದ್ಯೋಗವನ್ನು ವಿಜಾಪುರ ದರಬಾರವು ಸಹಿಸುವದೆಂತು? ಶಿವಾಜಿಯನ್ನು ಅಳವಿನಲ್ಲಿ ತರಬೇಕೆಂದು ಶಹಾಜಿಯನ್ನು ಸೆರೆಯಲ್ಲಿ ಇಡಲಾಯಿತು (ಇ. ಸ. ೧೬೪೮–೪೯). ಅವನಂತಹ ಕರ್ತೃತ್ವಶಾಲಿ ಸರದಾರನನ್ನು ಸೆರೆಯಲ್ಲಿಟ್ಟು ಮಾಡಿದ ದೊಡ್ಡ ತಪ್ಪನ್ನು ಕಂಡು ಹಿಡಿದು ಆದಿಲಶಾಹನು ಅವನನ್ನು ಬಂಧವಿಮುಕ್ತ ಮಾಡಿದನು. ಅವನಿಗೆ ಮೊದಲಿದ್ದ ದೊಡ್ಡ ಸ್ಥಾನವನ್ನು ತಿರುಗಿ ಕೊಟ್ಟನು. ಇದರಿಂದ ಪಿತಾ ಪುತ್ರರಿಬ್ಬರ ಪ್ರತಿಷ್ಠೆಯೂ ಹೆಚ್ಚಿತು. ಶಿವಾಜಿಯು ಆದಿಲಶಾಹಿ ಪ್ರದೇಶದ ಮೇಲೆ ಆಕ್ರಮಣವನ್ನು ಮೊದಲಿನಂತೆ ಪ್ರಾರಂಭಿಸಿದನು. ಠಾಣೆ ಮತ್ತು ಕುಲಾಬಾ ಜಿಲ್ಹೆಯಲ್ಲಿ ಅನೇಕ ಮುತ್ತಿಗೆಗಳನ್ನು ಹಾಕಿ ಕಲ್ಯಾಣದ ಬೊಕ್ಕಸವನ್ನು ಮರಾಠರು ಲೂಟಿ ಮಾಡಿದರು. ಆದಿಲಶಾಹಿಯ ಅಧಿಕಾರಕ್ಕೆ ಇದೊಂದು ಬಗೆಯ ಆಹ್ವಾನವೇ ಆಗಿತ್ತು. ಶಿವಾಜಿಯನ್ನು ಜೀವಂತವಾಗಿ ಸೆರೆಹಿಡಿದು ಕೊಂಡು ಬರುವ ಪ್ರತಿಜ್ಞೆಯನ್ನು ಮಾಡಿ ಅಫಜುಲಖಾನನು ಬಂದನು (ಇ. ಸ. ೧೬೫೯). ಅವನು ಬಹಳ ಬಲಿಷ್ಠನು. ಆದರೆ ಮರಾಠರೇನು ಗಾಬರಿಗೊಳ್ಳಲಿಲ್ಲ 'ಜೇಧೇ ಶಕಾವಲಿ'ಯಲ್ಲಿಯ ಈ ಉದ್ಗಾರಗಳು ಆಗಿನ ಮರಾಠರ ಮನೋಗತವನ್ನು ಸ್ಪಷ್ಟಗೊಳಿಸುವವು. "ಈ ಮರಾಠಿ ರಾಜ್ಯವು ನಮ್ಮದಿದೆ. ಈ ಸಮಯದಲ್ಲಿ ನಮ್ಮ ಸರ್ವಸ್ವವನ್ನು ನೂರೆಗೊಂಡು ಶಿವಾಜಿಯ ರಕ್ಷಣೆಯನ್ನು ಮಾಡಲಿಕ್ಕೆಬೇಕು." ಇಡೀ ರಾಷ್ಟ್ರವೆಲ್ಲ ಪ್ರತೀಕಾರಕ್ಕೆ ಸಿದ್ಧವಾದ ಕೂಡಲೆ ಖಾನನ ಆಟವೇನೂ ನಡೆಯದಂತಾ-ಯಿತು. ಇದರಲ್ಲಿ ಆಶ್ಚರ್ಯವೇನಿದೆ? ೧೬೫೯ ನೆಯ ಇಸವಿಯ ನವಂಬರ ೧೦ ರಂದು ಶಿವಾಜಿ ಮತ್ತು ಖಾನರಲ್ಲಿ ದ್ವಂದ್ವವಾಗಿ ಖಾನನು ಪ್ರಾಣಕ್ಕೆರವಾದನು. ಮತ್ತು ಅವನ ಸೈನ್ಯವು ದಿಕ್ಕುಗೆಟ್ಟು ಓಡಿಹೋಯಿತು. ಮರಾಠರ ಈ ವಿಜಯದಿಂದ ಆದಿಲಶಾಹಿಯ ವರ್ಚಸ್ಸಿಗೆ ಬಹಳ ಧಕ್ಕೆಯಾಯಿತು. ಮರಾಠರು ಹೆಚ್ಚು ಸ್ಫೂರ್ತಿ-ಗೊಂಡು ದಕ್ಷಿಣ ಕೊಂಕಣಗಳ ಮೇಲೆ ದಾಳಿಮಾಡಿ ಪನ್ಹಾಳದಲ್ಲಿ ವಿಜಾಪುರದ ಸೈನ್ಯ

* ಪ್ರತಿಪಚ್ಚಂದ್ರರೇಖೇವ ವರ್ಧಿಷ್ಣುರ್ವಿಶ್ವವಂದಿತಾ।
ಶಾಹುಸೂನೋಃ ಶಿವಸ್ಯೈಷಾ ಮುದ್ರಾ ಭದ್ರಾಯ ರಾಜತೇ ॥

ವನ್ನು ಪೂರ್ಣವಾಗಿ ಪರಾಭವಗೊಳಿಸಿದರು (ಇ. ಸ. ೧೬೫೯–೬೦). ಈ ಘಟನೆಯಿಂದ ದಕ್ಷಿಣ ಭಾಗದ ಭವಿತವ್ಯವು ಆದಿಲಶಾಹಾನ ಕೈಯಿಂದ ಶಿವಾಜಿಯ ಕೈಗೆ ಹಸ್ತಗತ ವಾಯಿತೆಂಬುದು ಮಾತ್ರ ಬಹಿರಂಗವಾಯ್ತು.

ಅನಂತರದ ಅವಧಿಯಲ್ಲಿ ಶಿವಾಜಿಯು ಮೊಗಲರಿಗೂ ಕೈತೋರಿಸಿದನು. ವಿಜಾಪುರದವರ ನಾತಾರೆ ಮತ್ತು ಪನ್ಹಾಳ ವಶಪಡಿಸಿಕೊಂಡು ವ್ಯಾಪಾರಸ್ಥಳವಾದ ಹುಬ್ಬಳ್ಳಿಯನ್ನು ಸೂರೆಗೊಂಡನು. ಆಗ ಆದಿಲಶಾಹಾನು ಶಿವಾಜಿಯೊಡನೆ ಒಡಂಬಡಿಕೆ ಮಾಡಿಕೊಂಡು ಅವನ ಸ್ವಾತಂತ್ರ್ಯವನ್ನು ಮನ್ನಿಸಿದನು.

**ಮೊಗಲರೊಡನೆ ಚಕಮಕಿ:—**ಆದಿಲಶಾಹಿಗಿಂತ ಮೊಗಲರ ಸಾಮರ್ಥ್ಯವು ಬಹಳ ಹೆಚ್ಚು. ಹಿಂದುದ್ವೇಷಿಯಾದ ಔರಂಗಜೇಬನಂಥ ಬಾದಶಾಹನೊಡನೆ ಹೋರಾಟ ನಡೆಸುವದು ಬಹಳ ಕಠಿಣ ಕಾರ್ಯ. ಆದರೆ ಇದನ್ನು ಸಾಧಿಸಿ ಶಿವಾಜಿಯು ಲೋಕವಿಲಕ್ಷಣವಾದ ಕೀರ್ತಿಯನ್ನು ಸಂಪಾದಿಸಿದನು. ಮರಾಠರ ಉದಯೋನ್ಮುಖ ಅಧಿಕಾರವನ್ನು ನಿರ್ಮೂಲ ಮಾಡುವದಾಗಿ ಬಂದಿದ್ದ ಶಾಯಿಸ್ತಾಖಾನನು ಫಜೀತಿ ಹೊಂದಿ ಹೇಗೋ ಜೀವ ಉಳಿಸಿಕೊಂಡು ಪಾರಾಗಿ ಹೋದನು (ಇ. ಸ. ೧೬೬೩). ಈ ಘಟನೆಯಿಂದ ಮೊಗಲ ಸಾಮ್ರಾಜ್ಯವು ಗಾಬರಿಗೊಂಡಿತು. "ಶಿವಾಜಿಯೆಂದರೇನು ಗುಡ್ಡದಲ್ಲಿಯ ಒಂದು ಇಲಿ, ಹಾಹಾ ಅನ್ನುವದರೊಳಗಾಗಿ ಅವನನ್ನು ಮುರಿದು ಬಿಡುವೆವು" ಎಂಬ ದರ್ವೋಕ್ತಿ ಪೊಳ್ಳಾಯಿತು. ಶಾಯಿಸ್ತಾಖಾನನ ಪಾರುಪತ್ಯ ಮಾಡಿ ವೆಂಗುರ್ಲೆಯ ತರುವಾಯ ಮೊಗಲರ ಧನಾಢ್ಯ ಸುರತ ನಗರವನ್ನು ಸೂರೆಮಾಡಿ, (ಇ. ಸ. ೧೬೬೩), ಸಿಂಹದ ಗುಹೆಯನ್ನು ಹೊಕ್ಕು ಅದರ ಗಡ್ಡಕ್ಕೆ ಬೆಂಕಿಯಿಕ್ಕಿದನು. ಇಂಗ್ಲಿಷರ ಕಾಗದ ಪತ್ರಗಳಲ್ಲಿ ಈ ಘಟನೆಯ ಬಗ್ಗೆ ಈ ಬಗೆಯ ಉಲ್ಲೇಖವಿದೆ. "ಯುರೋಪಿಯನರಿಗೆ ವೈಯಕ್ತಿಕ ಯಾವದೇ ಹಾನಿಯನ್ನು ಮರಾಠರು ಮಾಡುವದಿಲ್ಲೆಂದು ಅವನು ಯುರೋಪಿಯನ್ ವ್ಯಾಪಾರಸ್ಥರಿಗೆ ಹೇಳಿದನು. ಔರಂಗಜೇಬನು ಮರಾಠರ ಪ್ರದೇಶದ ಮೇಲೆ ದಾಳಿಯನ್ನು ಮಾಡಿದ್ದರ ಸೇಡನ್ನು ತೀರಿಸಿಕೊಳ್ಳುವದಕ್ಕಾಗಿ ನಾವು ಬಂದಿರುವೆವು ಎಂದೂ ಹೇಳಿದನು. ಸುರತದ ಮೇಲೆ ಮಾಡಿದ ದಾಳಿಯು ಕಲ್ಪನೆ ಮೀರಿ ಯಶಸ್ವಿಯಾಗಿ ಇಡೀ ಪೂರ್ವದಲ್ಲಿಯ ಸಂಪತ್ತಿಯು ಸುರತವೊಂದರಲ್ಲಿಯೆ ಶಿವಾಜಿಯ ವಶವಾಯಿತು. ಇದರಿಂದ ಔರಂಗಜೇಬನ ಸಂತಾಪವು ಬಹಳ ಹೆಚ್ಚಿತು. ಅವನು ದಿಲೇರಖಾನ ಮತ್ತು ಮಿರ್ಝಾ, ರಾಜಾ ಜಯಸಿಂಗರಂಥ ಸ್ವಾಮಿನಿಷ್ಠ ಸರದಾರರನ್ನು ಶಿವಾಜಿಯ ಮೇಲೆ ಏರಿಹೋಗಲು ಕಳಿಸಿದನು. ಮುರಾರಬಾಜಿಯಂಥ ಮರಾಠ ವೀರರು ಮೊಗಲ ಆಕ್ರಮಕರನ್ನು ತಡೆಹಿಡಿದು ನಿಲ್ಲಿಸುವದಕ್ಕಾಗಿ ತಮ್ಮ ಪ್ರಾಣವನ್ನು ಪಣಕ್ಕೆ ಹಚ್ಚಿದರು. ಆದರೆ ವ್ಯರ್ಥ. ಶಿವಾಜಿಯು ಜಯಸಿಂಗನ ಹಿಂದೂ ಧರ್ಮಾಭಿಮಾನವನ್ನು ಆಹ್ವಾನಿಸಿ ನೋಡಿದನು. ಅದು ವ್ಯರ್ಥವಾಯಿತು. ಇಂಥ ವಿಷಮ ಪ್ರಸಂಗವನ್ನು ನೋಡಿ ಶಿವಾಜಿಯು ಜಯಸಿಂಹನ ಕೂಡ ಒಪ್ಪಂದ ಮಾಡಿಕೊಂಡನು (೧೬೬೫). ತನ್ನ ೨೩ ಕಿಲ್ಲೆಗಳನ್ನು ಮೊಗಲರಿಗೆ ಕೊಟ್ಟನು ಮತ್ತು ಔರಂಗಜೇಬ ಬಾದಶಾಹನ

ಭೆಟ್ಟಿ ತೆಗೆದುಕೊಳ್ಳಲು ಒಪ್ಪಿಕೊಂಡನು.

ಶಿವಾಜಿಯು ಆಗ್ರಾಕ್ಕೆ ಹೋದುದು ಮತ್ತು ಅಲ್ಲಿಯ ಕಣ್ಮರೆಯಿಂದ ಅದ್ಭುತ ರೀತಿಯಲ್ಲಿ ಬಿಡುಗಡೆ ಹೊಂದಿದ (೧೭-೮-೧೬೬೬) ರೋಮಾಂಚಕಾರಕ ಕತೆಯು ಸುಪರಿಚಿತವಿದೆ. ಇದರಿಂದ ಶಿವಾಜಿಯು ಒಬ್ಬ ಅದ್ವಿತೀಯ ವ್ಯಕ್ತಿಯಾಗಿರುವ ನೆಂಬ ಮಾತು ಮೊಗಲರಿಗೆ ಮನವರಿಕೆಯಾಯಿತು. ಮರಾಠರು ಅಸಾಮಾನ್ಯ ಶಕ್ತಿ ಸಂಪನ್ನರಾಗಿರುವರೆಂಬುದು ಅವರಿಗೆ ತಿಳಿಯದಿರಲಿಲ್ಲ. ಇದೇ ಸುಮಾರಿಗೆ ಔರಂಗ-ಜೇಬನು ಉತ್ತರದಲ್ಲಿ ಹಿಂದುಗಳನ್ನು ವಿಪರೀತವಾಗಿ ಛಲಿಸಿದ್ದನು. ಅದರ ಪ್ರತಿಕ್ರಿಯೆ ಯಾಗಿ, ಜಾಟರು, ಸತ್ನಾಮಿ, ಶೀಖರು, ರಾಜಪುತರು ಬಂಡುಹೊಡಿದರು. ಈ ಸಮಯಕ್ಕೆ ಶಿವಾಜಿಯು ಔರಂಗಜೇಬನಿಗೆ ಒಂದು ಕರಪತ್ರ ಬರೆದು ಚೆನ್ನಾಗಿ ಅವನ ಕಿವಿ ಹಿಂಡಿದನು. "ಯಾರೊಬ್ಬರ ಧರ್ಮವನ್ನು ದ್ವೇಷಿಸಿದರೆ, ಈಶ್ವರನೆ ಬರೆದುದನ್ನು ರದ್ದುಗೊಳಿಸಿದಂತಾಗುವದು" ಎಂದು ಶಿವಾಜಿಯು ಬರೆದನು. ಶಿವಾಜಿಯ ಈ ಉಪದೇಶವು ಔರಂಗಜೇಬನಿಗೆ ಸೇರಲಿಲ್ಲೆಂಬುದನ್ನು ಬೇರೆ ಹೇಳಲಿಕ್ಕೆ ಬೇಡ.

ಆಗ್ರಾಕ್ಕೆ ಹೋಗಿ ಬಂದದ್ದರಿಂದ ಮೊಗಲರ ದರಬಾರದಲ್ಲಿಯ ಅದರಂತೆ ಇಡೀ ದೇಶದ ಪರಿಸ್ಥಿತಿಯು ಶಿವಾಜಿಯ ಗಮನಕ್ಕೆ ಬಂತು. ಮೊದಲು ಅವನು ತನ್ನ ರಾಜ್ಯದಲ್ಲಿ ಅಂತರ್ಗತ ಸಂಘಟನೆಯನ್ನು ಮಾಡಿ, ಮರಾಠರ ರಾಜ್ಯವು ಚಿರಕಾಲ ಉಳಿಯುವಂ ಯೋಚಿಸಿದನು. ಅನಂತರ ಅವನು ಮತ್ತೆ ಮೊಗಲರತ್ತ ಲಕ್ಷ್ಯ ತಿರುಗಿಸಿದನು. ಮೊಗಲರು ವಶಪಡಿಸಿಕೊಂಡ ಸಿಂಹಗಡ ಮತ್ತು ಪುರಂದರ ಕಿಲ್ಲೆಗಳನ್ನು ಗೆದ್ದು ಮರಾಠರು ಜುನ್ನರ ಮತ್ತು ಸುರತ (ಎರಡನೆ ಸಲ) ಈ ಸಂಪನ್ನ ನಗರಗಳನ್ನು ಸುಲಿದರು. ಸುರತವೊಂದರಲ್ಲಿಯೇ ಮರಾಠರಿಗೆ ೧೩ ಲಕ್ಷ ರೂಪಾಯಿ ದೊರೆತವು. ಸುರತ ನಗರವು ಅಸುರಕ್ಷಿತ ನಗರವಾಗಿ ಅಲ್ಲಿಯ ವ್ಯಾಪಾರವು ಬಿತ್ತು. ಸುರತದಿಂದ ತಿರುಗಿ ಹೋಗುವಾಗ ವಣೀದಿಂಡೋರಿಯಲ್ಲಿ (೧೬೭೦ರಲ್ಲಿ) ಮೊಗಲರ ಸೇನಾಪತಿ ದಾವುದಖಾನನನ್ನು ಮರಾಠರು ಪ್ರಚಂಡವಾಗಿ ಸೋಲಿಸಿದರು. ಇ. ಸ. ೧೬೭೧ ರಲ್ಲಿ ಮರಾಠರು ಬಾಗಲಾಣ, ಖಾನದೇಶ ಮತ್ತು ವರ್ಹಾಡ ಪ್ರದೇಶದ ಮೇಲೆ ದಾಳಿ ಮಾಡಿ ಸಾಲ್ಹೇರ ವಶಪಡಿಸಿಕೊಂಡರು. ಶಿವಾಜಿಯು ಮೂರನೇ ಸಲ ಸುರತವನ್ನು ಮುತ್ತಿದನು. ಆಗ ಅವನು ಸ್ಪಷ್ಟವಾಗಿ "ಮೊಗಲ ಬಾದಶಾಹನು ನನ್ನ ದೇಶ ಮತ್ತು ಜನರ ರಕ್ಷಣೆಗಾಗಿ ಸೈನ್ಯವನ್ನು ಇಡಲಿಕ್ಕೆ ಹಚ್ಚಿದ್ದರಿಂದ, ಆ ಸೈನ್ಯದ ವೆಚ್ಚವನ್ನು ಮೊಗಲ ಪ್ರಜೆಗಳು ಕೊಡಲಿಕ್ಕೆಬೇಕು" ಎಂದು ಹೇಳಿದನು. ಈ ಆಘಾತದಿಂದ ಮೊಗಲರ ಪ್ರತೀಕಾರವು ಕಡಿಮೆಯಾಯಿತು.

**ರಾಜ್ಯಾಭಿಷೇಕ:—** ಮರಾಠರ ಸತ್ತೆಯು ಸ್ಥಾಪನೆಯಾದುದನ್ನು ಪ್ರಕಟಿಸಲು ಇದೊಳ್ಳೆ ಅನುಕೂಲ ಕಾಲವೆಂದು ತಿಳಿದು ಶಿವಾಜಿಯು ರಾಯಗಡವನ್ನು ರಾಜಧಾನಿಯನ್ನು ಮಾಡಿಕೊಂಡು ಅಲ್ಲಿ ತಾನು ರಾಜ್ಯಾಭಿಷಿಕ್ತನಾದನು (೬ ಜೂನ ೧೬೭೪). ಈ ಸಮಾರಂಭವನ್ನು ಬಹಳ ವೈಭವದಿಂದ ಆಚರಿಸಲಾಯಿತು. ಸುಮಾರು ೫೦ ಲಕ್ಷ ರೂಪಾಯಿಗಳನ್ನು ಈ ಸಮಾರಂಭಕ್ಕಾಗಿ ವೆಚ್ಚಮಾಡಲಾ-

ಯಿತು. ಈ ಕಾಲಕ್ಕೆ ಇಂಗ್ಲೀಷ ಮತ್ತು ಡಚ್ ವಕೀಲರೂ ಉಪಸ್ಥಿತರಾಗಿದ್ದರು. 'ಇನ್ನು ಮುಂದೆ ವ್ಯಾಪಾರವೃದ್ಧಿಯ ಕಡೆಗೆ ಹೆಚ್ಚು ಲಕ್ಷ ಪೂರೈಸಲಾಗುವದೆಂ'ದು ಶಿವಾಜಿಯು ಅವರಿಗೆ ಆಶ್ವಾಸನವನ್ನು ಕೊಟ್ಟನು. ರಾಜ್ಯಾಭಿಷೇಕವು ಮೊದಲು ವೈದಿಕ, ಅನಂತರ ತಾಂತ್ರಿಕ ರೀತಿಯಿಂದ ನಡೆಯಿತು. ಹೀಗೆ ಮಾಡಿ ಶಿವಾಜಿಯು ಪ್ರಜೆಗಳಲ್ಲಿಯ ಎಲ್ಲ ವರ್ಗದವರನ್ನು ಸಮಾಧಾನಗೊಳಿಸಿದನು. "ಕ್ಷತ್ರಿಯ ಕುಲಾವತಂಸ ಶ್ರೀ ಛತ್ರಪತಿ ಮಹಾರಾಜ" ಎಂಬ ಪದವಿಯನ್ನು ಘೋಷಿಸಿ ಶಿವಾಜಿಯು ತನ್ನ ಕ್ಷತ್ರಿಯತ್ವವನ್ನು ಮತ್ತು ಮರಾಠರ ಅರಸೊತ್ತಿಗೆ ಸ್ಥಾಪಿತ-ವಾದುದನ್ನು ಸಾರಿದನು. ಇದರ ತರುವಾಯ ಮರಾಠರ ರಾಜರು ಬಂಡುಗಾರರಾಗಿ ಉಳಿಯದೆ ಆದಿಲಶಾಹ ಮತ್ತು ಮೊಗಲ ಬಾದಶಾಹರಿಗೆ ಸಮಾನ ದರ್ಜೆಯ ಸ್ವತಂತ್ರ ಮತ್ತು ಸಾರ್ವಭೌಮ ಸತ್ತಾಧೀಶರಾದರು. ಅವರ ಸನದುಗಳು, ಪತ್ರಗಳು, ಒಪ್ಪಂದಗಳಿಗೆ ಕಾಯದೆಬದ್ಧ ಪ್ರತಿಷ್ಠೆಯು ಪ್ರಾಪ್ತವಾಯಿತು. ಶಿವರಾಜ್ಯಾಭಿಷೇಕದಿಂದ ಹಿಂದೂ ಸ್ವರಾಜ್ಯ ಸ್ಥಾಪನೆಯಾಗಿ ಶಿವಾಜಿಯ ಕಾರ್ಯವು ವೈಭವ ಶಿಖರವನ್ನು ಮುಟ್ಟಿತು.

**ದಕ್ಷಿಣದಲ್ಲಿಯ ದಾಳಿ:—** ಅನಂತರ ವಿಶ್ರಾಂತಿಯನ್ನು ತೆಗೆದುಕೊಳ್ಳದೆ ಶಿವಾಜಿಯು ದಕ್ಷಿಣದ ಕಡೆಗೆ ದೊಡ್ಡ ದಾಳಿಯನ್ನು ಆರಂಭಿಸಿದನು. ಅವನ ಮಲ-ತಮ್ಮನಾದ ವ್ಯಂಕೋಜಿಯು ತಂದೆ ಶಹಾಜಿಯ ಮರಣದ ನಂತರ (ಇ. ಸ. ೧೬೬೪) ತಂಜಾವೂರದಿಂದ ಶಹಾಜಿಯ ಕರ್ನಾಟಕದಲ್ಲಿಯ ಜಾಗೀರಿಯ ಕಾರಭಾರವನ್ನು ನೋಡುತ್ತಿದ್ದನು. ಈ ಪ್ರದೇಶವನ್ನು ಹಿಂದೂ ಸ್ವರಾಜ್ಯದಲ್ಲಿ ತರಬೇಕೆಂಬ ಶಿವಾಜಿಯ ಮನೋಗತವು ವ್ಯಂಕೋಜಿಗೆ ಒಪ್ಪಿಗೆಯಾಗಿರಲಿಲ್ಲ. ಅವನಿಗೆ ವಿಜಾಪುರ ಬಾದಶಾಹಾನ ವರ್ಚಸ್ಸು ಮಾನ್ಯವಿತ್ತು. ಆದರೆ ಈ ಕಲ್ಪನೆಯು ಶಿವಾಜಿಗೆ ಸೇರಲಿಲ್ಲ. ಮರಾಠಾ ಛತ್ರಪತಿಯ ರಾಜ್ಯವಿಸ್ತಾರವು ತಂಜಾವೂರದ ವರೆಗೆ ಇದೆ ಎಂಬುದನ್ನು ಸಿದ್ಧಪಡಿಸಬೇಕೆಂದು ಶಿವಾಜಿಯ ನಿರ್ಧಾರವಿತ್ತು. ಈ ಸಮಯದಲ್ಲಿ ವಿಜಾಪುರದ ದರಬಾರದಲ್ಲಿ ಹಬ್ಬಿದ ಯಾದವಿಯ ಲಾಭವನ್ನು ಪಡೆದು ಶಿವಾಜಿಯು ಈ ದಾಳಿಯನ್ನು ಯಶಸ್ವಿಯಾಗಿಸಿದನು. ಮೊದಲು ಅವನು ಗೋವಳಕೊಂಡಕ್ಕೆ ಹೋದನು. ಶಿವಾಜಿಯ ಸಾಮರ್ಥ್ಯವನ್ನು ನೋಡಿ ಕುತುಬಶಾಹಾನು ಅವನಿಗೆ ಶರಣುಬಂದನು. ಅವನು ತನ್ನ ಸೈನ್ಯವನ್ನು ಶಿವಾಜಿಯ ಸಹಾಯಕ್ಕೆ ಕಳಿಸಿದನು. ಈ ಸಂಯುಕ್ತ ಸೇನೆಯು ವ್ಯಂಕೋಜಿಯ ಮತ್ತು ವಿಜಾಪುರದ ಆಡಳಿತೆಯಲ್ಲಿರುವ ಸಣ್ಣ ಸಣ್ಣ ಸತ್ತಾಧೀಶರನ್ನು ಮುರಿದು ಒಂದು ಕಡೆಗೆ ಜಿಂಜೀ, ತಂಜಾವರದ ವರೆಗೆ, ಮತ್ತೊಂದೆಡೆಗೆ ಮೈಸೂರ ವರೆಗೆ ವಿಜಯವನ್ನು ಸಂಪಾದಿಸಿ ದಕ್ಷಿಣ ದ್ವೀಪಕಲ್ಪದಲ್ಲಿಯ ಪರಕೀಯ ಸತ್ತೆಯ ಉಚ್ಚಾಟನವನ್ನು ಮಾಡಿದರು. ಈ ದಿಗ್ವಿಜಯದಲ್ಲಿ ಶಿವಾಜಿಯ ದೃಷ್ಟಿಯು ಎಷ್ಟು ವ್ಯಾಪಕವಾಗಿತ್ತೆಂಬುದನ್ನು ನೋಡಬಹುದಾಗಿದೆ. ಆದಿಲಶಾಹಿಯಲ್ಲಿಯ ಮಾಲೋಜಿ ಘೋರಪಡೆಯಂತಹ ವರ್ಚಸ್ವೀ ಸರದಾರರನ್ನು ಕೂಡ ಶಿವಾಜಿಯು ಆವ್ಹಾನಿಸಿದನು. "ನಾವು ಮರಾಠರೀಗ ಹಳೆಯ ವೈಮನಸ್ಸನ್ನುಮರೆತು ಬಿಟ್ಟು ನಮ್ಮಲ್ಲಿ ಸಂಘಟನೆ,

ಐಕ್ಯವನ್ನುಂಟುಮಾಡಬೇಕು. ಪರಕೀಯ ಪಠಾಣರನ್ನು ನಾಶಗೊಳಿಸಿ ದಕ್ಷಿಣದಲ್ಲಿಯ ಆಡಳಿತೆ ದಕ್ಷಿಣದಲ್ಲಿಯ ಜನರ ಕೈಯಲ್ಲಿಯೇ ಉಳಿಯುವಂತೆ ದಕ್ಷತೆಯನ್ನು ವಹಿಸಬೇಕು " ಎಂದು ಶಿವಾಜಿಯು ಬರೆದಿದ್ದನು. ವಿಜಾಪುರದವರ ಕೈಯಲ್ಲಿದ್ದ ಕರ್ನಾಟಕ ಪ್ರಾಂತದಲ್ಲಿ ಕಂದಾಯವನ್ನು ವಸೂಲ ಮಾಡುವವರಿಂದಲೆ ಶಿವಾಜಿಗೆ ಸಮಾಧಾನವಾಗಲಿಲ್ಲ. ವಶಪಡಿಸಿಕೊಂಡ ಪ್ರದೇಶದಲ್ಲಿ ಕೋಟೆ, ಕಿಲ್ಲೆಗಳನ್ನು ಕಟ್ಟಿ ಅಲ್ಲಿ ತನ್ನ ಅಧಿಕಾರಿಗಳನ್ನು ನೇಮಿಸಿ ಅವರಿಗೆ ರಾಜ್ಯಾಡಳಿತೆಯ ಧೋರಣವನ್ನು ಹಾಕಿಕೊಟ್ಟು ಶಿವಾಜಿಯು ಮರಾಠರ ಸತ್ತೆಯು ಸುಪ್ರತಿಷ್ಠಿತವಾಗುವಂಥ ಯೋಜನೆಯನ್ನು ಮಾಡಿದನು. ಇದಲ್ಲದೆ ವ್ಯಾಪಾರ ಮತ್ತು ಉದ್ಯೋಗ ಧಂದೆಗಳಿಗೆ ಉತ್ತೇಜನ ಕೊಟ್ಟು ಆ ಪ್ರದೇಶದ ಆರ್ಥಿಕ ಸ್ಥಿತಿಯನ್ನು ಸುಧಾರಿಸಿ ಅವನು ಪ್ರಜೆಗಳ ಶುಭೇಚ್ಛೆಯನ್ನು ಪಡೆದನು. ಈ ರೀತಿಯಾಗಿ ಆಕ್ರಮಕರ ಪಾರುಪತ್ಯ ಮಾಡಿ ಮತ್ತು ಪ್ರಜಾನುರಂಜನ ಮಾಡಿದ ಕೃಷ್ಣದೇವರಾಯನ ಅವತಾರವೇ ಶಿವಾಜಿ ಇರುವನು ಎಂದು ಕರ್ನಾಟಕದ ಜನರಿಗೆ ಅನಿಸಿದ್ದರೆ ಅದರಲ್ಲಿ ಆಶ್ಚರ್ಯವಿಲ್ಲ. ಉತ್ತರದಿಂದ ಬಂದ ಆಕ್ರಮಣವನ್ನೆದುರಿಸಿ ದಕ್ಷಿಣ ಭಾರತದಲ್ಲಿ ಹಿಂದು ಧರ್ಮ ಮತ್ತು ಸಂಸ್ಕೃತಿಗಳ ರಕ್ಷಕರೆಂದು ಕೃಷ್ಣದೇವರಾಯ ಮತ್ತು ಶಿವಾಜಿ ಇವರಿಬ್ಬರ ಭೂಮಿಕೆಯು ಸಮಾನವಾಗಿದ್ದಿತು.

**ಧ್ಯೇಯವಾದ:—** ಈ ರೀತಿಯಾಗಿ ಶಿವಾಜಿಯು ಸ್ಥಾಪಿಸಿದ ಮರಾಠಾ ರಾಜ್ಯದ ವಿಸ್ತಾರವು ಕೊಂಕಣ ಮತ್ತು ಮಹಾರಾಷ್ಟ್ರ ದೇಶ ಹಾಗೂ ಕರ್ನಾಟಕದಲ್ಲಿ ತಂಜಾವರ ಜಿಂಜಿಯಲ್ಲಿ ಆಯಿತು. ಆದರೆ ಶಿವಾಜಿಯ ಸ್ವರಾಜ್ಯದ ಮಹತ್ವವು ಅದರ ಸಾಮ್ರಾಜ್ಯದ ವಿಸ್ತಾರವನ್ನು ಅವಲಂಬಿಸಿಲ್ಲ. ಆ ರಾಜ್ಯಸ್ಥಾಪನೆಯ ತಳಹದಿಯಲ್ಲಿದ್ದ ಉಚ್ಚ ಧ್ಯೇಯವಾದವು ನಿಜವಾಗಿ ಮಹತ್ವದ್ದಾಗಿದೆ. ೧೬೭೭ ಜನೆವರಿ ೨೮ರಂದು ಪ್ರಜಾಜನರನ್ನುದ್ದೇಶಿಸಿ ಶಿವಾಜಿಯು ಹೊರಡಿಸಿದ ಒಂದು ಪ್ರಕಟನೆಯಲ್ಲಿ ಮರಾಠಾ ರಾಜ್ಯದ ಉಚ್ಚ ಧ್ಯೇಯವಾದವನ್ನು ಸ್ಪಷ್ಟಪಡಿಸಲಾಗಿದೆ. " ಧರ್ಮಹ್ರಾಸವಾಗುವ ಸಮಯದಲ್ಲಿ ಈಶ್ವರನು ಕೃಪೆಯಿಂದ ನನ್ನ ಕೈಯಲ್ಲಿ ಯವನ ಮೊದಲಾದ ದುಷ್ಟರನ್ನು ಶಾಸನಗೊಳಿಸಿ ಅವರನ್ನು ಪರಾಭವಗೊಳಿಸಿದನು. ಯಾರ ಧರ್ಮವು ಅನಾದಿಯಾಗಿ ಬಂದಿದೆಯೋ ಅದರಂತೆ ಅದು ನಿರ್ವೇಧಕವಾಗಿ ನಡೆಯಬೇಕು. ಯಾವ ಜಾತಿಯಲ್ಲಿ ಯಾವ ಬಗೆಯ ಪರಂಪರೆಯು ನಡೆದು ಬಂದಿದೆಯೋ ಅದರಂತೆ ಅದನ್ನು ನಡೆಸಿಕೊಂಡು ಹೋಗಬೇಕು. ಈಗ ಯವನರು ಉತ್ತರದೇಶದಿಂದ ಬರುತ್ತಿರುವರು. ಆದುದರಿಂದ ಎಲ್ಲ ಜಾತಿಯವರೂ ಒಮ್ಮನಸ್ಸಿನಿಂದ ವಿಶೇಷ ಪರಿಶ್ರಮಪಟ್ಟು ಶತ್ರುಗಳನ್ನು ಪರಾಭವಗೊಳಿಸಬೇಕು. ಇದರಲ್ಲಿ ಕಲ್ಯಾಣವಿದೆ. ಈಶ್ವರನು ನಿಮ್ಮ ಸರಕಾರದ ರಕ್ಷಣೆ ಮಾಡುವನು " ಎಂದು ಶಿವಾಜಿಯು ಘೋಷಿಸಿದನು.

ಈ ಘೋಷಣೆಯನ್ನು ಮಾಡಿದ ಮರಾಠರ ಅರಸನು ಕೇವಲ ಪ್ರದೇಶಗಳನ್ನು ಗೆಲ್ಲಬಯಸಿದ ವಿಜೇತನಾಗಿರದೆ, ಉಚ್ಚ ಧ್ಯೇಯವಾದದಿಂದ ಪ್ರೇರಿತನಾಗಿದ್ದ ರಾಷ್ಟ್ರ

ಸಂಸ್ಥಾಪಕನಾಗಿದ್ದನು.

ಶಿವಾಜಿಯ ರಾಜನೀತಿಯು ಕೇವಲ ಧ್ಯೇಯವಾದವನ್ನೂ ಆಧರಿಸಿರಲಿಲ್ಲ; ಆದರೆ ವ್ಯಾವಹಾರಿಕ ದೃಷ್ಟಿಯಿಂದ ಬಲಿಷ್ಠ ತಳಹದಿಯ ಮೇಲೆ ಅದರ ರಚನೆಯಾಗಿತ್ತು. ಈ ರಾಜ್ಯವು ಎಲ್ಲರದೂ ಇದೆಯೆಂದು ಪ್ರತಿಯೊಬ್ಬನಿಗೆ ಅನಿಸಬೇಕೆಂಬ ದೃಷ್ಟಿಯಿಂದ ಎಲ್ಲ ಜಾತಿಯ ಜನರಿಗೆ ರಾಜ್ಯವ್ಯವಸ್ಥೆಯಲ್ಲಿ ಸ್ಥಾನವಿತ್ತು. ಧಾರ್ಮಿಕ ವಿಷಯಗಳಲ್ಲಿ ಸಂತರಿಂದ ಸಾರಲಾದ ಸಾಮಾಜಿಕ ಸಮತೆಗೆ ಶಿವಾಜಿಯು ರಾಜ್ಯವ್ಯವಸ್ಥೆಯಲ್ಲಿ ಮೂರ್ತಸ್ವರೂಪವನ್ನು ಕೊಟ್ಟನು. ಹಿಂದು ಸಮಾಜದಲ್ಲಿಯ ಜಾತಿಭೇದಕ್ಕೆ ಶಿವಾಜಿಯ ರಾಜ್ಯವ್ಯವಸ್ಥೆಯಲ್ಲಿ ಸ್ಥಾನವಿರಲಿಲ್ಲ. ಇಷ್ಟೇ ಅಲ್ಲ, ರಾಷ್ಟ್ರನಿಷ್ಠ ಮುಸಲ್ಮಾನರನ್ನು ಕೂಡ ಶಿವಾಜಿಯು ಪ್ರೇಮದಿಂದ ನೋಡಿಕೊಳ್ಳುತ್ತಿದ್ದನು. ಸೈನ್ಯಾಧಿಪತಿ, ಛತ್ರಪತಿಯ ಖಾಸಗಿ ಚಿಟಣೀಸರಂಥ ಹೊಣೆಗಾರ ಸ್ಥಳಗಳನ್ನು ಮುಸಲ್ಮಾನರಿಗೆ ಕೊಡಲಾಗಿತ್ತು. ಮುಸಲ್ಮಾನ ಪ್ರಜೆಗಳಿಗೆ ಧಾರ್ಮಿಕ ಸ್ವಾತಂತ್ರ್ಯವು ಸಂಪೂರ್ಣವಿದ್ದಿತು. ಮಶೀದಿ, ಕುರಾಣ, ಇಸ್ಲಾಮ ಧರ್ಮದಲ್ಲಿಯ ಬಾಬಾಯಾಕತರಂಥ ಸಾಧುಗಳು, ಇವರ ಬಗ್ಗೆ ಶಿವಾಜಿಯು ಆದರವನ್ನು ತೋರಿಸಿದನು. ಶತ್ರುಪಕ್ಷದ ಇತಿಹಾಸಕಾರನಾದ ಖಾಫೀಖಾನನೇ ಶಿವಾಜಿಯ ಔದಾರ್ಯವನ್ನು ಬಣ್ಣಿಸಿರುವನು. ಇದರಿಂದ ಎಲ್ಲ ಧರ್ಮಪಂಥಗಳ ಮತ್ತು ಜಾತಿಗಳ ಜನರು ಈ ರಾಜ್ಯವು ತಮ್ಮದೆಂದು ಬಗೆದು ಛತ್ರಪತಿಗೆ ಬೆಂಬಲ ಕೊಟ್ಟರೆಂಬುದು ಸ್ವಾಭಾವಿಕವಾಗಿದೆ. ಶಿವಾಜಿಯ ಮುತ್ಸದ್ದಿತನದ ಒಂದು ಮಗ್ಗಲು ಇದಾಯಿತು. ಮರಾಠರ ಸತ್ತೆಯು ಚಿರಕಾಲ ನಡೆಯಬೇಕು ಮತ್ತು ದಿನದಿನಕ್ಕೆ ಅದು ವಿಸ್ತಾರಗೊಳ್ಳಬೇಕು ಈ ದೃಷ್ಟಿಯಿಂದ ಶಿವಾಜಿಯು ಉತ್ಕೃಷ್ಟ ರೀತಿಯಿಂದ ಸೈನ್ಯ ಸಂಘಟನೆಯನ್ನು ಮಾಡಿದನು. ದ್ರುತಗತಿಯಿಂದ ಚಲವಲನ ಮಾಡಲಿಕ್ಕೆ ಬರಬೇಕೆಂದು ಕೇವಲ ಕುದುರೆಸವಾರರ ದಲವನ್ನು ತಯಾರಮಾಡಿದನು. ಶೇರಶಾಹಾನಂತೆ ಸಣ್ಣ ದೊಡ್ಡ ಮೂರುನೂರು ಕೋಟೆ, ಕಿಲ್ಲೆಗಳನ್ನು ಸುಸಜ್ಜಿತಗೊಳಿಸಿದನು. "ನಾವು ಒಂದೊಂದು ಕಿಲ್ಲೆಯಲ್ಲಿ ಒಂದು ವರ್ಷದ ವರೆಗೆ ಹೋರಾಡಿದರೆ ನಮ್ಮ ರಾಜ್ಯವನ್ನು ಗೆಲ್ಲಬೇಕಾದರೆ ಶತ್ರುಗಳು ಅನೇಕ ಜನ್ಮ ತೆಗೆದುಕೊಳ್ಳಬೇಕಾಗುವದು!" ಎಂದು ಶಿವಾಜಿಯು ಅನ್ನುತ್ತಿದ್ದನು. ಅವನ ಸಂರಕ್ಷಣ ವ್ಯವಸ್ಥೆಯಲ್ಲಿ ವಿಶೇಷ ಮಹತ್ವವೆಂದರೆ ಅವನು ಕಟ್ಟಿದ ಪ್ರಬಲ ನೌಕಾಪಡೆಯಲ್ಲಿ ಸಣ್ಣ ದೊಡ್ಡ ಏಳುನೂರು ಹಡಗಗಳಿದ್ದವು. ಅದರ ಬಲದಿಂದ ಪಶ್ಚಿಮದಂಡೆಯಲ್ಲಿ ಮರಾಠರ ವರ್ಚಸ್ಸುಂಟಾಯಿತು. ಸಮುದ್ರಸ್ವಾಮಿತ್ವದ ಅಹಂಕಾರವನ್ನು ತಾಳಿದ್ದ ಪೋರ್ತುಗೀಜ, ಇಂಗ್ಲಿಷರಿಗೆ ಮರಾಠಾ ನೌಕಾಪಡೆಯವರು ಬಹಳ ಭೀತಿಯನ್ನು ಹುಟ್ಟಿಸಿದರು. "ಶಿವಾಜಿಯು ಸ್ವತಃ ನಾವಾಡಿಗನಿರಲಿಲ್ಲ, ಒಳಿತಾಯಿತು; ಇಲ್ಲದಿದ್ದರೆ ಅವನು ಭೂಮಿಯ ಪ್ರಭುತ್ವ ಪಡೆದಂತೆ ಸಮುದ್ರಸ್ವಾಮಿತ್ವವನ್ನೂ ಪಡೆದುಬಿಡುತ್ತಿದ್ದನು" ಎಂದು ಇಂಗ್ಲಿಷರು ಅಂದರು. ಮತ್ತು ಇಂಗ್ಲಿಷರು ಪರಸ್ಪರ ಪರಿಚಿತರಾಗಿದ್ದರು. ಇಂಗ್ಲಿಷರ ಬಗ್ಗೆ ಆಗಿನ ಮರಾಠರ ಭಾವನೆಯೇನಿದ್ದಿತೆಂಬುದನ್ನು ನೋಡುವಾ. "ಟೊಪ್ಪಿಗೆ

ಯನ್ನು ಹಾಕಿದ ಇಂಗ್ಲಿಷರು ನಮ್ಮ ತೋರಿಕೆಯ ಸಾವಕಾರರಂತೆ ಅಲ್ಲ. ಈ ಪ್ರಾಂತ ದಲ್ಲಿ ಪ್ರವೇಶಿಸಬೇಕು, ರಾಜ್ಯ ಬೆಳೆಸಬೇಕು, ಸ್ವಮತಗಳನ್ನು ಪ್ರತಿಷ್ಠಿಸಬೇಕು ಎಂಬ



ಶಿವಾಜಿಯ ನಾಣ್ಯ

ಪೂರ್ಣ ಅಭಿಮಾನ ಅವರಿಗೆ. ಯುರೋಪಿಯನ್ ಮತ್ತು ಸಿದ್ದೀ ಸೈನ್ಯ ನೀರಿನಲ್ಲಿ ದ್ದಿತು. ಅವರನ್ನು ನಿಯಂತ್ರಣದಲ್ಲಿಡಬೇಕಾದರೆ ಮುಯ್ಯಕ್ಕೆ ಮುಯ್ಯವೆಂದು ನಾವೂ ನೌಕಾಪಡೆಯನ್ನು ಇಡಬೇಕೆಂದು ಶಿವಾಜಿಯು ಬಗೆದನು. ಈ ಜನರ ಸಹಾಯ ದಿಂದ ಒಳ್ಳೇ ಬಂದೂಕು ಮತ್ತು ತೋಫುಗಳನ್ನು ಸಂಗ್ರಹಿಸಬೇಕೆಂದು ಶಿವಾಜಿಯು ಯತ್ನಮಾಡಿ ನೋಡಿದನು. ಆದರೆ ಧೂರ್ತ ಇಂಗ್ಲಿಷರು ಕೆಲಸಕ್ಕೆ ಬಾರದ ಬಂದೂಕು ಮತ್ತು ತೋಫುಗಳನ್ನು ಕೊಟ್ಟು ಶಿವಾಜಿಯನ್ನು ಮೋಸಗೊಳಿಸಿದರು. ತೋಫುಖಾನೆಯ ವಿಷಯದಲ್ಲಿ ಶಿವಾಜಿಗೆ ಸ್ವಾವಲಂಬಿಯಾಗಲು ಸಾಧ್ಯವಾಗಲಿಲ್ಲ. ಈ ಕಾರಣಕ್ಕಾಗಿ ಶಿವಾಜಿಗೆ ಸಿದ್ದೀ ಜನರ ಜಂಜಿರಾ ವಶಪಡಿಸಿಕೊಳ್ಳಲಾಗಲಿಲ್ಲ. ಶಿವಾಜಿಯ ಸೈನ್ಯದಲ್ಲಿ ಶಿಸ್ತು ಅತ್ಯಂತ ಉಗ್ರವಿದ್ದು ಅವರ ಜೀವನವು ಸರಳವಾಗಿ ತ್ತೆಂಬುದು ಸುಪರಿಚಿತವಾಗಿದೆ. ಮೌರ್ಯರಂತೆ ಶಿವಾಜಿಯ ಗುಪ್ತಚಾರರ ಶಾಖೆಯು ಅತ್ಯಂತ ಕಾರ್ಯಕ್ಷಮವಾಗಿತ್ತು. ಮಲಿಕಂಬರನ 'ಗತ್ತುಗಾರಿಕೆ'ಯ ಯುದ್ಧಪದ್ಧತಿಯನ್ನು ಶಿವಾಜಿಯು ಪೂರ್ಣತ್ವಕ್ಕೆ ಮುಟ್ಟಿಸಿದನು. ಮಹಾರಾಷ್ಟ್ರ ದೇಶದ ವಿಶಿಷ್ಟ ಭೌಗೋಲಿಕ ಪರಿಸ್ಥಿತಿಯ ಲಾಭವನ್ನು ಪಡೆದು, ಬಲಾಢ್ಯ ಶತ್ರು ಗಳನ್ನು ಹಣ್ಣಿಗೆ ತರುವಲ್ಲಿ ಶಿವಾಜಿಯು ಅಸಾಮಾನ್ಯ ಸಾಹಸವನ್ನು ಮತ್ತು ಕಲ್ಪನೆಯನ್ನು ತೋರಿಸಿದನು

**ರಾಜ್ಯವ್ಯವಸ್ಥೆಯ ವಿಶೇಷ :—** ಸಂರಕ್ಷಣ ಸಂಬಂಧದ ಈ ಯೋಜನೆ ಇಂತಿದ್ದಿತು. ದೈನಂದಿನ ರಾಜ್ಯಕಾರಭಾರದಲ್ಲಿ ಅಷ್ಟ ಪ್ರಧಾನಮಂಡಳವನ್ನು ನೇಮಿಸಿ 'ರಾಜ್ಯವ್ಯವಹಾರ ಕೋಶ'ವನ್ನು ಸಿದ್ಧಪಡಿಸಿ ಸ್ವಭಾಷೆಗೆ ಕೊಟ್ಟ ಪುರಸ್ಕಾರ, ಮೊದಲಿನ ಸರಂಜಾಮೀ ಪದ್ಧತಿಯನ್ನು ಕಿತ್ತಿಹಾಕಿ, ವ್ಯಾಪಾರ ಉದ್ಯೋಗ ಧಂದೆಗಳಿಗೆ ಪ್ರೋತ್ಸಾಹನೆ ಕೊಟ್ಟದ್ದು, ವಿಶೇಷ ಉಲ್ಲೇಖನೀಯ ವಾಗಿವೆ. ಅಧಿಕಾರಿಗಳ ಯೋಗ್ಯತೆಯನ್ನನುಸರಿಸಿ ಅವರನ್ನಾರಿಸುವದು, ಅವರಿಗೆ ಜಾಗೀರಿಕೊಡದೆ ನಗದು ಸಂಬಳ ಕೊಡುವದು, ಉಗ್ರ ಶಿಸ್ತು ಪಾಲಿಸುವದು, ಈ ಎಲ್ಲ ನಿಯಮಗಳನ್ನು ಅವಲಂಬಿಸುವಲ್ಲಿ ಶಿವಾಜಿಯು ಬಹಳ ವಿವೇಕವನ್ನು ತೋರಿಸಿದನು.

**ಯೋಗ್ಯತೆ :—** ಈ ರೀತಿ ದೊಡ್ಡ ಸಂಕಟಗಳನ್ನೆದುರಿಸಿ, ಉಚ್ಚ ಧ್ಯೇಯ ವಾದದಿಂದ ರಾಷ್ಟ್ರಸ್ಥಾಪನ ಮಾಡುವ ಶಿವಾಜಿಯು ಒಬ್ಬ ಅಲೌಕಿಕ ಪುರುಷನಾಗಿ ಹೋದನು. ಅಜ್ಞ, ಅಸಂಘಟಿತ ಮತ್ತು ಸೋತುಹೋಗಿದ್ದ ತನ್ನ ದೇಶಬಾಂಧವ ರನ್ನು ಕೈಯಲ್ಲಿ ತೆಗೆದುಕೊಂಡು ಅವನು ಮರಾಠರ ಬಲಾಢ್ಯ ಸತ್ತೆಯನ್ನು ಸ್ಥಾಪಿ ಸಿದನು. ಅದು ಚಿರಕಾಲ ಬಾಳುವಂತಹ ಯೋಜನೆಯನ್ನು ಮಾಡಿದನು. ಚಂದ್ರಗುಪ್ತ ಮೌರ್ಯನಂತೆ ಪರಾಕ್ರಮ, ಅಶೋಕನಂತೆ ಪ್ರಜಾವಾತ್ಸಲ್ಯ ಮತ್ತು ಗುಪ್ತರಂತೆ ಹಿಂದೂ ಧರ್ಮಾಭಿಮಾನಗಳ ಸುಂದರ ಸಮ್ಮಿಳನವು ಶಿವಾಜಿಯಲ್ಲಿದ್ದಿತು. ಶುದ್ಧ ಚಾರಿತ್ರ್ಯದ ಮೂರ್ತಿಮಂತ ಪ್ರತೀಕವೇ ಆಗಿದ್ದನು. ಪರಸ್ತ್ರೀಯರನ್ನು ತಾಯಿಯಂತೆ ಕಾಣುವ ಶಿವಾಜಿಯಂತಹ ವಿಜೇತರು ಕ್ವಚಿತ್ತಾಗಿ ದೊರೆಯುವರು. " ಶಿವರಾಯನ ಮೂರ್ತಿಯನ್ನು ಸ್ಮರಿಸಬೇಕು, ಶಿವರಾಯನ ಪ್ರತಾಪವನ್ನು ಸ್ಮರಿಸಬೇಕು," ಎಂದು ಸಮರ್ಥರು ಹೇಳಿರುವರು.

**ಸ್ವರಾಜ್ಯಕ್ಕೆ ಬಂದ ಸಂಕಟಪರಂಪರೆ :—** ಶಿವಾಜಿಯ ತರುವಾಯ (೧೬೮೦) ಪರಾಕ್ರಮಿಯಾಗಿದ್ದರೂ ವ್ಯಸನಾಧೀನನಾಗಿದ್ದ ಅವನ ಮಗ ಸಂಭಾಜಿಯು ಛತ್ರಪತಿಯಾದನು. ಹಳೆಯ ಮುತ್ಸದ್ದಿಗಳನ್ನು ಮತ್ತು ಸರದಾರರನ್ನು ನೋಯಿಸಿ ದನು. ಕಬ್ಜೀ ಕಲುಷನಂಥ ಯೋಗ್ಯತೆ ಇಲ್ಲದ ಮನುಷ್ಯನನ್ನು ಸನ್ನಿಧಿಯಲ್ಲಿ ಇರಿಸಿ ಕೊಂಡನು. ತಾನು ವ್ಯಸನಮಗ್ನನಾದನು. ಈ ಪರಿಸ್ಥಿಯ ಲಾಭವನ್ನು ಪಡೆದು, ಮರಾಠಾಶಾಹಿಯನ್ನು ಮುಳುಗಿಸಬೇಕೆಂದು ಔರಂಗಜೇಬನು ಪ್ರತಿಜ್ಞೆಯನ್ನು ಮಾಡಿದನು. ಪ್ರಚಂಡ ಸೇನೆಯನ್ನು ತೆಗೆದುಕೊಂಡು ಔರಂಗಜೇಬನು ಸ್ವತಃ ಮರಾಠರ ಮೇಲೆ ದಾಳಿಮಾಡಿದನು. ಮರಾಠಾ ಸತ್ತೆಯ ಮೇಲೆ ಇದೊಳ್ಳೆ ಗಂಡಾಂತರವು ಬಂದಿತು. ಇದೇ ಕಾಲಕ್ಕೆ ಪೋರ್ತುಗೀಜರು ಮತ್ತು ಸಿದ್ದಿಗಳು ಎದ್ದರು. ಇಂಥ ಕಠಿಣ ಪ್ರಸಂಗದಲ್ಲಿ ಸಂಭಾಜಿಯು ಮೊದಲು ಒಳ್ಳೆ ಪರಾಕ್ರಮ ವನ್ನು ತೋರಿಸಿ ತನ್ನ ಶತ್ರುಗಳೆಲ್ಲರನ್ನು ಬೆರಗುಗೊಳಿಸಿದನು. ಅನಂತರ ಅವನು ತನ್ನ ಸೈನ್ಯದ ಸಂಘಟನೆ ಮಾಡದೆ ಉದಾಸೀನನಾಗಿದ್ದನು. ಅದರಿಂದ ಅವನು ಶತ್ರುಗಳ ಕೈಯಲ್ಲಿ ಸಿಕ್ಕನು. ಮತ್ತು ಔರಂಗಜೇಬನ ಧರ್ಮಾಂಧತೆಗೆ ತುತ್ತಾದನು ( ಇ. ಸ. ೧೬೮೯ ). ರಾಣೀ ಯೇಸೂಬಾಯಿ ಮತ್ತು ಶಾಹೂ, ಬಾದಶಾಹಾನ ವಶದಲ್ಲಿ ಸಿಕ್ಕರು. ಅತ್ಯಂತ ಕ್ರೂರ ರೀತಿಯಿಂದ ಸಂಭಾಜಿಯ ವಧೆಯನ್ನು ಮಾಡ ಲಾಯಿತು. ಇದರಿಂದ ಮರಾಠರು ಹತಾಶರಾಗಿ ಶರಣು ಬರಬಹುದೆಂಬ ಭವಿಷ್ಯವು ಮಾತ್ರ ಪೂರ್ಣ ಸುಳ್ಳಾಯಿತು. ತದ್ವಿರುದ್ಧ ಸಂಭಾಜಿಯ ವಧೆಯಿಂದ ಇಡಿ ಮಹಾ ರಾಷ್ಟ್ರವು ಔರಂಗಜೇಬನ ವಿರುದ್ಧ ಉರಿದೆದ್ದಿತು. " ಪ್ರತೀಕಾರ " " ಪ್ರಾಣಪಣವಾಗಿ ಪ್ರತೀಕಾರ" ಇದುವೆ ಮಹಾರಾಷ್ಟ್ರದಲ್ಲೆಲ್ಲ ಕೂಗು. ಛತ್ರಪತಿ ಹೋದರೂ ಶಿವಾಜಿಯು ನಿರ್ಮಿಸಿದ ಸಂಘಟನೆ ಮತ್ತು ಅದರ ತೇಜಸ್ಸು ಲೋಪವಾಗಿರಲಿಲ್ಲ. ಈ ಸಂಕಟಪ್ರಸಂಗದಲ್ಲಿ ಮರಾಠಾ ರಾಜ್ಯವು ಅಗ್ನಿಯಲ್ಲಿ ಪರಿಶುದ್ಧವಾಗಿ ಮತ್ತಷ್ಟು ಪ್ರಜ್ವಲಿಸಹತ್ತಿತು. ಅತ್ಯಂತ ಪ್ರತಿಕೂಲ ಪರಿಸ್ಥಿತಿಯಲ್ಲಿ ಮರಾಠರು ಮೊಗಲರ

ವಿರುದ್ಧ ಹೋರಾಡಿ ತಮ್ಮ ಸ್ವಾತಂತ್ರ್ಯವನ್ನು ರಕ್ಷಿಸಿಕೊಂಡರು. ಅನೇಕರು ಈ ಯಶಸ್ಸಿನಲ್ಲಿ ಪಾಲುಗಾರರಿರುವರು. ರಾಜಾರಾಮ ಮತ್ತು ತಾರಾಬಾಯಿ ಇವರ ನೇತೃತ್ವವು ರಾಮಚಂದ್ರಪಂತ ಅಮಾತ್ಯ, ಪರಶುರಾಮ ತ್ರಿಂಬಕ ಮತ್ತು ಪ್ರಹ್ಲಾದ ನಿರಾಜಿ, ಇವರ ಸಂಘಟನಾ ಚಾತುರ್ಯ, ಖಂಡೋ ಬಲ್ಲಾಳರಂಥ ಆತ್ಯಂತಿಕ ಸ್ವಾಮಿನಿಷ್ಠರು, ಸಂತಾಜಿ, ಧನಾಜಿಯ ಅತುಲ ಪರಾಕ್ರಮ ಮತ್ತು ವಿಶೇಷ ಉಲ್ಲೇಖನೀಯವಾದುದೆಂದರೆ ಸಾಮಾನ್ಯ ಜನತೆಯು ಸ್ವರಾಷ್ಟ್ರಕ್ಕಾಗಿ ಮಾಡಿದ ಪ್ರತೀಕಾರ ಇವೆಲ್ಲ ಈ ಸ್ವಾತಂತ್ರ್ಯಯುದ್ಧದಲ್ಲಿ ಮರಾಠರ ಯಶಸ್ಸಿಗೆ ಪ್ರಮುಖ ಕಾರಣಗಳಾಗಿವೆ.

ಈ ಪ್ರಸಂಗದಲ್ಲಿ ಖಾಫೀಖಾನನು ತಾರಾಬಾಯಿಯ ಗುಣಪ್ರಶಂಸೆಯನ್ನು ಹೀಗೆ ಮಾಡಿದ್ದಾನೆ:- ''ರಾಜಾರಾಮನ ಮರಣದ ನಂತರ ದಕ್ಷಿಣದಲ್ಲಿಯ ಮರಾಠರ ಅಧಿಕಾರವು ಸಂಪುಷ್ಟಕ್ಕೆ ಬಂದಂತೆ ತೋರುತ್ತಿತ್ತು. ಆದರೆ ತಾರಾಬಾಯಿಯು ತನ್ನ ಮೂರು ವರ್ಷದ ಮಗ ರಾಜಾರಾಮನನ್ನು ಪಟ್ಟಕ್ಕೆ ಕುಳ್ಳಿರಿಸಿ ರಾಜ್ಯಕಾರಭಾರದ ಅಧಿಕಾರವನ್ನೆಲ್ಲ ತನ್ನ ಕೈಯಲ್ಲಿ ತೆಗೆದುಕೊಂಡಳು. ಬಾದಶಾಹೀ ಪ್ರದೇಶವನ್ನು ಸುಲಿಗೆ ಮಾಡುವ ಒಂದು ಉಗ್ರವಾದ ಯೋಜನೆಯನ್ನು ಅವಳು ಸಿದ್ಧಪಡಿಸಿದಳು. ಮಾಳವಾ ಮಂದಸೋರಗಳ ವರೆಗೆ ದಕ್ಷಿಣದಲ್ಲಿಯ ಆರೂ ಸುಭೆಗಳ ಸುಲಿಗೆಯನ್ನು ಮಾಡಲು ಸೈನ್ಯವನ್ನು ಕಳುಹಿದಳು. ತನ್ನ ಸರದಾರರ ವಿಶ್ವಾಸವನ್ನು ಅವಳು ಸಂಪಾದಿಸಿದಳು. ಔರಂಗಜೇಬನು ಎಷ್ಟೇ ಮುತ್ತಿಗೆ ಹಾಕಿದರೂ ಮರಾಠರ ಸತ್ತೆಯು ದಿನದಿನಕ್ಕೆ ಹೆಚ್ಚುತ್ತ ಹೋಯಿತು. ಮರಾಠರ ಪ್ರತೀಕಾರವನ್ನು ಎದುರಿಸಲಾರದೆ ಔರಂಗಜೇಬನು ಕೊನೆಯಲ್ಲಿ ಕೈಯೂರಿದನು. ಇ. ಸ. ೧೭೦೭ ರಲ್ಲಿ ದಕ್ಷಿಣದಲ್ಲಿ ಔರಂಗಜೇಬನ ಅಂತ್ಯವಾಯಿತು. ಹಿಂದುಸ್ಥಾನದಲ್ಲಿ 'ದಾರ-ಉಲ್ ಇಸ್ಲಾಮ' (ಇಸ್ಲಾಮಮಯ) ನಿರ್ಮಾಣ ಮಾಡುವ ಅವನ ರಾಕ್ಷಸೀ ಮಹತ್ವಾಕಾಂಕ್ಷೆಯೂ ಅವನ ಹಿಂದೆಯೇ ಮಾಯವಾಯಿತು.

ಇಡೀ ವರ್ಷ ಯುದ್ಧಭೂಮಿಯಲ್ಲಿ ಸತತವಾಗಿ (ಇ. ಸ. ೧೬೮೩ ರಿಂದ ೧೭೦೭ರ ವರೆಗೆ) ೨೪ ವರ್ಷ ಔರಂಗಜೇಬನಂಥ ಅತಿ ಬಲಾಢ್ಯ ಶತ್ರುವಿನೊಡನೆ ಮರಾಠರು ಹೋರಾಡಿದ್ದು ಹಿಂದುಸ್ಥಾನದಲ್ಲಿ ಅಷ್ಟೇ ಅಲ್ಲ ಜಗತ್ತಿನ ಇತಿಹಾಸದಲ್ಲಿಯೂ ಅಪೂರ್ವವಾಗಿದೆ. ಇಡಿ ರಾಷ್ಟ್ರವು ಯಾವಾಗ ಒಮ್ಮನಸ್ಸಿನಿಂದ ಮತ್ತು ಐಕ್ಯದಿಂದ ಪ್ರತೀಕಾರ ಮಾಡುವದೋ ಆಗ ಬಲಾಢ್ಯ ಶತ್ರುವಿನದು ಏನೂ ನಡೆಯುವದಿಲ್ಲ. ಇದನ್ನೇ ಮರಾಠರು (೨ನೇ ಮಹಾಯುದ್ಧದಲ್ಲಿ ರಶಿಯನ್‌ರಂತೆ) ಸಿದ್ಧಮಾಡಿ ತೋರಿಸಿದರು.

## ಅವತರಣಿಕೆ

೧. ಶಿವಾಜಿಯಿಂದ ೨ನೇ ಸಂಭಾಜಿಯ ವರೆಗೆ ಮರಾಠಾ ರಾಜ್ಯದಲ್ಲಿ ಸೇವೆಗಿದ್ದ ಶ್ರೇಷ್ಠ ಮುತ್ಸದ್ದಿ ಅಮಾತ್ಯ ರಾಮಚಂದ್ರಪಂತ ಬಾವಡೇಕರ ಇವರು

ಶಿವಾಜಿಯ ರಾಜನೀತಿಯ ಬಗ್ಗೆ "ಆಜ್ಞಾಪತ್ರ" ವೆಂಬ ಅಮೌಲ್ಯ ಗ್ರಂಥವನ್ನು (ಕೌಟಿಲ್ಯನ 'ಅರ್ಥಶಾಸ್ತ್ರ' ದಂಥ ಗ್ರಂಥ) ಬರೆದಿರುವರು. ಅದರಲ್ಲಿ ಮರಾಠಾ ರಾಜ್ಯವ್ಯವಸ್ಥೆಯ ಬಗ್ಗೆ ಉದ್ಬೋಧಕ ವರ್ಣನೆಯನ್ನು ಮಾಡಲಾಗಿದೆ. ಅದರಲ್ಲಿಯ ಕೆಲ ಭಾಗವನ್ನು ಕೆಳಗೆ ಕೊಟ್ಟಿದೆ :—

"ಯಾವ ಯಾವ ಶತ್ರುಗಳು ಯಾವ ಯಾವ ಉಪಾಯಗಳನ್ನು ಯೋಚಿಸಿದರೂ ಆಯಾ ಉಪಾಯ ಮತ್ತು ಆಯಾ ಶತ್ರುಗಳನ್ನು ಪಾದಾಕ್ರಾಂತ ಮಾಡಿ ಸಾಲೇರೀ ಅಹಿವಂತದಿಂದ ಜಂಜೀ ಕಾವೇರೀ ತೀರದ ವರೆಗೆ ನಿಷ್ಕಂಟಕ ರಾಜ್ಯ, ಶತಾವಧಿ ಕೋಟಿ ಕಿಲ್ಲೆ, ಅದರಂತೆ ಜಲದುರ್ಗ, ಅನೇಕ ವಿಶಾಲ ಸ್ಥಳಗಳು, ನಾಲ್ವತ್ತು ಸಾವಿರ ಕುದುರೆ ವಾಗಾ ಮತ್ತು ಆರವತ್ತು ಎಪ್ಪತ್ತು ಸಾವಿರ ಕುದುರೆ ಸವಾರರು, ಎರಡು ಲಕ್ಷ ಪದಾತಿ, ಕೋಟ್ಯಾವಧಿ ಬೊಕ್ಕಸ, ಅದರಂತೆ ಉತ್ತಮ ಜವಾಹೀರ ವಸ್ತುಜಾತವನ್ನು ಸಂಪಾದಿಸಿದರು. ಧರ್ಮೋದ್ಧಾರ ಮಾಡಿ ದೇವ ಬ್ರಾಹ್ಮಣ ಸಂಸ್ಥಾನ ಸ್ಥಾಪಿಸಿ ಯಜನ ಯಾಜನಾದಿ ಷಟ್ಕರ್ಮಗಳನ್ನು ನಡೆಸಿ, ವರ್ಣ ವಿಭಾಗಗಳನ್ನು ನಡೆಸಿದರು. ಕಳ್ಳಕಾಕರು, ಅನ್ಯಾಯಿಗಳು ಇವರ ಹೆಸರು ಕೂಡ ರಾಜ್ಯದಲ್ಲಿ ಇಲ್ಲದಂತಾಯಿತು. ದೇಶ, ದುರ್ಗ ಮತ್ತು ಸೈನ್ಯ ಠಾಣೆಗಳನ್ನು ಹೊಸದಾಗಿ ನಿರ್ಮಿಸಿ ಏಕರೂಪ ಅವ್ಯಾಹತ ಶಾಸನ ನಡೆಸಿದರು. ಕೇವಲ ನೂತನ ಸೃಷ್ಟಿಯನ್ನೆ ನಿರ್ಮಿಸಿದರು."

೧. ಮರಾಠರ ಉದಯಕ್ಕೆ ಮಹಾರಾಷ್ಟ್ರದ ವಿಶಿಷ್ಟ ಭೌಗೋಲಿಕ ಪರಿಸ್ಥಿತಿ ಎಂತು ಉಪಕಾರವಾಯಿತು ಎಂಬುದನ್ನು ಹೇಳಿರಿ.

೨. ಮಹಾರಾಷ್ಟ್ರದಲ್ಲಿ ಸಾಧುಸಂತರ ಕಾರ್ಯವನ್ನು ಸ್ವಲ್ಪದರಲ್ಲಿ ವರ್ಣಿಸಿರಿ.

೩. ಶಹಾಜಿಯ ಕಾರ್ಯವು ಶಿವಾಜಿಗೆ ಎಂತು ಪೋಷಕವಾಯಿತು ಎಂಬುದನ್ನು ಹೇಳಿರಿ.

೪. ಟಿಪ್ಪಣೆ ಬರೆಯಿರಿ:— (ಅ) ಶಿವಾಜಿಯ ಸುರತದ ದಾಳಿ (ಆ) ರಾಜ್ಯಾಭಿಷೇಕ ಸಮಾರಂಭದ ಮಹತ್ವ (ಇ) ಶಿವಾಜಿಯ ದಕ್ಷಿಣದ ದಾಳಿಯ ಉದ್ದೇಶ (ಈ) ಶಿವಾಜಿ ಇಂಗ್ಲಿಷ ಸಂಬಂಧ.

೫. ಶಿವಾಜಿಯ ಸ್ವರಾಜ್ಯಸ್ಥಾಪನೆಯಲ್ಲಿ ಯಾವ ಉಚ್ಚ ಧ್ಯೇಯವಾದವಿತ್ತು? ಅದಕ್ಕೆ ಎಂತು ಮೂರ್ತಸ್ವರೂಪ ಕೊಡಲಾಯಿತು?

೬. 'ಶಿವಾಜಿಯೊಬ್ಬ ಅದ್ವಿತೀಯ ಪುರುಷನಾಗಿ ಹೋದನು' ಈ ವಿಧಾನವನ್ನು ಸ್ಪಷ್ಟೀಕರಿಸಿರಿ.

೭. ಔರಂಗಜೇಬನ ವಿರುದ್ಧ ಮರಾಠರು ನಡೆಸಿದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮರಾಠರ ಯಶಸ್ಸಿನ ಕಾರಣಮೀಮಾಂಸೆಯನ್ನು ಮಾಡಿರಿ.




ಮರಾಠರ ಸಾಮ್ರಾಜ್ಯ

## ೧೫ನೆಯ ಪಾಠ

# ಮರಾಠರ ಸಾಮ್ರಾಜ್ಯ

**ಸ್ವರಾಜ್ಯದಿಂದ ಸಾಮ್ರಾಜ್ಯದತ್ತ** :— ಔರಂಗಜೇಬನ ಮರಣದ ನಂತರ ಮೊಗಲರ ಹಾಗೂ ಮರಾಠರ ಇತಿಹಾಸದ ಸ್ವರೂಪವೇ ಬದಲಿಸುತ್ತ ಹೋಯಿತು. ಮೊಗಲ ಬಾದಶಾಹರಲ್ಲಿ ಕರ್ತೃತ್ವಶಾಲಿ ಬಾದಶಾಹರ ಪರಂಪರೆಯು ಮುಗಿದುಹೋಗಿ ಪ್ರಧಾನರ ಪ್ರಾಬಲ್ಯವು ಹೆಚ್ಚಿತು. ಆಡಳಿತದಲ್ಲಿ ಅವ್ಯವಸ್ಥೆಯುಂಟಾಗಿ ಹ್ರಾಸವು ಪ್ರಾರಂಭವಾಯಿತು. ಇಂಥ ಪರಿಸ್ಥಿತಿಯಲ್ಲಿ ಮೊಗಲ ದರಬಾರದವರು ಶಾಹೂನ ಬಿಡುಗಡೆಮಾಡಿ ಒಂದೇ ಕಲ್ಲಿಗೆ ಎರಡು ಹಕ್ಕಿಗಳನ್ನು ಕೆಡಹಿದರು. ಮರಾಠರ ರಾಜ್ಯದಲ್ಲಿ ಅಧಿಕಾರಕ್ಕಾಗಿ ತಾರಾಬಾಯಿ ಹಾಗೂ ಶಾಹೂ ಇವರಲ್ಲಿ ಒಳಜಗಳವು ಪ್ರಾರಂಭವಾಗಿ ಮರಾಠರು ಮೊಗಲರ ಮೇಲೆ ನಡೆಸುತ್ತಿದ್ದ ದಾಳಿಗಳು ನಿಂತು ಹೋದವು. ಮೊಗಲರಿಂದ ಉಪಕೃತನಾದ ಶಾಹುವು ಮೊಗಲರಿಗೆ ತೊಂದರೆ ಕೊಡಲಾರನೆಂದು ಮೊಗಲ ಮುತ್ಸದ್ದಿಗಳು ಮಾಡಿದ ತರ್ಕವು ಸರಿಯಾಯಿತು. ಶಾಹು ದಕ್ಷಿಣಕ್ಕೆ ಬಂದೊಡನೆ ತಾರಾಬಾಯಿಯು ಆತನನ್ನು ವಿರೋಧಿಸಿದಳು. (ಸ. ೧೭೦೭). ಆ ಕಾಲಕ್ಕೆ ಬಾಳಾಜಿ ವಿಶ್ವನಾಥಭಟ್ಟನೆಂಬವನು ದಕ್ಷಿಣದ ಸುಭೇದಾರನಾಗಿದ್ದನು. ಅವನು ಪ್ರಾರಂಭದಿಂದಲೂ ಶಾಹುವಿನ ಪಕ್ಷಕಟ್ಟಿ ಸೇನಾಪತಿ ಧನಾಜಿ ಜಾಧವನನ್ನು ತನ್ನ ಬುದ್ಧಿಚಾತುರ್ಯದಿಂದ ಶಾಹೂ ಕಡೆಗೆ ಒಲಿಸಿಕೊಂಡದ್ದರಿಂದ ತಾರಾಬಾಯಿಯು ಪರಾಜಯ ಹೊಂದಿ ಶಾಹೂನು ವಿಜಯಿಯಾದನು.

ಇ. ಸ. ೧೭೦೮ ರಿಂದ ೧೭೪೯ರ ವರೆಗೆ ಅಂದರೆ ೪೧ ವರ್ಷಗಳ ವರೆಗೆ ಶಾಹೂನು ಛತ್ರಪತಿಯಾಗಿದ್ದನು. ರಾಜ್ಯಕಾರಭಾರದ ಹೊಣೆಗಾರಿಕೆಯನ್ನು ಪಂತಪ್ರಧಾನನಾದ ಬಾಳಾಜಿ ವಿಶ್ವನಾಥಭಟ್ಟನಿಗೆ ಒಪ್ಪಿಸಿ ಶಾಹೂನು "ಶಾಸನಬದ್ಧ ಪ್ರಮುಖ" ನಂತೆ ಛತ್ರಪತಿಯ ಆಳಿಕೆ ನಡೆಸಿದನು. ಶಾಹೂನ ಆಳಿಕೆಯಲ್ಲಿ ಭಟ್ಟ ಮನೆತನದವರೇ ಮೂವರು ಪಂತಪ್ರಧಾನರಾಗಿದ್ದರಿಂದ ಮುಂದೆ ಶಾಹೂನ ಆಜ್ಞೆಯಂತೆ ಪ್ರಧಾನಪದವು ಈ ಮನೆತನದವರಿಗೆ ಶಾಶ್ವತವಾಗಿ ನಡೆದುಕೊಂಡು ಬಂದಿತು. ಈ ಘಟನೆಯು ವಿಶೇಷ ಮಹತ್ವದ್ದಾಗಿದೆ. ಛಪ್ರಪತಿಗಳು ಹೆಸರಿಗೆ ಮಾತ್ರ ಉಳಿದು ಕೊಂಡು ಅವರಅಧಿಕಾರವೆಲ್ಲ ಪಂತಪ್ರಧಾನರ ಕಡೆಗೆ ಬಂದು ಮರಾಠರ ರಾಜ್ಯದ ಭವಿತವ್ಯವು ಕರ್ತೃತ್ವಶಕ್ತಿಯನ್ನೇ ಅವಲಂಬಿಸುವಂತಾಯಿತು. ಹಿರಿಯ ಮಾಧವ ರಾಯ ವರೆಗಿನ ಎಲ್ಲ ಪೇಶ್ವೆಯರು ಕರ್ತೃತ್ವಶಾಲಿಗಳಾದ್ದರಿಂದ ಈ ಕಾಲದಲ್ಲಿ ಮರಾಠಾ ರಾಜ್ಯವು ಉತ್ಕರ್ಷವನ್ನು ಹೊಂದಿತು. ಅನಂತರದ ಪೇಶ್ವೆಗಳು ಸಾಮಾನ್ಯ ರಾದುದರಿಂದ ರಾಜ್ಯದ ಅವನತಿಯು ಪ್ರಾರಂಭವಾಯಿತು. ಮೊಗಲರ ರಾಜ್ಯದಲ್ಲಿ ಸಂಭವಿಸಿದಘಟನೆಗಳ ಪುನರಾವರ್ತನೆಯು ಇಲ್ಲಿಯೂ ನಡೆಯಿತು. ಪಂತಪ್ರಧಾನರ ಅಧಿಕಾರವನ್ನೊಪ್ಪದ ಮರಾಠಾ ಸರದಾರರು ಸ್ವತಂತ್ರರಂತೆ ವರ್ತಿಸಹತ್ತಿದರು.

ಆದ್ದರಿಂದ ಶಿವಾಜಿಯ ಕಾಲದಲ್ಲಿ ಕಂಡುಬರುತ್ತಿದ್ದ ಐಕ್ಯ-ಸಂಘಟನೆಗಳು ನಷ್ಟವಾದವು. ಆದರೂ ಹಿರಿಯ ಮಾಧವರಾಯನ ಕಾಲದ ವರೆಗೆ ಮರಾಠರ ಏಳಿಗೆಯೇ ಆಗುತ್ತ ಬಂತೆನ್ನಬಹುದು. ಮರಾಠರ ಸ್ವರಾಜ್ಯವನ್ನು ಸಾಮ್ರಾಜ್ಯವನ್ನಾಗಿಸಬೇಕೆಂದು ಪೇಶ್ವೆಯರು ಸ. ೧೭೪೯–೧೭೭೩ರ ಅವಧಿಯಲ್ಲಿ ನಿಕರದ ಪ್ರಯತ್ನವನ್ನು ಮಾಡಿದರು. ಉತ್ತರದಲ್ಲಿ ಸಿಂಧೂ ನದಿಯಿಂದ ದಕ್ಷಿಣದಲ್ಲಿ ಕಾವೇರಿಯ ವರೆಗೆ ಮರಾಠರ ರಾಜ್ಯವು ವಿಸ್ತಾರಹೊಂದಿ, ಮರಾಠರ ಆಳಿಕೆಗೆ ಕಳಸವಿಟ್ಟಂತಾಯಿತು (೧೭೬೦). ಹಿಂದುಸ್ಥಾನದ ರಾಜಕಾರಣದ ಸೂತ್ರಗಳು ಪೇಶ್ವೆಯರ ಕೈಗೆ ಬಂದವು. ದಿಲ್ಲಿಯ ಮಹತ್ವವು ಅಳಿದು ಪೇಶ್ವೆಯರ ರಾಜಧಾನಿಯಾದ ಪುಣೆಗೆ ಆ ಮಹತ್ವವು ಪ್ರಾಪ್ತವಾಯಿತು. ಹಿಂದೂ ಸ್ವರಾಜ್ಯವನ್ನು ಸಾಮ್ರಾಜ್ಯವನ್ನಾಗಿ ವಿಸ್ತರಿಸಲು ಪೇಶ್ವೆಯರು ನಡೆಸಿದ ಉಪಕ್ರಮಗಳನ್ನು ಇನ್ನು-ನೋಡೋಣ.

**ಪೇಶ್ವೆಪದ ಸಂಸ್ಥಾಪಕ:—** ಬಾಳಾಜಿ ವಿಶ್ವನಾಥನಿಗೆ ಪೇಶ್ವೆಪದವು ಅಲ್ಪ ಕಾಲ ಮಾತ್ರ ಲಭಿಸಿತು (ಸ. ೧೭೧೩–೨೦). ಆದರೂ ಆತನು ಮಾಡಿದ ಕಾರ್ಯವು ವಿಶೇಷವಾಗಿದೆ. ಸ್ವಕೀಯ ವಿರೋಧಿಗಳನ್ನು ಹತ್ತಿಕ್ಕಿ ಶಾಹೂನ ಸಿಂಹಾಸನವನ್ನು ನಿಷ್ಕಂಟಕವಾಗಿರಿಸಿದನು. ಮೊಗಲ ಬಾದಶಾಹಾನ ಮಂತ್ರಿಗಳಾದ ಸಯ್ಯದ ಬಂಧುಗಳಿಗೆ ಸಹಾಯ ನೀಡಲೆಂದು ಬಾಳಾಜಿಯು ತಾನೇ ಸ್ವತಃ ೧೬,೦೦೦ ಸೈನಿಕರೊಡನೆ ದಿಲ್ಲಿಗೆ ತೆರಳಿದನು (೧೭೧೬). ಸಯ್ಯದ ಬಂಧುಗಳ ಮೂಲಕ ಬಾದಶಾಹಾರ ಕಡೆಯಿಂದ ಲಾಭದಾಯಕವಾದ ಅನೇಕ ಸಂಗತಿಗಳನ್ನು ಮಂಜೂರ ಮಾಡಿಸಿಕೊಂಡನು. ರಾಜಮಾತೆಯಾದ ಯೇಸೂಬಾಯಿಯ ಬಿಡುಗಡೆಯನ್ನು ಸಾಧಿಸಿಕೊಂಡು ಶಾಹೂನ ಛತ್ರಪತಿ ಪದಕ್ಕೆ ಬಾದಶಾಹಾನ ಮನ್ನಣೆ ದೊರಕಿಸಿದನು. ಇನ್ನೂ ವಿಶೇಷವೆಂದರೆ ದಕ್ಷಿಣದಲ್ಲಿಯ ಮೊಗಲರ ಆರು ಸುಭೆಗಳಲ್ಲಿ ಚೌಥಾಯಿ ಮತ್ತು ಸರದೇಶಮುಖಿ ಹಕ್ಕನ್ನು ಸಂಪಾದಿಸಿದನು. ಇದಕ್ಕೆ ಬದಲಾಗಿ ಮರಾಠರು ಬಾದಶಾಹಾನ ಸಂರಕ್ಷಣೆಗಾಗಿ ೧೫,೦೦೦ ಸೈನ್ಯವನ್ನು ದಿಲ್ಲಿಯಲ್ಲಿ ಇಡಬೇಕೆಂದಿತ್ತು. ಎಂಥ ಸ್ಥಿತ್ಯಂತರವಿದು! ಮರಾಠರನ್ನು ನಿರ್ಮೂಲ ಮಾಡಲು ಕಟಿಬದ್ಧರಾಗಿದ್ದ ಮೊಗಲ ಬಾದಶಾಹಾನಿಗೆ ಸ್ವಸಂರಕ್ಷಣೆಗಾಗಿ ಮರಾಠರ ಸಹಾಯವನ್ನು ಯಾಚಿಸಬೇಕಾಯಿತು!

ಈ ಘಟನೆಯಿಂದ ಮರಾಠರ ಪ್ರತಿಷ್ಠೆಯು ಹೆಚ್ಚಿತು. ಅವರ ಕರ್ತೃತ್ವಕ್ಕೆ ಹೊಸ ಕ್ಷೇತ್ರವು ದೊರಕಿದಂತಾಯಿತು. ಅವರ ದೃಷ್ಟಿಯು ವಿಶಾಲವಾಗಿ ಹಿಂದುಸ್ಥಾನದ ರಾಜ್ಯಸೂತ್ರಗಳನ್ನು ವಶಪಡಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯು ಜಾಗ್ರತವಾಯಿತು

ಇದೆಲ್ಲದರ ಶ್ರೇಯಸ್ಸು ಬಾಳಾಜಿ ವಿಶ್ವನಾಥನಿಗೆ ಸಲ್ಲತಕ್ಕದ್ದು. ಬಾಳಾಜಿಯು ಈ ಕಾರ್ಯದಲ್ಲಿ ಸೇನಾಪತಿಯೆಂದೂ ಮುತ್ಸದ್ದಿಯೆಂದೂ ತನ್ನ ಯೋಗ್ಯತೆಯನ್ನು ಪ್ರದರ್ಶಿಸಿದನು. 'ಶಾಹೂ ರಾಜನ ಅತ್ಯಂತ ಬುದ್ಧಿವಂತ ಸೇನಾಪತಿ' ಎಂದು ಖಾಫೀಖಾನನು ಇವನನ್ನು ಗೌರವಿಸಿದ್ದಾನೆ.

ಬಾಳಾಜಿ ವಿಶ್ವನಾಥನು ಕೇವಲ ರಾಜ್ಯವಿಸ್ತಾರದ ಕಡೆಗೆ ಮನಸ್ಸು ಹಾಕಿದ್ದ-

ನೆಂತಲ್ಲ. ರಾಜ್ಯದ ಸಂಘಟನೆಯ ಕಡೆಗೂ, ಲಕ್ಷ್ಯ ಪೂರೈಸಿದ್ದನು. ರಾಜ್ಯದ ಆರ್ಥಿಕ ಸ್ಥಿತಿಯನ್ನು ಸುಧಾರಿಸಿದನು. ಛತ್ರಪತಿಯ ಸಿಂಹಾಸನವನ್ನು ಭದ್ರಗೊಳಿಸಿದನು. ಬಾಳಾಜಿ ವಿಶ್ವನಾಥನ ಕರ್ತೃತ್ವದಿಂದಲೇ ಮರಾಠರ ರಾಜ್ಯದ ನೇತೃತ್ವವು ಪೇಶ್ವೆಯರ ಕಡೆಗೆ ಬಂದಿತು. ಆತನ ಸುದೈವದಿಂದ ಆತನ ಮಕ್ಕಳಾದ ಮೊದಲನೇ ಬಾಜೀರಾವ ಹಾಗೂ ಚಿಮಾಜಿ ಆಪ್ಪಾ ಇವರಾದರೂ ಕರ್ತೃತ್ವಶಾಲಿಗಳಾಗಿದ್ದರು. ಆದ್ದರಿಂದ ಶಾಹೂನು ತರುಣ ಬಾಜೀರಾಯನನ್ನೇ ಪೇಶ್ವೆಯನ್ನಾಗಿ ನೇಮಿಸಿದನು.



ಛತ್ರಪತಿ ಶಾಹೂ

**ಸಾಮ್ರಾಜ್ಯವಾದಿ ಬಾಜೀರಾವ** ( ಸ. ೧೭೨೦–೪೦ ) :— ಬಾಜೀರಾಯನು ಪೇಶ್ವೆಯ ಅಧಿಕಾರವನ್ನು ವಹಿಸಿಕೊಂಡಾಗ ಕೇವಲ ಇಪ್ಪತ್ತು ವರ್ಷದ ತರುಣ-ನಾಗಿದ್ದನು. ಪಂತಪ್ರಧಾನನ ಹೊಣೆಗಾರಿಕೆಯನ್ನು ಇವನು ಇಪ್ಪತ್ತು ವರ್ಷ ಯಶಸ್ವಿಯಾಗಿ ನಿರ್ವಹಿಸಿದನು. ಈತನು ತಾನು ಶಿವಾಜಿಯ ಪಟ್ಟಶಿಷ್ಯನೆಂದು

ಹೇಳಿಕೊಳ್ಳುತ್ತಿದ್ದನು. ಸೇನಾಪತಿಯಾಗಿ ಶಿವಾಜಿಯ ಕೂಟಯುದ್ಧ ಪದ್ಧತಿ, ಸಾದಾ ಸೈನಿಕವೃತ್ತಿ, ಸೈನಿಕರಿಗೆ ಸ್ಫೂರ್ತಿಯನ್ನು ನೀಡುವ ಜಾಣ್ಮೆ, ವಿದ್ಯುದ್ಗತಿಯ ಸಂಚಲನ, ಗುಣವಂತರನ್ನು ಕಾಪಾಡಿಕೊಂಡು ಅವರನ್ನು ರಾಜ್ಯಕಾರ್ಯಕ್ಕೆ ಉಪಯೋಗಿಸಿಕೊಳ್ಳುವ ರೀತಿ ಮುಂತಾದ ವಿಷಯಗಳಲ್ಲಿ ಬಾಜೀರಾಯನು ನಿಜ-ವಾಗಿಯೂ ಶಿವಾಜಿಯ ಪಟ್ಟಶಿಷ್ಯನಾಗಿದ್ದನು. ಹಿಂದೂ ಸಾಮ್ರಾಜ್ಯವನ್ನು ಸ್ಥಾಪಿಸ-ಬೇಕೆನ್ನುವ ಶಿವಾಜಿಯ ಧ್ಯೇಯವನ್ನು ಸಾಧಿಸುವ ದೃಷ್ಟಿಯಿಂದ ಇವನು ಬಹು ಸಾಹಸದಿಂದ ರಾಜ್ಯವಿಸ್ತಾರದ ಕಾರ್ಯವನ್ನು ಕೈಕೊಂಡನು.

ಈ ಧ್ಯೇಯ ಸಿದ್ಧಿಗಾಗಿ ದಿಲ್ಲಿಯ ರಾಜ್ಯವನ್ನು ಗೆದ್ದುಕೊಳ್ಳಲು ಶಾಹೂ ಛತ್ರ ಪತಿಯ ಅನುಮತಿಯನ್ನು ದೊರಕಿಸಿದನು. "ಬೇರುಗಳನ್ನೇ ಕತ್ತರಿಸಿದರೆ ರೆಂಬೆಗಳು ತಾವೇ ಕೆಳಗೆ ಉರುಳುತ್ತವೆ" ಎಂಬ ಇವನ ಸೂತ್ರವು ಪ್ರಸಿದ್ಧವಿದೆ. ಈ ಸೂತ್ರದಂತೆ ಅವನು ದಕ್ಷಿಣದ ರಾಜಕಾರಣವನ್ನು ಗೌಣವೆಂದು ಬಗೆದು ತನ್ನ ಲಕ್ಷ್ಯವನ್ನು ಉತ್ತರ ಹಿಂದುಸ್ಥಾನದ ಮೇಲೆ ಕೇಂದ್ರೀಕರಿಸಿದನು. ಮಾಳವಾ, ಗುಜರಾತಗಳಲ್ಲಿ ಶಿಂಧೆ, ಹೋಳಕರ, ಗಾಯಕವಾಡ ಮುಂತಾದ ಸರದಾರರನ್ನು ಶಾಶ್ವತವಾಗಿಟ್ಟು ಆ ಪ್ರದೇಶದ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಿದನು. ಬಾಜೀರಾಯನ ಈ ಆಕ್ರಮಕ ಧೋರಣವು ದಕ್ಷರಾದ ಮರಾಠಾ ಸರದಾರರಿಗೆ ಮುಂದೆ ಬರಲು ಅವಕಾಶವನ್ನಿತ್ತಿತು ಪಾಲಖೇಡದಲ್ಲಿ (೧೭೨೮) ಹಾಗು ಭೋಪಾಳದಲ್ಲಿ (೧೭೩೭) ನಿಜಾಮನನ್ನು ಸಂಪೂರ್ಣವಾಗಿ ಸೋಲಿಸಿ ದಕ್ಷಿಣದ ಸುಭೆಯಲ್ಲಿಯ ಚೌಥಾಯಿಯ ಹಕ್ಕನ್ನು ಶಾಶ್ವತವಾಗಿ ಕೊಂಡರು. ಬಾಜೀರಾಯನು ಈ ವಿಜಯವನ್ನು ಸಂಪಾದಿಸಿ ಇನ್ನು ಮುಂದೆ ಕೇವಲ ದಕ್ಷಿಣವಷ್ಟೇ ಅಲ್ಲ, ಇಡೀ ಹಿಂದುಸ್ಥಾನದ ಮುಂದಾಳ್ತನವು ಮರಾ-ಠರ ಕಡೆಗೆ ಬಂತೆಂಬುದನ್ನು ಮಹತ್ವಾಕಾಂಕ್ಷಿ ನಿಜಾಮನಿಗೆ ಮನಗಾಣಿಸಿ ಕೊಟ್ಟನು. ಬಾಜೀರಾಯನು ನಿಜಾಮನನ್ನು ಸೋಲಿಸಿದರೂ ನಷ್ಟಪಡಿಸಲಿಲ್ಲವಾದ್ದರಿಂದ ಶಿವಾಜಿಗೆ ಸಿದ್ದಿಯು ಗಂಟುಬಿದ್ದಂತೆ ಬಾಜೀರಾಯನಿಗೆ ನಿಜಾಮನು ಅಂಗೈಯಲ್ಲಿಯ ಕೆಂಡದಂತೆ ತಾಪದಾಯಕನಾದನು. ಬುಂದೇಲಖಂಡದ ಅರಸು ಛತ್ರಸಾಲನಿಗೆ ಬಾಜೀರಾಯನು ಸಂಕಟ ಕಾಲದಲ್ಲಿ ಸಹಾಯ ಮಾಡಿ ೩೩ ಲಕ್ಷ ರೂ. ಗಳ ಪ್ರದೇಶವನ್ನು ವಶಪಡಿಸಿ ಕೊಂಡನು. ಮರಾಠರ ರಾಜ್ಯವನ್ನು ಚಂಬಳಾ ನದಿಯ ವರೆಗೆ ವಿಸ್ತರಿಸಿದನು. ರಜಪೂತ ರಾಜರೊಂದಿಗೆ ಸ್ನೇಹವನ್ನು ಬೆಳೆಸಿ ಹಿಂದೂ ಅಧಿಕಾರಿಗಳ ಸಂಘಟನೆ ಯನ್ನು ಸಾಧಿಸುವಲ್ಲಿ ಮುತ್ಸದ್ದಿತನವನ್ನು ಪ್ರದರ್ಶಿಸಿದನು. ಬಾಜೀರಾಯನಂತೆ ಚಿಮಾಜಿಯ ಕಾರ್ಯವಾದರೂ ಪ್ರಶಂಸನೀಯವಾಗಿದೆ. ಚಿಮಾಜಿಯು ೧೭೩೬ರಲ್ಲಿ ಸಿದ್ದಿಯೊಡನೆ ಒಪ್ಪಂದ ಮಾಡಿಕೊಂಡು ಅವನನ್ನು ಮರಾಠರ ಮಾಂಡಲಿಕನನ್ನಾ-ಗಿಸಿದನು. ೧೭೩೯ ರಲ್ಲಿ ವಸಯಿಯನ್ನು ವಶಪಡಿಸಿಕೊಂಡು ಪೋರ್ತುಗೀಜರ ನಿರ್ಮೂಲನ ಕಾರ್ಯದಲ್ಲಿ ವಿಶೇಷ ಶೌರ್ಯವನ್ನು ಪ್ರದರ್ಶಿಸಿದನು.

ಸ. ೧೭೩೯ರಲ್ಲಿ ನಾದಿರಶಾಹಾನು ದಿಲ್ಲಿಯ ಮೇಲೆ ದಾಳಿ ಮಾಡಿದಾಗ ಚಿಮಾ ಜಿಯು ವಸಯಿಯ ಮುತ್ತಿಗೆಯಲ್ಲಿ ತೊಡಗಿದ್ದನು. ಆದ್ದರಿಂದ ನಾದಿರಶಾಹಾನನ್ನು

ಎದುರಿಸಲು ಬಾಜೀರಾಯನೊಂದಿಗೆ ಉತ್ತರಕ್ಕೆ ತೆರಳಲು ಚಿಮಾಜಿಗೆ ಸಾಧ್ಯವಾಗ ಲಿಲ್ಲ. ಮತ್ತು ನಾದಿರಶಾಹಾನೂ ಅವಸರದಿಂದ ಹೊರಟು ಹೋದದ್ದರಿಂದ ಆತನನ್ನು ಓಡಿಸಿ ದಿಲ್ಲಿಯ ರಾಜ್ಯಸೂತ್ರಗಳನ್ನು ವಶಪಡಿಸಿಕೊಳ್ಳಬೇಕೆನ್ನುವ ಬಾಜೀರಾಯನ ಮನೋರಥವು ಸಿದ್ಧಿಸಲಿಲ್ಲ.

ಬಾಜೀರಾಯನ ಲಕ್ಷ್ಯವು ಹೆಚ್ಚಾಗಿ ರಾಜ್ಯದ ವಿಸ್ತಾರದ ಕಡೆಗಿತ್ತು. ಮಾಳ ವಾದಲ್ಲಿ ಗಟ್ಟಿಮುಟ್ಟಾಗಿ ತಳವೂರಿ ಚಂಬಳಾ ನದಿಯ ವರೆಗೆ ತನ್ನ ರಾಜ್ಯವನ್ನು ವಿಸ್ತ ರಿಸಿದನು. ಸಿದ್ದಿ, ಪೋರ್ತುಗೀಜ ಮತ್ತು ನಿಜಾಮನನ್ನು ಸೋಲಿಸಿ ದಕ್ಷಿಣದಲ್ಲಿ ಮರಾಠರ ವರ್ಚಸ್ಸನ್ನು ಪ್ರಸ್ಥಾಪಿಸಿದನು. ಸಾತಾರಾ ಮತ್ತು ಕೊಲ್ಹಾಪುರಗಳಲ್ಲಿಯ ಛತ್ರಪತಿಯರಲ್ಲಿ ಸಂಧಾನವನ್ನು ಸಾಧಿಸಿ ರಾಜ್ಯದಲ್ಲಿಯ ಒಡಕನ್ನು ಇಲ್ಲದಂತಾಗಿ ಸಿದನು. ಮಲೆತು ನಿಂತಿದ್ದ ಸರದಾರರಿಗೆ ಉಗ್ರಶಾಸನವನ್ನು ವಿಧಿಸಿ ಮರಾಠಾ ಸರದಾರರೆಲ್ಲ ಒಬ್ಬ ಧುರೀಣನ ನೇತೃತ್ವವನ್ನು ಒಪ್ಪಿಕೊಳ್ಳುವಂತೆ ಪಾಠ ಕಲಿಸಿವನು. ಶಿಂಧೆ, ಹೋಳಕರ, ಗಾಯಕವಾಡ, ಪವಾರ ಮುಂತಾದ ದಕ್ಷ ಸರದಾರರನ್ನು ಪ್ರಸಿ ದ್ಧಿಗೆ ತಂದನು. ಬ್ರಾಹ್ಮಣ ಪೇಶ್ವೆ ಹಾಗೂ ಮರಾಠಾ ಸರದಾರರು ಭುಜಕ್ಕೆ ಭುಜ ಹಚ್ಚಿ ಎಲ್ಲ ಕಾಲಗಳಲ್ಲಿ ಹೋರಾಡುತ್ತಿದ್ದರು. ಶಿವಾಜಿಯ ಜಾತಿನಿರಪೇಕ್ಷ ರಾಜ್ಯ ಕಾರಭಾರವನ್ನು ಬಾಜೀರಾಯನು ನಡೆಸಿಕೊಂಡು ಬಂದನು. ದಕ್ಷಿಣಕ್ಕೆ ಬಂದಿದ್ದ ಸವಾಯಿ ಜಯಸಿಂಗನ ವಕೀಲ ದೀಪಸಿಂಗನು ಬಾಜೀರಾಯನ ಯೋಗ್ಯತೆಯನ್ನು ಹೀಗೆ ಬಣ್ಣಿಸಿದ್ದಾನೆ. " ವಚನಪಾಲನದಲ್ಲಿ ದಕ್ಷನಾದ, ಛತ್ರಪತಿಯ ಸಂಪೂರ್ಣ ವಿಶ್ವಾಸಕ್ಕೆ ಪಾತ್ರನಾದ, ಸೈನಿಕರ ಕಣ್ಮಣಿಯಾದ ದೊಡ್ಡ ದೊಡ್ಡ ಹೊಣೆಗಾರಿಕೆ ಗಳನ್ನು ಹೊರಬಲ್ಲ ಮರಾಠರ ಏಕಮೇವ ಧುರೀಣನೆಂದರೆ ಬಾಜೀರಾಯನೇ ಸರಿ. "

ಇದು ಬಾಜೀರಾಯನು ಸಾಧಿಸಿದ ಕಾರ್ಯದ ಒಮ್ಮೊತ್ತಯಾಯಿತು. ಆತನಲ್ಲಿ ಕೆಲವು ದೋಷಗಳೂ ಇದ್ದವು. ಈತನ ಆಳಿಕೆಯು ಹಿಡಿತದ್ದಲ್ಲವಾದ್ದರಿಂದ ಈತನು ಆಗಾಗ ಸಾಲಗಾರನಾಗಬೇಕಾಗಿ ಬಂದು ಸದಾ ಕಾಲ ಆರ್ಥಿಕ ಅಡಚಣೆಯಲ್ಲಿ ಇರುತ್ತಿದ್ದನು. ರಾಜ್ಯದ ಆರ್ಥಿಕ ಸ್ಥಿತಿಯು ಸುಧಾರಿಸಿ ಹಣದ ಕೊರತೆಯಾಗಬಾರ ದೆಂಬುದರ ಕಡೆಗೆ ಆತನ ಲಕ್ಷ್ಯವಿರುತ್ತಿರಲಿಲ್ಲ. ಶಿವಾಜಿಯ ಸೈನಿಕ ಕುಶಲತೆಯನ್ನು ಈತನು ಅರಗಿಸಿಕೊಂಡರೂ ಶಿವಾಜಿಯ ರಾಜ್ಯಸಂಘಟನೆಯ ಧೋರಣವನ್ನು ಅನುಸರಿಸಲಿಲ್ಲ.

**ಬಾಳಾಜಿ ಬಾಜೀರಾವ** ( ೧೭೪೦–೬೧ );— ಬಾಜೀರಾಯನ ಮಗನಾದ ಬಾಳಾಜಿ ಬಾಜೀರಾಯನು ಈ ಆರ್ಥಿಕ ದುಃಸ್ಥಿತಿಯನ್ನು ಸುಧಾರಿಸಲು ಹೆಣಗಿದನು. ಈ ಬಾಳಾಜಿ ಉರ್ಫ ನಾನಾಸಾಹೇಬನಲ್ಲಿ ತನ್ನ ಅಜ್ಜನಂತೆ ಸೇನಾಪತಿಯ ಹಾಗು ಮುತ್ಸದ್ದಿಯ ಗುಣಗಳು ಕಂಡುಬರುತ್ತಿದ್ದವು. ಈ ಪೇಶ್ವೆಯ ಆಡಳಿತದಲ್ಲಿಯೆ ಮರಾಠರ ರಾಜ್ಯವು ಅತ್ಯಂತ ವಿಸ್ತಾರವನ್ನು ಹೊಂದಿತು. ಮರಾಠರಿಗೆ ತಾವು ಹೊರಿಸಿಕೊಂಡ ಸಾಮ್ರಾಜ್ಯ ವಿಸ್ತಾರದ ಹೊಣೆಯನ್ನು ನಿರ್ವಹಿಸಲಿಕ್ಕಾಗದ್ದರಿಂದ ಮರಾಠಾ ಧುರೀಣರು ಅನೇಕ ಕಠಿಣ ಸಮಸ್ಯೆಗಳನ್ನು ಎದುರಿಸಬೇಕಾಯಿತು.

ತತ್ಪರಿಣಾಮವಾಗಿ ಪಾನಿಪತದ ಯುದ್ಧವು ಸಂಭವಿಸಿ ಮರಾಠರೂ ಮುಸಲ್ಮಾನರೂ ಕೂಡಿಯೆ ದುರ್ಬಲರಾದರು. ಆದ್ದರಿಂದ ಹಿಂದುಸ್ಥಾನದಲ್ಲಿ ತಮ್ಮ ರಾಜಕೀಯ ವರ್ಚಸ್ಸನ್ನು ಸ್ಥಾಪಿಸಲು ಇಂಗ್ಲಿಷರಿಗೆ ಮುಕ್ತದ್ವಾರವಾಯಿತು.

೧೭೬೧ ರಲ್ಲಿ ಪಾನಿಪತದಲ್ಲಿ ನಡೆದ ಯುದ್ಧವು ಈ ಪೇಶ್ವೆಯ ಆಳಿಕೆಯಲ್ಲಿಯ ಅತ್ಯಂತ ಮಹತ್ವದ ಘಟನೆಯಾಗಿದೆ. ಮಹಮ್ಮದಶಾಹಾ ಅಬ್ದಾಲಿಯಂಥ ಪರಕೀಯರ ಆಕ್ರಮಣದಿಂದ ಹಿಂದುಸ್ಥಾನವನ್ನು ಸಂರಕ್ಷಿಸುವದಕ್ಕಾಗಿ ಮರಾಠರ ಪ್ರಚಂಡ ಸೇನೆಯು ಉತ್ತರಕ್ಕೆ ಸಾಗಿಹೋಯಿತು. ಯಾಕಂದರೆ ಉತ್ತರ ಹಿಂದುಸ್ತಾನದ ರಕ್ಷಣೆಯ ಬಹು ದೊಡ್ಡ ಹೊಣೆಯನ್ನು ಮರಾಠರು ಹೊತ್ತಿದ್ದರು. (೧೭೫೨ ರ ಸನದಿನಂತೆ).

ಆದರೆ ಈ ಹೊಣೆಗಾರಿಕೆಯನ್ನು ನಿರ್ವಹಿಸುವ ಕಾರ್ಯದಲ್ಲಿ ರಘುನಾಥರಾಯನಿಗೆ ಯಶಸ್ಸು ದೊರೆಯಲಿಲ್ಲ. ಪಂಜಾಬದಲ್ಲಿ ಮರಾಠರ ಪ್ರಭುತ್ವವನ್ನು ಭದ್ರವಾಗಿ ಸ್ಥಾಪಿಸುವ ಯೋಜನೆಯನ್ನು ಈತನು ಮಾಡದ್ದರಿಂದ ಅಬ್ದಾಲಿಯು ನಿರಾಯಾಸದಿಂದ ಪಂಜಾಬವನ್ನು ದಾಟಿ ದಿಲ್ಲಿಯವರೆಗೆ ಬಂದನು. ನಜೀರಖಾನನ ಮೋಹಕ ವರ್ತನೆಗೆ ರಾಘೋಬಾ, ಶಿಂಧೆ ಮತ್ತು ಹೋಳಕರರು ಬಲಿಬಿದ್ದರು. ಈ ಮೂವರೂ ಉತ್ತರದಲ್ಲಿ ಸಾಕಷ್ಟು ಶೌರ್ಯಪ್ರದರ್ಶನ ಮಾಡಿದರೂ ಅಲ್ಲಿಯ ರಾಜಕಾರಣವನ್ನು ಮಾತ್ರ ಇವರು ಕೆಡಿಸಿಟ್ಟರು. ಶಿಂಧೆ, ಹೋಳಕರರು ರಜಪೂತರನ್ನು ಹಿಂಸಿಸಿದರು. ರಜಪೂತರ ಮೇಲೆ ನಡೆಸಿದ ದಾಳಿಯ ಕಾಲಕ್ಕೆ ಶಿಂಧೆ ಹೋಳಕರರಲ್ಲಿ ಉಂಟಾದ ಒಡಕು ಮತ್ತೆ ಎಂದಿಗೂ ಸರಿಹೋಗಲಿಲ್ಲ. ಅವರ ಮಂದ ಬುದ್ಧಿಯಿಂದ ಕೈಸೆರೆ ಸಿಕ್ಕ ನಜೀಬನು ಮುಕ್ತನಾದನು. ನಜೀಬನು ಶಿಂಧೆ ಹೋಳಕರರ ಕಣ್ಣಲ್ಲಿ ಮಣ್ಣೆರಚಿ ಮರಾಠರ ವಿರುದ್ಧ ದೊಡ್ಡ ವ್ಯೂಹವನ್ನು ರಚಿಸಿದನು.

ಉತ್ತರದ ರಾಜಕಾರಣವು ಹದಗೆಟ್ಟು ಕೈಮೀರಿ ಹೋದನಂತರ ಸದಾಶಿವರಾವ ಭಾವೂನನ್ನು ಅಲ್ಲಿಗೆ ಕಳಿಸಲಾಯಿತು. ಇವನ ಸಿಡುಕಿನ ಸ್ವಭಾವದಿಂದಾಗಿ ಜಾಟ, ರಜಪೂತರ ನಿಜವಾದ ಸಹಾಯವು ಮರಾಠರಿಗೆ ದೊರೆಯಲಿಲ್ಲ. ಅಬ್ದಾಲಿಯೊಡನೆ ನಡೆದ ಯುದ್ಧದಲ್ಲಿ ಸದಾಶಿವರಾಯನ ಸೇನಾನಾಯಕತ್ವವು ಕುಂಠಿತವಾಯ್ತು. ಹೋಳಕರರಂಥ ಆಧಾರಸ್ತಂಭಗಳಂತಿದ್ದ ಪೇಶ್ವೇಯ ಸರದಾರರು ವೈರಿಗಳ್ಳರಂತೆ ವರ್ತಿಸಿದರು. ಇದರಿಂದ ಪಾನಿಪತದ ಯುದ್ಧದಲ್ಲಿ ಮರಾಠರು ಸೋತರು. ಅವರ ಪ್ರತಿಷ್ಠೆಗೆ ವಜ್ರಾಘಾತವಾಯಿತು. ಈ ವಾರ್ತೆಯನ್ನು ಕೇಳಿ ಪೇಶ್ವೆಯು ಎದೆಯೊಡೆದುಕೊಂಡು ಸತ್ತನು. ಈ ಪೇಶ್ವೆಗೆ ಉತ್ತರದ ರಾಜಕಾರಣವು ಅವಗತವಾಗಲಿಲ್ಲವೆಂಬುದು ನಿಜ. ಆದರೆ ಇಷ್ಟರಿಂದ ಆತನ ಕರ್ತೃತ್ವಶಕ್ತಿಯು ಕಡಿಮೆ ತರಗತಿಯದೆಂದು ಹೇಳಲಿಕ್ಕಾಗದು. ಬಹುಶಃ ಈತನ ಯೋಗ್ಯತೆಯನ್ನು ಕಂಡುಕೊಂಡೇ ಶಾಹೂನು ಈತನಿಗೆ ಪೇಶ್ವೆಪದವನ್ನು ಪರಂಪರಾಗತವಾಗಿ ದಯಪಾಲಿಸಿದನು. ಈ ಸನ್ಮಾನಕ್ಕೆ ಅವನು ಅರ್ಹನೆನಿಸಿಕೊಂಡನು. ರಘುಜಿ ಭೋಸಲೆ, ಕಾನ್ಹೋಜಿ ಆಂಗ್ರೆಯಂಥ ಬಲಾಢ್ಯರಾದ ಸ್ವಕೀಯ ವಿರೋಧಿಗಳನ್ನು ಹತ್ತಿಕ್ಕಿ ಕೇಂದ್ರ ಆಡಳಿ-

ತದ ಹೊಣೆಯನ್ನು ಈತನು ಹೆಚ್ಚಿಸಿದನು. ಆಂಗ್ರೆ ಇವರನ್ನು ಮುರಿದಿಕ್ಕುವ ಕಾರ್ಯ-ದಲ್ಲಿ ಪೇಶ್ವೆಯು ಇಂಗ್ಲಿಷರಂಥ ಧೂರ್ತ ಪರಕೀಯರ ಸಹಾಯದಿಂದ ಮರಾಠರ ನೌಕಾಪಡೆಯ ಮೇಲೆ ದಾಳಿ ಮಾಡಿದ್ದನ್ನು ನೋಡಿ ಆಶ್ಚರ್ಯವೆನಿಸುತ್ತದೆ.



ಹಿರಿಯ ಮಾಧವರಾಯ

ನಿಜಾಮನನ್ನು ಸಂಪೂರ್ಣವಾಗಿ ಸೋಲಿಸುವಲ್ಲಿ ಸದಾಶಿವರಾವ ಭಾವೂನು ಯಶಸ್ವಿಯಾಗಿದ್ದನು. ನಾನಾಸಾಹೇಬ ಮತ್ತು ಭಾವೂ ಇವರಿಬ್ಬರೂ ರಾಜ ಕಾರಭಾರವನ್ನು ಸುವ್ಯವಸ್ಥಿತಗೊಳಿಸಿದರು. ಇವರಿಬ್ಬರೂ ಪ್ರಾರಂಭದಿಂದಲೇ ಉತ್ತರದ ರಾಜಕಾರಣದಲ್ಲಿ ಲಕ್ಷ್ಯಹಾಕಿದ್ದರೆ ಪಾನಿಪತದ ಅನಾಹುತವು ತಪ್ಪುತ್ತಿತ್ತು ಎಂದೆನಿಸದಿರದು.

**ಹಿರಿಯ ಮಾಧವರಾವ** (೧೭೬೧-೧೭೭೨):— ಪಾನಿಪತ ಯುದ್ಧದಲ್ಲಿ
ಮರಾಠರು ಸೋತರೂ ಮೂಲೆಗುಂಪಾಗಲಿಲ್ಲವೆಂಬುದನ್ನು ನಂತರದ ಪೇಶ್ವೆಯಾದ
ಹಿರಿಯ ಮಾಧವರಾಯನು ಅಲ್ಪಾವಧಿಯಲ್ಲಿಯೇ ತೋರಿಸಿಕೊಟ್ಟನು. ಪಾನಿಪತದ
ವಜ್ರಾಘಾತದಿಂದ ಮರಾಠರ ರಾಜ್ಯವು ಅಳಿದು ಹೋಗುವದೇನೋ ಎಂಬ ಭೀತಿ



ಪೇಶ್ವೆಯರ ನಾಣ್ಯ

ಯುಂಟಾಗಿತ್ತು. ಆದರೆ ಮಾಧವರಾಯನು ಕೇವಲ ಹನ್ನೊಂದು ವರ್ಷಗಳ ಕಾಲ
ದಲ್ಲಿ ಮತ್ತೆ ಎಲ್ಲವನ್ನೂ ಸಜ್ಜುಗೊಳಿಸಿ ಮರಾಠರ ರಾಜ್ಯಕ್ಕೆ ಕಳೆದುಹೋದ ವೈಭವ
ವನ್ನು ಸಂಪಾದಿಸಿಕೊಟ್ಟನು. ಈ ಕಾರ್ಯದಲ್ಲಿ ಆತನು ರಾಘೋಬನಂಥ ರಾಜ-
ದ್ರೋಹಿಗೆ, ಆಪ್ತನಾಗಿದ್ದರೂ, ಉಗ್ರ ಶಾಸನವನ್ನು ವಿಧಿಸದಿರಲಿಲ್ಲ. ಕಾನಡೆ,
ಬಿನಿವಾಲೆ, ಪಟವರ್ಧನ, ಮೇತೆ ಮುಂತಾದ ಹೊಸ ಉತ್ಸಾಹಿ ಸರದಾರರನ್ನು
ಪ್ರೋತ್ಸಾಹಿಸಿ ಅವರನ್ನು ಮುಂದೆ ತಂದನು. ಶಿಂಧೆ, ಹೋಳಕರರಂಥ ಹಿಂದಿನ
ಸರದಾರರನ್ನು ಕಾರ್ಯಪ್ರವೃತ್ತರನ್ನಾಗಿರಿಸಿದನು. ನಿಜಾಮ ಮತ್ತು ಹೈದರನನ್ನು
ಸೋಲಿಸಿ ದಕ್ಷಿಣದಲ್ಲಿ ಮರಾಠರ ವರ್ಚಸ್ಸನ್ನು ಪ್ರಸ್ಥಾಪಿಸಿದನು. ಉತ್ತರದಲ್ಲಿಯೂ
ಮರಾಠರ ಸೈನ್ಯಗಳು ವಿಶೇಷ ಪರಾಕ್ರಮವನ್ನು ತೋರಿದವು. ದಿಲ್ಲಿಯ ಪದಭ್ರಷ್ಟ
ಬಾದಶಹಾನಾದ ಶಾಹಾ ಆಲಂನನ್ನು ಮಹಾದಾಜಿ ಶಿಂಧೆಯು ಪುನಃ ದಿಲ್ಲಿಗೆ
ಕರೆದೊಯ್ದು ಪಟ್ಟಗಟ್ಟಿದನು (೧೭೭೨). ಶಾಹಾ ಆಲಮನು ಇದರಿಂದ ಸಂತುಷ್ಟ
ನಾಗಿ ಕರಾ ಮತ್ತು ಅಲಹಾಬಾದ ಪ್ರಾಂತಗಳನ್ನು ಮರಾಠರಿಗೆ ಸನದು ಹಾಕಿ
ಕೊಟ್ಟನು. ಇದರಿಂದ ಉತ್ತರ ಭಾರತದಲ್ಲಿಯ ಹಿಂದುಗಳ ಪವಿತ್ರ ತೀರ್ಥ ಕ್ಷೇತ್ರ
ಗಳೆಲ್ಲ ಮರಾಠರ ವಶಕ್ಕೆ ಬಂದವು. ಪಾನಿಪತದ ಯುದ್ಧದಲ್ಲಿ ಉಂಟಾದ ಪರಾ-
ಜಯದ ಕಲಂಕವು ತೊಳೆದು ಹೋದಂತಾಯಿತು. ಪಾನಿಪತ ಯುದ್ಧದ ನಂತರ
ಇಂಗ್ಲಿಷರು ಭಾರತದಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸಲು ಹವಣಿಸುತ್ತಿದ್ದರು.
ಇವರ ಈ ಹವಣಿಕೆಯನ್ನು ಮಾಧವರಾಯನು ಸಂಪೂರ್ಣವಾಗಿ ಅರಿತಿದ್ದನಾದ್ದ
ರಿಂದಲೇ ಆತನು ಇಂಗ್ಲಿಷರಿಗೆ ದಿಲ್ಲಿಯ ದರ್ಬಾರದಲ್ಲಿಯೂ ಮರಾಠರ ರಾಜ್ಯದಲ್ಲಿಯೂ
ಅವಕಾಶವನ್ನೀಯಲಿಲ್ಲ.

ಮಾಧವರಾಯನು ಕೇವಲ ರಾಜ್ಯವಿಸ್ತಾರದ ಕಡೆಗೆ ತನ್ನ ದೃಷ್ಟಿಯನ್ನು
ಇಟ್ಟಿದ್ದನೆಂದಲ್ಲ. ಸಕಲ ವಿಷಯಗಳ ಕಡೆಗೆ ಆತನ ಗಮನವಿರುತ್ತಿತ್ತು. ರಾಜ್ಯದ
ಆರ್ಥಿಕ ಸ್ಥಿತಿಯನ್ನು ಸುಧಾರಿಸಬೇಕು ಮತ್ತು ಪ್ರಜೆಗಳು ಸುಖದಿಂದಿರಬೇಕು ಎಂಬ

ಬಗೆಗೆ ಆತನು ಅತ್ಯಂತ ದಕ್ಷನಾಗಿದ್ದನು. ಅಂತೆಯೆ ಆತನು ಚೊಕ್ಕಾದ ಜಮಾಬಂದಿಯು ಹಾಗೂ ಉತ್ತಮ ನ್ಯಾಯದಾನದ ವ್ಯವಸ್ಥೆಯನ್ನು ಮಾಡಿದನು. ರೈತರ ಸ್ಥಿತಿಯನ್ನು ಸುಧಾರಿಸುವದರ ಕಡೆಗೆ ಲಕ್ಷ ಹಾಕಿದನು. ಆಡಳಿತದಲ್ಲಿಯ ಶೈಥಿಲ್ಯವನ್ನು ಕಿತ್ತಿ ಹಾಕಿದನು. ಸತಿ ಮುಂತಾದ ದುಷ್ಟ ಪದ್ಧತಿಗಳನ್ನು ನಿಲ್ಲಿಸಿಬಿಟ್ಟನು. ತೋಫುಗಳನ್ನು, ಮದ್ದು ಗುಂಡುಗಳನ್ನು, ತಯಾರಿಸುವ ಕಾರಖಾನೆಗಳನ್ನು ಸ್ಥಾಪಿಸಿದನು. ಇಂಥ ಕರ್ತೃತ್ವಶಾಲಿ ಪೇಶ್ವೆಯು ಅಲ್ಪಾಯುಷಿಯಾಗಿರಬೇಕೆಂದರೆ ಮರಾಠರ ರಾಜ್ಯದ ದುರ್ಭಾಗ್ಯವೆಂಥದು! ಪಾಣಿಪತದ ಪರಾಜಯಕ್ಕಿಂತ ಮಾಧವರಾಯನ ಅಕಾಲಮೃತ್ಯುವೇ ಮರಾಠರ ರಾಜ್ಯಕ್ಕೊದಗಿದ ಪ್ರಬಲ ಪೆಟ್ಟೆನ್ನಬಹುದು

**ಏರಿಕೆಯ ಕಾಲ:—** ಮಾಧವರಾಯನ ಅಕಾಲನಿಧನದಿಂದ ಮರಾಠರ ರಾಜ್ಯದ ಅವನತಿಯಾಗಹತ್ತಿತೆಂದು ಭಾವಿಸುವದು ಸರಿಯಾಗಲಾರದು. ಮಾಧವ-ರಾಯನ ನಂತರದ ಕಾಲದಲ್ಲಿ ಮಹಾದಾಜಿ ಶಿಂಧೆಯಂಥ ಧೋರಣೆಯಾದ ಸೇನಾಪತಿ ಮತ್ತು ನಾನಾ ಫಡಣೀಸನಂಥ ಉತ್ತಮ ಮುತ್ಸದ್ದಿ ಇವರಿಬ್ಬರೂ ಒಂದಾಗಿ ಅನೇಕ ಸಂಕಟಗಳನ್ನು ಎದುರಿಸಿ ರಾಜ್ಯದ ಉತ್ಕರ್ಷವನ್ನು ಸಾಧಿಸಿದರು. ಮಹಾದಾಜಿಯು ೧೭೯೪ರಲ್ಲಿ ಮಡಿದನು. ನಾನಾನು ೧೮೦೦ರಲ್ಲಿ ಕಾಲವಶನಾದನು. ಮತ್ತು ಎರಡನೇ ಬಾಜೀರಾಯನು ೧೮೦೨ರಲ್ಲಿ ವಸಯಿಯಲ್ಲಿ ಇಂಗ್ಲಿಷರೊಡನೆ ಒಡಂಬಡಿಕೆಯನ್ನು ಮಾಡಿಕೊಂಡು ಮರಾಠರ ಸಾಮ್ರಾಜ್ಯದ ಸ್ವಾತಂತ್ರ್ಯ ಸೌಭಾಗ್ಯದ ತಿಲಕವನ್ನು ಅಳಿಸಿಬಿಟ್ಟನು. ಮರಾಠರ ಸಾಮ್ರಾಜ್ಯದ ಹ್ರಾಸವು ಇಲ್ಲಿಂದ ಪ್ರಾರಂಭವಾಗಿ ೧೮೧೮ರಲ್ಲಿ ಅದು ಅಸ್ತವಾಯಿತು.

ಒಟ್ಟನಮೇಲೆ ೧೭೭೨ ರಿಂದ ೧೮೦೦ರ ವರೆಗಿನ ಕಾಲದಲ್ಲಿ ಮರಾಠರ ಅಧಿಕಾರವು ಹಿಮ್ಮೆಟ್ಟಲಿಲ್ಲ. ಇಷ್ಟೇ ಅಲ್ಲ, ಇನ್ನೂ ಒಂದು ಹೆಜ್ಜೆಯನ್ನು ಮುಂದೆ ಇಟ್ಟಿತು. ನಾನಾ ಹಾಗೂ ಮಹಾದಾಜಿಯವರು ಈ ಮುನ್ನಡೆಯನ್ನು ಹೇಗೆ ಸಾಧಿಸಿದರೆಂಬುದನ್ನು ಸ್ವಲ್ಪದರಲ್ಲಿ ನೋಡೋಣ.

ಮಾಧವರಾಯನ ನಂತರ ಪೇಶ್ವೆ ಮನೆತನದಲ್ಲಿ ಗೃಹಕಲಹವು ಪ್ರಾರಂಭವಾಗಿ ನಾರಾಯಣರಾಯನೇ ಅದಕ್ಕೆ ಮೊದಲನೇ ಬಲಿಯಾಗಬೇಕಾಯಿತು. ರಾಷ್ಟ್ರ-ದ್ರೋಹಿಯಾದ ರಾಘೋಬನು ಇಂಗ್ಲಿಷರ ಸಹಾಯವನ್ನು ಪಡೆದುಕೊಂಡು ಪೇಶ್ವೆ ಪದವನ್ನು ತಾನೇ ಗೆದ್ದುಕೊಳ್ಳಬೇಕೆಂದು ಕಾರಸ್ಥಾನ ನಡೆಸಿದನು. ಆದರೆ ನಾನಾ ಫಡಣೀಸ, ಮಹಾದಾಜಿ ಶಿಂಧೆ ಮುಂತಾದ 'ಬಾರಭಾಯಿ' ಮುತ್ಸದ್ದಿ ಮಂಡಳವು ಆ ಕಾರಸ್ಥಾನವನ್ನು ಮುರಿದು ಹಾಕಿತು. ರಾಘೋಬನಿಗೆ ಪೇಶ್ವೆ ಪದವು ದೊರೆಯಲಿಲ್ಲವಷ್ಟೇ ಅಲ್ಲ; ಸಾಷ್ಟಿ, ವಸಯಿಗಳಂಥ ಮಹತ್ವದ ಸ್ಥಳಗಳು ಶಾಶ್ವತವಾಗಿ ಇಂಗ್ಲಿಷರ ಕೈಸೇರಿದವು. ಇಂಗ್ಲಿಷರ ಕುಟಿಲ ಕಾರಸ್ಥಾನದ ಮೇಲೆ ಸೂಕ್ಷ್ಮದೃಷ್ಟಿಯನ್ನಿಟ್ಟು ಮರಾಠರ ರಾಜ್ಯದಲ್ಲಿ ಅವರ ಹೆಜ್ಜೆ ಬೀಳದಂತೆ ದಕ್ಷತೆ ವಹಿಸಿದ ನಾನಾನ ದೂರದೃಷ್ಟಿಯು ಪ್ರಶಂಸನೀಯವಾಗಿದೆ. ರಾಘೋಬಾ, ಮೋರೋಬಾ, ಭಾವೂಸಾಹೇಬರೆಂಬ ಮನೆಯಲ್ಲಿಯ ಕಂಟಕಗಳನ್ನು ನಾನಾನು ನಿವಾರಿಸಿದನು.



ಪೇಶವೇಯ ದರಬಾರ

ಸವಾಯಿ ಮಾಧವರಾಯನಿಗೆ ಪೇಶ್ವೆಪಟ್ಟಗಟ್ಟಿ ತಾನು ಆತನ ಪಾಲಕ ಮತ್ತು ಕಾರ-ಭಾರಿ ಎಂಬ ರೀತಿಯಿಂದ ತನ್ನ ಹೊಣೆಗಾರಿಕೆಯನ್ನು ಯಶಸ್ವಿಯಾಗಿ ನಿರ್ವಹಿಸಿದನು. (ಬೈರಾಮಖಾನನು ಅಕಬರನ ವಿಷಯದಲ್ಲಿ ಇದೇ ರೀತಿ ಆಚರಿಸಿದ್ದನು). ನಾನಾನು ಪೇಶ್ವೆ ದಪ್ತರದಲ್ಲಿ ವಿಶೇಷ ಸುಧಾರಣೆಯನ್ನು ಮಾಡಿದನು. ಜಮಾಬಂದಿ ಲೆಕ್ಕ ಪತ್ರಗಳನ್ನು ಚೊಕ್ಕಾಗಿಡಲು ಪ್ರಯತ್ನಿಸಿದನು. ದಕ್ಷಿಣದಲ್ಲಿಯ ನಿಜಾಮ, ಟಿಪ್ಪೂ ಮುಂತಾದ ಶತ್ರುಗಳನ್ನು ಅಂಕಿತದಲ್ಲಿಟ್ಟುಕೊಂಡನು. ಒಮ್ಮೊಮ್ಮೆ ಫ್ರೆಂಚರಿಗೆ ಆಶ್ರಯವಿತ್ತು ಇಂಗ್ಲಿಷರ ಮೇಲೆ ದರ್ಪವನ್ನು ಬೀರಿದನು.

ನಾನಾನ ಮುತ್ಸದ್ದಿತನಕ್ಕೆ ಮಹಾದಾಜಿಯ ಶೌರ್ಯದ ಜೋಡು ದೊರೆತದ್ದ-ರಿಂದ ಪುನಃ ಮರಾಠರ ರಾಜ್ಯದ ಭಾಗ್ಯೋತ್ಕರ್ಷವಾಯಿತು. ರಾಘೋಬನ ಪತನ-(೧೭೭೫), ಖರ್ಡೆ ಕಾಳಗದಲ್ಲಿ ನಿಜಾಮನ ವಿರುದ್ಧ ಪ್ರಚಂಡ ವಿಜಯ (೧೭೯೫), ಇಂಗ್ಲಿಷರೊಡನೆ ನಡೆಸಿದ ಎರಡನೇ ಯುದ್ಧ (೧೭೮೨), ಈ ಪ್ರಸಂಗಗಳಲ್ಲಿ ನಾನಾ ಮತ್ತು ಮಹಾದಾಜಿಯವರು ಎಷ್ಟೊಂದು ಐಕ್ಯದಿಂದ ವರ್ತಿಸಿದರೆಂಬುದು ಗಮ-ನಾರ್ಹವಾದ ಸಂಗತಿಯಾಗಿದೆ. ಮರಾಠರ ರಾಜ್ಯದ ಸಂರಕ್ಷಣೆಯ ಹೊಣೆಯು ತಮ್ಮ ಮೇಲಿನದೆಂದು ಇವರಿಬ್ಬರೂ ಚನ್ನಾಗಿ ಅರಿತಿದ್ದರು. ಮಹಾದಾಜಿಯು ಉತ್ತರದ ಮೇಲೆ ನಡೆಸಿದ ದಾಳಿಯಲ್ಲಿ ಲಾಲಸೋಟ ಎಂಬಲ್ಲಿ ಆತನಿಗೆ ಸೋಲಾಗಲು (೧೭೮೭) ಆತನು ನಾನಾಜಿಗೆ ಬರೆದ ಪತ್ರವು ಬಹು ಹೃದಯಸ್ಪರ್ಶಿಯಾಗಿದೆ. "ನಾವಿಬ್ಬರೂ ಒಬ್ಬ ಒಡೆಯನ ಸೇವಕರು. ಏಕಧ್ಯೇಯ ಸಾಧನೆಗಾಗಿ ನಾವು ಒಕ್ಕಟ್ಟಿನಿಂದ ಪ್ರಯತ್ನಿಸೋಣ. ಹಿಂದುಸ್ಥಾನದಲ್ಲಿ ಮರಾಠರ ರಾಜ್ಯದ ಉತ್ಕರ್ಷವಾಗಲಿಕ್ಕೆಬೇಕು. ಆದ್ದರಿಂದ ನಮ್ಮ ಸಾಮ್ರಾಜ್ಯದಲ್ಲಿ ಒಡಕಿಗೆ ಎಳ್ಳಷ್ಟು ಅವಕಾಶವೀಯಬಾರದು." ಈ ಪ್ರಸಂಗದಲ್ಲಿ ನಾನಾನು ಮಹಾದಾಜಿಗೆ ಸಹಾಯವನ್ನು ಕಳಿಸಿ ಮಹಾದಾಜಿಯ ಬೆನ್ನುತಟ್ಟಿ ಆತನಿಗೆ ಧೈರ್ಯವಿತ್ತು ಬರೆದ ಪತ್ರವಿಂತಿದೆ– "ನಾವು ಒಕ್ಕಟ್ಟಿನಿಂದ, ಅಹಮಹಮಿಕೆಯಿಂದ ನಡೆದುಕೊಳ್ಳುತ್ತಿರುವವರೆಗೆ ದಿಲ್ಲಿಯಲ್ಲಿ ಶತ್ರುಗಳ ವರ್ಚಸ್ಸು ಬೀಳುವದು ಅಶಕ್ಯವಿದೆ" ಎಂದು ಬರೆದಿದ್ದಾನೆ. ಅವರಿಬ್ಬರಲ್ಲಿ ವೈಯಕ್ತಿಕವಾದ ಅಲ್ಪ ಸ್ವಲ್ಪ ಮತಭೇದವು ಇದ್ದರೂ, ಯಾವಾಗಾದರೊಮ್ಮೆ ಮತ್ಸರಬುದ್ಧಿ-ಯುಂಟಾದರೂ, ರಾಷ್ಟ್ರಕಲ್ಯಾಣದ ಕಾರ್ಯದಲ್ಲಿ ಅವರು ಒಮ್ಮತದಿಂದ, ಐಕ್ಯದಿಂದ ನಡೆದುಕೊಂಡು ಬಂದರೆಂದೇ ಅವರ ಜೀವಾವಧಿಯಲ್ಲಿ ಮರಾಠರ ರಾಜ್ಯವು ಅನೇಕ ಸಂಕಟಗಳನ್ನೆದುರಿಸಬೇಕಾದರೂ ತನ್ನ ಶ್ರೇಷ್ಠ ಸ್ಥಾನವನ್ನು ಉಳಿಸಿಕೊಂಡಿತು. ಸ. ೧೭೮೯ ರಲ್ಲಿ ಮಹಾದಾಜಿಯು ಮೊಗಲ ಬಾದಶಾಹಾನನ್ನು ಪುನಃ ದಿಲ್ಲಿಯ ಸಿಂಹಾಸನವನ್ನೇರಿಸಿ ಮರಾಠಾ ದರ್ಪವನ್ನು ಮತ್ತೆ ಮೆರೆಸಿದನು ಬಾದಶಾಹಾನಿಂದ ಗೋವಧೆಪ್ರತಿಬಂಧಕಾಜ್ಞೆಯನ್ನು ಹೊರಡಿಸಿದ್ದಲ್ಲದೆ ಪೇಶ್ವೆಯು ಸಲುವಾಗಿ ವಕೀಲ ಇ-ಮುಲ್ಕ ಪದದ ವಸ್ತ್ರಗಳನ್ನೂ ತನಗಾಗಿ ನಾಯಬಗಿರಿಯ ಅಧಿಕಾರವನ್ನೂ ಸಂಪಾದಿಸಿದನು. ಮಹಾದಾಜಿಯು ೧೭೯೨ ರಲ್ಲಿ ಸ್ವತಃ ಪುಣೆಕ್ಕೆ ಬಂದು ದೊಡ್ಡದೊಂದು ಸಮಾರಂಭವನ್ನು ನಡೆಸಿ ಮುಲ್ಕಿ ಪದದ ವಸ್ತ್ರಗಳನ್ನು ಪೇಶ್ವೆಗೆ ಒಪ್ಪಿಸಿದನು. ಆಗ

ಸಾನಾ ಮತ್ತು ಮಹಾದಾಜಿ ಇವರಲ್ಲಿ ಸಂಧಾನವಾಯಿತು. ಮಹಾದಾಜಿಯು, ಆದ ರಂತೆಯೆ ಮರಾಠಾ ರಾಜ್ಯದ, ಭಾಗ್ಯವಿಶೇಷವಿದು. ಆದರೆ ದುರ್ದೈವದಿಂದ ಇದಾದ ನಂತರ ಎರಡೇ ವರ್ಷಗಳಲ್ಲಿ ಮಹಾದಾಜಿಯು ನಿಧನ ಹೊಂದಿದನು. ಆದರ ಮರು ವರ್ಷ ಸವಾಯಿ ಮಾಧವರಾಯನು ಕಾಲವಶನಾದ್ದರಿಂದ ಪೇಶ್ವೆಪದಕ್ಕಾಗಿ ಒಳ ಜಗಳವು ಪ್ರಾರಂಭವಾಯಿತು. ಆದರೂ ನಾನಾನು ಜೀವಿಸಿರುವ ವರೆಗೆ ಮರಾಠರ ರಾಜ್ಯದ ಪ್ರತಿಷ್ಠೆಯು ಉಳಿಯಿತು. "ನಾನಾನ ಕೂಡ ಮರಾಠಾ ರಾಜ್ಯದ ಬುದ್ಧಿ ವಂತಿಕೆಯೂ ಲಯಹೊಂದಿತು" ಎಂದು ಇಂಗ್ಲಿಷ ವಕೀಲ ಪಾಮರನು ಹೇಳಿದಂತೆ ನಾನಾನ ಮೃತ್ಯುವಿನ (೧೮೦೦) ನಂತರದ ಪರಿಸ್ಥಿತಿಯಾಯಿತು!

**ಅಧಃಪಾತ :**—ಆನಂತರ ಬಹಳ ಭರದಿಂದ ಅಂದರೆ ಹದಿನಾರೇ ವರ್ಷಗಳಲ್ಲಿ (೧೮೦೨-೧೮) ಮರಾಠರ ಅಧಃಪಾತವಾಯಿತು. ಎರಡನೇ ಬಾಜೀರಾಯನು (೧೮೦೨ರಲ್ಲಿ) ವಸಯಿಯಲ್ಲಿ ಬ್ರಿಟಿಶರೊಡನೆ ಒಪ್ಪಂದ ಮಾಡಿಕೊಂಡು ಪೇಶ್ವೆಪದ ವನ್ನು ದೊರಕಿಸಿಕೊಂಡರೂ ಆತನು ಒಮ್ಮೆ ಕಳೆದುಕೊಂಡ ಸ್ವಾತಂತ್ರ್ಯವನ್ನು ಪುನಃ ಪಡೆಯಲಿಲ್ಲ. ವಸಯಿ ಒಪ್ಪಂದದಿಂದ ಮರಾಠರ ಪ್ರಮುಖ ಪೇಶ್ವೆಯು ಇಂಗ್ಲಿಷರ ಮಾಂಡಲಿಕನಾದ್ದರಿಂದ ಎಲ್ಲ ಮರಾಠಾ ಸರದಾರರು ಇಂಗ್ಲಿಷರ ಮಾಂಡಲಿಕರಾದರು ಎಂಬ ಆಟವನ್ನು ಇಂಗ್ಲಿಷರು ಹೂಡಿದರು. ಇದನ್ನು ಪ್ರತಿಭಟಿಸುವದಕ್ಕೆ ಶಿಂಧೆ, ಹೋಳಕರ, ಭೋಸಲೆ ಮುಂತಾದ ಪ್ರಬಲ ಮರಾಠಾ ಸರದಾರರು ಕೆಲ ಕಾಲ ತಮ್ಮದೊಂದು ಸಂಘ (ಇಂಗ್ಲಿಷದಲ್ಲಿ ಇದಕ್ಕೆ "ಮರಾಠಾ ಕಾನ್‌ಫೆಡರಸಿ" ಎನ್ನುತ್ತಾರೆ) ವನ್ನು ಸ್ಥಾಪಿಸಿಕೊಂಡರು. ಆದರೆ ಈ ಮರಾಠಾ ಸಂಘದಲ್ಲಿ ನೇತೃತ್ವವಿದ್ದಿಲ್ಲ, ನಿಜವಾದ ಒಕ್ಕಟ್ಟೂ ಇದ್ದಿಲ್ಲ; ಆದ್ದರಿಂದ ಇಂಗ್ಲಿಷರು ಅವರಲ್ಲಿ ಒಡಕು ಹುಟ್ಟಿಸಿ ಒಬ್ಬೊಬ್ಬರನ್ನೇ ಸುಲಭವಾಗಿ ಮುರಿದು ಹಾಕಿದರು. ಹೀಗೆ ಮರಾಠಾ ಮಂಡಳವು ಉಧ್ವಸ್ತವಾದ ನಂತರ ಮುಂದೆ ಕೊನೆಯ ಯುದ್ಧದಲ್ಲಿ ಇಂಗ್ಲಿಷರು ಪೇಶ್ವೆಯನ್ನು ಸೋಲಿಸಿದ್ದೇನೂ ಆಶ್ಚರ್ಯದ ಸಂಗತಿಯಲ್ಲ (೧೮೧೭-೧೮).

೧೮೧೮ ರಲ್ಲಿ ಪೇಶ್ವೆಪದವು ನಿರ್ನಾಮವಾಗಿ ಭಾರತದ ಕ್ಷಿತಿಜದ ಮೇಲೆ ಇಂಗ್ಲಿಷರ ರಾಜ್ಯಸೂರ್ಯನು ಪ್ರಖರವಾಗಿ ವಿರಾಜಿಸಹತ್ತಿದನು.

**ಹ್ರಾಸದ ಕಾರಣ :**—ಮರಾಠರ ರಾಜ್ಯದ ಇತಿಹಾಸವನ್ನು ಹಕ್ಕಿನೋಟ ದಿಂದ ನೋಡಿದ ನಂತರ ಮರಾಠರ ಈ ಬಲಾಢ್ಯ ರಾಜ್ಯವು ಹೇಗೆ ಅಧಃಪಾತ ಹೊಂದಿತು ಎಂಬ ಪ್ರಶ್ನೆಯು ಮನಸ್ಸಿನಲ್ಲಿ ಹುಟ್ಟುವದು ಸ್ವಾಭಾವಿಕ. ಈ ರಾಜ್ಯದ ಅವನತಿಗೆ ಕೆಲವೊಂದು ಮೂಲಭೂತ ಕಾರಣಗಳಿವೆ. ಸ್ವರಾಜ್ಯ ಸ್ಥಾಪನೆ ಹಾಗೂ ಮಹಾರಾಷ್ಟ್ರ ಧರ್ಮದ ರಕ್ಷಣೆ ಈ ಉಚ್ಚ ಧ್ಯೇಯಗಳಿಂದ ಶಿವಾಜಿಯು ಮರಾಠರನ್ನು ಕಾರ್ಯಪ್ರವೃತ್ತರನ್ನಾಗಿಸಿದನು. ಈ ಧ್ಯೇಯವಾದವು ಜೀವಂತವಿದ್ದಷ್ಟು ದಿನ ಮರಾಠರಲ್ಲಿಯ ಶಕ್ತಿಯೂ ಒಕ್ಕಟ್ಟೂ ಉಳಿದುಕೊಂಡು ಬಂದವು. ಪೇಶ್ವೆಯರ ಕಾಲದಲ್ಲಿ ಮರಾಠರು ಆಕ್ರಮಕ ಧೋರಣವನ್ನು ಅಂಗೀಕರಿಸಿ ರಜಪೂತ ಜಾಟ ಮುಂತಾದ ಸ್ವಕೀಯರನ್ನು ಹಿಂಸಿಸಿದರು. ಇವರ ಸೈನ್ಯದಲ್ಲಿ ಪಠಾಣ, ಪೆಂಡಾರಿ,

ಯುರೋಪಿಯನ್ ಮುಂತಾದವರು ಬಂದು ನೌಕರಿಗೆ ಸೇರಿಕೊಂಡಿದ್ದರಿಂದ ಈ ಸೈನ್ಯದ ಮೊದಲಿನ ಮರಾಠಾ ವೃತ್ತಿಯು ನಷ್ಟವಾಯಿತು. ವಂಶಪರಂಪರವಾಗಿ ಜಹಾಗೀರುಗಳನ್ನು ಹಾಕಿಕೊಡಬಾರದೆಂದು ಶಿವಾಜಿಯು ನಿರ್ದೇಶಿಸಿದ ತತ್ವವನ್ನು ವಿಶೇಷತಃ ಬಾಳಾಜಿ ವಿಶ್ವನಾಥನ ಕಾಲದಿಂದ ಬಿಟ್ಟುಕೊಡಲಾಯಿತು. ನಾಗಪೂರ ಇಂದೂರ, ಗ್ವಾಲೇರ, ಬಡೋದೆ ಮುಂತಾದ ಸ್ಥಳಗಳಲ್ಲಿ ಸರಂಜಾಮಿ ಪದ್ಧತಿಯ ರಾಜ್ಯಗಳು ಹುಟ್ಟಿಕೊಂಡು ಇವು ಸ್ವಾರ್ಥಬುದ್ಧಿಯಿಂದ ಕೇಂದ್ರದೊಡನೆ ಸಿಡಿಮಿಡಿ-ಯಿಂದ ನಡೆದುಕೊಳ್ಳಹತ್ತಿದವು. ಆದ್ದರಿಂದ ಮೊದಲಿನ ಭದ್ರವಾದ ಐಕ್ಯವು ನಷ್ಟವಾಗಿ ಮಧ್ಯವರ್ತಿ ಆಡಳಿತವು ದುರ್ಬಲವಾಯಿತು.

ಮರಾಠರ ರಾಜ್ಯದ ಹ್ರಾಸದ ಈ ಕೆಳಗಿನ ಕಾರಣಗಳು ಉಲ್ಲೇಖನೀಯವಾಗಿವೆ. ಉತ್ತರ ಭಾರತದಲ್ಲಿ ಶಾಂತತೆಯನ್ನು ರಕ್ಷಿಸುವ ತಮ್ಮ ಆಳವು ಮೀರಿದ ಹೊಣೆಗಾರಿಕೆಯನ್ನು ಮರಾಠಾ ರಾಜ್ಯದ ಧುರೀಣರು ಹೊತ್ತುಕೊಂಡದ್ದೊಂದು ಅವಿಚಾರವೇ ಆಯಿತು. ಇಂಗ್ಲಿಷರು, ನಿಜಾಮು, ಸಿದ್ದಿ ಮುಂತಾದ ಸಮೀಪದ ಶತ್ರುಗಳನ್ನು ನಿರ್ಮೂಲ ಮಾಡದೆ ಉತ್ತರದ ಕಡೆಗೆ ಸಕಲ ಲಕ್ಷ್ಯವನ್ನು ಕೇಂದ್ರೀಕರಿಸಿದ್ದು ಅಪೂರ ದೃಷ್ಟಿಯಾಯಿತು. ದೊಡ್ಡ ದೊಡ್ಡ ದಾಳಿಗಳನ್ನು ನಡೆಸುವಷ್ಟು ಆರ್ಥಿಕ ಬಲವು ಮರಾಠರ ರಾಜ್ಯದಲ್ಲಿದ್ದಿಲ್ಲ. ಆದ್ದರಿಂದ ರಾಜ್ಯಕ್ಕೆ ಸಾಲವಾಗಿ ರಾಜ್ಯ-ಕರ್ತರು ಆರ್ಥಿಕ ವಿವಂಚನೆಗೆ ಗುರಿಯಾದರು. ಮರಾಠರು ಹಣದ ಸಲುವಾಗಿಯೆ ಸ್ವಕೀಯರಾದ ರಜಪೂತ, ಜಾಟರನ್ನು ನೋಯಿಸಿದರು. ತಮ್ಮ ಸೈನ್ಯದಲ್ಲಿ ನಾನಾ ಜಾತಿಯ ಹಾಗೂ ಕೂಲಿವೃತ್ತಿಯ ಜನರನ್ನು ಸೇರಿಸಿಕೊಂಡು ಸೈನ್ಯವೃಷ್ಟಿಯಿಂದಲೂ ತಪ್ಪು ಮಾಡಿದರು. ತೋಫಖಾನೆಗಳಂಥ ಮಹತ್ವದ ವಿಷಯಗಳಲ್ಲಿ ಇವರು ಪರಕೀಯರನ್ನು ಅವಲಂಬಿಸಿದರು. ಮರಾಠರು ಯುರೋಪಿಯನ್‌ರ ಪರಿಚಯ ಮಾಡಿಕೊಂಡರೂ ಯುರೋಪದ ಶಾಸ್ತ್ರೀಯ ಪ್ರಗತಿಯ ಪರಿಚಯವನ್ನು ಪಡೆಯಲಿಲ್ಲ. ಸುಧಾರಿಸಿದ ಯುದ್ಧಪದ್ಧತಿಯನ್ನು ( ರಣಜಿತಸಿಂಗನಂತೆ ) ಕಲಿತು ಕೊಳ್ಳುವ ಪ್ರಯತ್ನವನ್ನು ಮಾಡಲಿಲ್ಲ. ಫ್ರೆಂಚ ಅಧಿಕಾರಿಗಳು ಇಂಗ್ಲಿಷರ ವಿರುದ್ಧ ಯುದ್ಧ ಮಾಡಲು ಒಪ್ಪದೆ ದೌಲತರಾವ ಶಿಂಧೆಯ ಪರಾಭವಕ್ಕೆ ಅದೆಂತು ಕಾರಣ ರಾದರೆಂಬುದು ಪ್ರಸಿದ್ಧವಿದೆ. ಮಾನವನದೇ ಆಗಲಿ, ರಾಷ್ಟ್ರದ್ದೇ ಆಗಲಿ ಕಾಲಗತಿ-ಯೊಮ್ಮೆ ಬದಲಿಸಿತೆಂದರೆ ವಿಪರೀತ ಸಂಗತಿಗಳೇ ಸಂಭವಿಸುತ್ತ ಹೋಗುತ್ತವೆ. ಹಿರಿಯ ಮಾಧವರಾಯನು ತನ್ನ ವಯಸ್ಸಿನ ೨೮ನೇ ವರ್ಷದಲ್ಲಿಯೇ ನಿಧನಹೊಂದ ಬೇಕೆನ್ನುವದು ಎಂಥ ದುರ್ದೈವದ ಸಂಗತಿ! ದುರ್ದೈವ ಚಕ್ರವು ಉತ್ತರೋತ್ತರ ಭರದಿಂದ ತಿರುಗಹತ್ತಿತು. ಮರಾಠಾ ರಾಜ್ಯದ ಆಧಾರ ಸ್ತಂಭಗಳು ಒಂದರ-ಹಿಂದೊಂದು ಕುಸಿದುಬಿದ್ದವು. ರಾಮಶಾಸ್ತ್ರಿ ಪ್ರಭುಣೆ (೧೭೮೯), ಮಹಾದಾಜಿ ಶಿಂದೆ, ಮತ್ತು ಹರಿಪಂತ ಫಡಕೆ (೧೭೯೪), ಅಹಲ್ಯಾಬಾಯಿ ಹೋಳಕರ (೧೭೯೫) ಸವಾಯಿ ಮಾಧವರಾವ (೧೭೯೫), ತುಕೋಜಿ ಹೋಳಕರ (೧೭೯೫), ಪರಶುರಾಮ ಭಾವೂ ಪಟವರ್ಧನ (೧೭೯೯) ಮತ್ತು ಕೊನೆಗೆ ನಾನಾಫಡಣೀಸ (೧೮೦೦),

ಹೀಗೆ ಅಣಿಮುತ್ತುಗಳಂತಿದ್ದ ಈ ಜನರು ಅಲ್ಪಾವಧಿಯಲ್ಲಿ ನಿಧನಹೊಂದಿದರು.

ಮರಾಠರ ರಾಜ್ಯದ ಅವನತಿಯ ಬಗ್ಗೆ ಇಂಗ್ಲಿಷ ಇತಿಹಾಸಕಾರನೊಬ್ಬನು ಮಾಡಿದ ವಿಮರ್ಶೆಯು ಬಹು ಮಾರ್ಮಿಕವಾಗಿದೆ. "ಮರಾಠರ ಶಕ್ತಿಯು ಕೇವಲ ಅಂತಃಕಲಹದಿಂದ ಕ್ಷೀಣವಾಗಲು, ಒಬ್ಬರನ್ನೊಬ್ಬರು ವಿರೋಧಿಸುವ ಅವರ ಒಡಕಿನ ಪ್ರವೃತ್ತಿಯ ಲಾಭವನ್ನು ಹಿಂದುಸ್ಥಾನದಲ್ಲಿಯ ಇತರ ಅರಸರು ಉಪಯೋಗಿಸಿ ಕೊಂಡರು".

ರಾಷ್ಟ್ರೀಯ ವೃತ್ತಿ ಹಾಗೂ ಒಕ್ಕಟ್ಟು ಇವು ಮರಾಠರಲ್ಲಿ ಇಲ್ಲದಂತಾದ ಕೂಡಲೇ ಅವರ ರಾಜ್ಯವು ಅಧಃಪಾತ ಹೊಂದಿತು ಎಂಬುದನ್ನು ನಾವು ಸದೈವ ಲಕ್ಷದಲ್ಲಿಡಬೇಕು.

**ಮರಾಠರ ಮಹತ್ವ; ಧರ್ಮರಕ್ಷಣ :—** ಶಿವಾಜಿಯು ೧೬೭೪ ರಲ್ಲಿ ವಿಧಿ ಪೂರ್ವಕ ರಾಜ್ಯಾಭಿಷೇಕವನ್ನು ಮಾಡಿಸಿಕೊಂಡು ಹಿಂದೂ ಧರ್ಮ ರಕ್ಷಣೆಗಾಗಿ ಛತ್ರ ಪತಿ ಪದವನ್ನು ಸ್ವೀಕರಿಸಿದ್ದನು. ಭಾರತದ ಇತಿಹಾಸದಲ್ಲಿ ಈ ಘಟನೆಯು ಮಹತ್ವ ಪೂರ್ಣವಾಗಿದೆ. ಇದಕ್ಕೆ ಮುಂಚೆ ವಿಜಯನಗರದ ಅರಸರು ಅಖಂಡವಾಗಿ ೧೫೦ ವರ್ಷ ಕಾಲ ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ಸಂರಕ್ಷಿಸಿ ತಮ್ಮ ಅವತಾರ ಕಾರ್ಯವನ್ನು ಸಮಾಪ್ತಿಗೊಳಿಸಿದ್ದರು. ವಿಜಯನಗರದ ಅರಸರ ನಂತರ ಮರಾಠರು ಈ ಹೊಣೆಯನ್ನು ಹೊತ್ತುಕೊಂಡರು ವಿಜಯನಗರದವರ ಕಾರ್ಯವು ಕೇವಲ ದಕ್ಷಿಣದ ಮಟ್ಟಿಗೆ ಮರ್ಯಾದಿತವಾಗಿದ್ದಿತು. ಆದರೆ ಮರಾಠರು ಸ್ವರಾಜ್ಯವನ್ನು ಸ್ಥಾಪಿಸಿ ಸಂತೃಪ್ತರಾಗದೆ ಸ್ವರಾಜ್ಯವನ್ನು ಸಾಮ್ರಾಜ್ಯವನ್ನಾಗಿ ವಿಸ್ತರಿಸಿ ನೂರು-ನೂರಿಪ್ಪತ್ತೈದು ವರ್ಷಕಾಲ ಭಾರತವನ್ನೆಲ್ಲ ದುಮುದುಮಿಸಿ ಬಿಟ್ಟರು. ಮೊಗಲ ಬಾದಶಾಹಾನಿಂದ ಗೋಹತ್ಯಾ ಪ್ರತಿಬಂಧಕ ಆಜ್ಞೆಯನ್ನು ಹೊರಡಿಸಿದರು, ಹಾಗೂ ಪ್ರಯಾಗ, ಕಾಶೀ ಮುಂತಾದ ಕ್ಷೇತ್ರಗಳ ಮೇಲೆ ಮರಾಠರ ಆಳಿಕೆಯನ್ನು ಪ್ರಸ್ಥಾಪಿಸಿದ ಮಹಾದಾಜಿ ಶಿಂದೆ ಕೇವಲ ಮರಾಠರ ಧುರೀಣನಾಗಿರದೆ ಅಖಿಲ ಭಾರತದ ಧುರೀಣನಾಗಿದ್ದನು. ಮಹಾದಾಜಿಗೆ ರಾಣಾ ಸಂಗ, ರಾಣಾ ಪ್ರತಾಪ, ಕೃಷ್ಣದೇವರಾಯ ಮುಂತಾದವರ ಮಾಲಿಕೆಯಲ್ಲಿ ಸ್ಥಾನವಿದೆ. ಶಿವಾಜಿಯು ನಡೆಸಿದ ಧರ್ಮರಕ್ಷಣೆಯ ಕಾರ್ಯಕ್ಕೆ ಮಹಾದಾಜಿಯು ಕಳಸವನ್ನಿಟ್ಟನು. ಹಿಂದುಗಳ ನ್ಯೂನಗಂಡ ವನ್ನು ನಿವಾರಿಸಿ ಹಿಂದುಗಳಿಗೆ ಜಯಿಷ್ಣುವಾದ ಧರ್ಮಾಭಿಮಾನದ ಪಾಠವನ್ನು ಯಾರಾದರೂ ಕಲಿಸಿದ್ದರೆ ಅವರು ಮರಾಠರೆಂದೇ ಹೇಳಬೇಕು. ಮರಾಠರ ಸಾಮ್ರಾಜ್ಯವು ಪ್ರಸ್ಥಾಪಿತವಾದ್ದರಿಂದಲೇ ಹಿಂದೂ ಧರ್ಮ ಸಂಸ್ಕೃತಿಗಳಿಗೆ ಅಭಯ ವುಂಟಾಗಿ ಅವುಗಳ ಧ್ವಜವು ಭಾರತದಲ್ಲೆಲ್ಲ ಹೆಮ್ಮೆಯಿಂದ ಫಡಫಡಿಸಿತು. ಶೀಖರು, ರಜಪೂತರು, ವಿಜಯನಗರದವರು ಸಾಧಿಸಿದ ಕಾರ್ಯವು ಅವರವರ ಪ್ರದೇಶ ಗಳ ಮಟ್ಟಿಗೆ ಮರ್ಯಾದಿತವಾಗಿತ್ತು. ಆದರೆ ಮರಾಠರ ಕಾರ್ಯದ ಪ್ರಭಾವವು ಇಡೀ ಭಾರತದಲ್ಲೆಲ್ಲ ಹಬ್ಬಿತು. "ಮಡಿದರೂ ಚಿಂತೆಯಿಲ್ಲ, ಇಟ್ಟ ಹೆಜ್ಜೆಯನ್ನು ಹಿಂತೆಗೆಯಲಾರೆವು" ಎಂಬ ವೀರವೃತ್ತಿಯು ಮರಾಠರ ಕಾರ್ಯದಲ್ಲಿಯ

ಇನ್ನೊಂದು ಮಹತ್ವದ ಗಮನಾರ್ಹ ಸಂಗತಿಯಾಗಿದೆ. ಈ ವೀರವೃತ್ತಿಯು ಪ್ರತಿಯೊಬ್ಬ ಮರಾಠನಲ್ಲಿ ರಕ್ತಗತವಾಗಿದ್ದರಿಂದಲೇ ಮರಾಠರು ಔರಂಗಜೇಬನಂಥ ಬಲಾಢ್ಯ ಬಾದಶಾಹಾನನ್ನು ೨೫ ವರ್ಷಗಳ ವರೆಗೆ ಯಶಸ್ವಿಯಾಗಿ ಎದುರಿಸಿದರು. ಇಡೀ ಸಮಾಜವೇ ಸಿಡಿದೆದ್ದು ಜೀವದ ಹಂಗುದೊರೆದು ಪ್ರತೀಕಾರಕ್ಕೆ ಸಿದ್ಧವಾದಾಗ ಆಕ್ರಮಕನು ಅದೆಷ್ಟು ಬಲಾಢ್ಯನಿದ್ದರೂ ಆತನ ಆಟವು ನಡೆಯುವದಿಲ್ಲವೆಂಬದನ್ನು ಮರಾಠರು ತೋರಿಸಿ ಕೊಟ್ಟರು.

**ಯುದ್ಧ ಕೌಶಲ್ಯ :—** ಮಲಿಕ ಅಂಬರನ 'ಕೂಟಯುದ್ಧ'ಪದ್ಧತಿಯನ್ನು ಮರಾಠರು ಕಾರ್ಯಕ್ಷಮ ರೀತಿಯಲ್ಲಿ ಉಪಯೋಗಿಸಿಕೊಂಡು ಬಲಶಾಲಿಗಳಾದ ತಮ್ಮ ಶತ್ರುಗಳನ್ನು ಹಣ್ಣು ಮಾಡಿದರು. ಶಿವಾಜಿ ಮತ್ತು ಮೊದಲನೇ ಬಾಜೀರಾಯ ರಂಥ 'ಕೂಟಯುದ್ಧ'ಪದ್ಧತಿಯನ್ನು ಅವಲಂಬಿಸಿದ ಆದರ್ಶ ಸೇನಾಪತಿ ಗಳು ಮರಾಠರ ಆಳಿಕೆಯಲ್ಲಿ ಆಗಿ ಹೋದರು. ವಿದ್ಯುದ್ಗತಿಯ ಸಂಚಲನದಲ್ಲಿ ಮರಾಠರು ಪ್ರಖ್ಯಾತರಿದ್ದರು. ಭೌಗೋಲಿಕ ಪರಿಸ್ಥಿತಿಯ ಸಂಪೂರ್ಣ ಲಾಭವನ್ನು ಹೇಗೆ ಪಡೆದುಕೊಳ್ಳಬೇಕೆಂಬುದನ್ನು ಇತರರು ಮರಾಠರಿಂದ ಕಲಿತುಕೊಳ್ಳಬೇಕು. ಮರಾಠರಲ್ಲಿದ್ದ ಸಾದಾ ಸೈನಿಕ ವೃತ್ತಿ, ಚಪಲತೆ, ಶಿಸ್ತು, ಮಿತವ್ಯಯ ಇತ್ಯಾದಿ ಸದ್ಗುಣಗಳಿಂದ ಅವರು ಭಾರತದ ಯುದ್ಧಪ್ರಿಯ ಜನರಲ್ಲಿ ಉಚ್ಚ ಸ್ಥಾನವನ್ನು ಪಡೆ ದಿದ್ದಾರೆ. ಕೋಟೆ ಕೊತ್ತಳಗಳ, ನೌಕಾಪಡೆಯ ಮಹತ್ವವನ್ನು ಅರಿತುಕೊಂಡು ಅವುಗಳನ್ನು ಪ್ರಭಾವೀ ರೀತಿಯಿಂದ ಉಪಯೋಗಿಸಿಕೊಳ್ಳುವದರಲ್ಲಿ ಮರಾಠರು ಭಾರತದ ರಾಜರಲ್ಲಿ ಏಕಮೇವಾದ್ವಿತೀಯರಾಗಿದ್ದಾರೆ.

ಒಟ್ಟಿಗೆ ಮರಾಠರ ರಾಜ್ಯವು ಆಗಿಹೋದದ್ದರಿಂದ ಹಿಂದೂ ಧರ್ಮ ಹಾಗೂ ಸಂಸ್ಕೃತಿಗಳು ತಲೆಯೆತ್ತಿ ನಿಂತು ಅವಕ್ಕೆ ಜಯಿಷ್ಣು ಸ್ವರೂಪವು ಪ್ರಾಪ್ತವಾಯಿತು.

**ರಾಜ್ಯ ಸಂಘಟನೆ :—** ಮರಾಠರು ಕೇವಲ ಆಕ್ರಮಕರಾಗಿದ್ದರೆಂಬ ಭಾವ ನೆಯು ತಪ್ಪಾದದ್ದು. ಹಿಂದೂ ಸ್ವರಾಜ್ಯವು ಸ್ಥಾಪಿತವಾದೊಡನೆ ಶಿವಾಜಿಯು ಆದರ್ಶವಾದ ರಾಜ್ಯವ್ಯವಸ್ಥೆಯನ್ನು ರಚಿಸಿದನು. (೧) ರಾಜ್ಯವು ಎಲ್ಲರಿಗೂ ಸೇರಿದ್ದು (೨) ಪ್ರತಿಯೊಬ್ಬನಿಗೆ ಧಾರ್ಮಿಕ ಸ್ವಾತಂತ್ರ್ಯವಿದೆ (೩) ಜಹಗೀರುಗಳನ್ನು ವಂಶಪರಂಪರಾಗತ ಹಾಕಿಕೊಡುವದಿಲ್ಲ (೪) ರಾಜ್ಯದ ವ್ಯವಹಾರದಲ್ಲಿ ಧರ್ಮ. ಜಾತಿ, ಪಂಥಗಳ ವಿಚಾರ ಮಾಡದೆ ಕೇವಲ ಪಾತ್ರತೆಯನ್ನು ಗಮನಿಸಲಾಗುವದು (೫) ಪ್ರಜೆಗಳ ಮೇಲೆ ಸ್ವಲ್ಪ ಕೂಡ ಅತ್ಯಾಚಾರವು ನಡೆಯತಕ್ಕದ್ದಲ್ಲ (೬) ಪ್ರಜೆಗಳ ಸುಖವೇ ರಾಜನ ಸುಖ ಎಂಬ ಉಚ್ಚ ತತ್ವಗಳ ತಳಹದಿಯ ಮೇಲೆ ರಾಜ್ಯವ್ಯವಸ್ಥೆಯನ್ನು ರಚಿಸಲಾಗಿತ್ತು. ಇಂಥ ರಾಜ್ಯವ್ಯವಸ್ಥೆಯನ್ನು ರಚಿಸಿದ ಶಿವನೃಪತಿಯು ಅದೆಂಥ ವಿಶಾಲ ದೃಷ್ಟಿಯವನೂ ಉದಾರಚರಿತನೂ ಇರಬೇಡ! ಜೊಳ್ಳಾದ ಧ್ಯೇಯವಾದದಿಂದ ಧರ್ಮ ಸಂಸ್ಕೃತಿಗಳ ರಕ್ಷಣೆಯಾಗಲಾರದೆಂಬುದನ್ನು ಶಿವಾಜಿಯು ಸಂಪೂರ್ಣವಾಗಿ ತಿಳಿದಿದ್ದನು. ಆದ್ದರಿಂದಲೇ ಅವನು ಕೋಟೆ ಕೊತ್ತಳಗಳನ್ನು, ಸೈನ್ಯವನ್ನು, ನೌಕಾಪಡೆಯನ್ನು ಸದೈವ ಸುಸಜ್ಜಿತವಾಗಿಡುತ್ತಿ

ದ್ವಸು ಶಿವಾಜಿಯ ಸೈನ್ಯಸಂಘಟನೆಯೂ ಮಹಾರಾಷ್ಟ್ರ ಧರ್ಮರಕ್ಷಣೆಯ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿತು.

ಶಿವಾಜಿಯು ಮರಾಠರೆದುರು ಇಟ್ಟಿದ್ದ ಧ್ಯೇಯವಾದವು ಮುಂದೆ ಕಣ್ಮರೆಯಾಗುತ್ತ ನಡೆಯಿತು. ಪೇಶ್ವೆಯರ ಕಾಲದಲ್ಲಿ ಕೇವಲ ರಾಜ್ಯವಿಸ್ತಾರಕ್ಕಾಗಿ ಮತ್ತು ಧನಾಶೆಯಿಂದ ಮರಾಠರು ದಾಳಿಗಳನ್ನು ಪ್ರಾರಂಭಿಸಿದರು. ಅದರೊಂದಿಗೆ ಅವರ ಶಕ್ತಿ ಸಂಘಟನೆಗಳು ಶಿಥಿಲವಾಗುತ್ತ ನಡೆದವು.

ಶಿವಾಜಿಯ ರಾಜ್ಯಸಂಘಟನಾ ಚಾತುರ್ಯವು ಬಾಳಾಜಿ ಬಾಜಿರಾವ ಹಾಗೂ ಹಿರಿಯ ಮಾಧವರಾವ ಇವರಲ್ಲಿ ಬಹುಮಟ್ಟಿಗೆ ಕಂಡು ಬಂದಿತು ಅವರ ಕಾರ್ಯದಕ್ಷತೆಯನ್ನು ಪರಕೀಯ ಇತಿಹಾಸಕಾರರೂ ಪ್ರಶಂಸಿಸಿದ್ದಾರೆ

**ನರರತ್ನಗಳ ಗಣಿ:—** ಮಹಾರಾಷ್ಟ್ರದ ಭೂಮಿಯು ಫಲವತ್ತಾದದ್ದಲ್ಲದಿದ್ದರೂ ಇದು ನರರತ್ನಗಳ ಗಣಿಯಾಗಿದೆ ಶಹಾಜಿ, ಶಿವಾಜಿಯಿಂದ ಮೊದಲು ಮಾಡಿಕೊಂಡು ನಾನಾ–ಮಹಾದಾಜಿಯ ವರೆಗೆ ಅದೆಂಥ ಮಹಾ ಕರ್ತೃತ್ವಶಾಲಿಗಳ ಪರಂಪರೆಯು ೧೫೦ ವರ್ಷದ ಮರಾಠರ ಆಳಿಕೆಯಲ್ಲಿ ಕಂಡು ಬರುತ್ತಿದೆ? ಪರ್ವತಪ್ರಾಯವಾದ ಸಂಕಟಗಳು ಬಂದೊದಗಿದರೂ ಅವನ್ನೆದುರಿಸುವ ಧುರೀಣರು ಮರಾಠರ ರಾಜ್ಯದಲ್ಲಿ ಜನ್ಮಿಸಿದರು. ಸಂಭಾಜಿ–ರಾಜಾರಾಮರ ನಂತರದ ಸಂಕಟಗ್ರಸ್ತ ಕಾಲದಲ್ಲಿ ಮಹಾರಾಷ್ಟ್ರದಲ್ಲಿ ಅದೆಷ್ಟು ನರರತ್ನಗಳು ಅವತರಿಸಿದವು! ಪಾನಿಪತದ ನಂತರ ಮರಾಠಾ ರಾಜ್ಯದ ಇತಿಶ್ರೀಯಾಯಿತೆಂದು ಅನಿಸಿತ್ತು; ಆದರೆ ಮರಾಠಾ ರಾಜ್ಯವನ್ನು ಎತ್ತಿ ಹಿಡಿಯಲು ಮಾಧವರಾವ ಮತ್ತು ಮಹಾದಾಜಿ ಶಿಂದೆಯವರು ಮುಂದಾದರು ಮರಾಠರ ಆಳಿಕೆಯಲ್ಲಿ ಈ ಪುರುಷರತ್ನಗಳಂತೆ ಅನೇಕ ಮಹಿಳಾ ಮಣಿಗಳೂ ಬೆಳಗಿ ಹೋದರು. ಜಿಜಾಬಾಯಿ, ಯೇಸೂಬಾಯಿ, ತಾರಾಬಾಯಿ, ಅಹಲ್ಯಾಬಾಯಿ, ರಮಾಬಾಯಿ ಇವರಂಥ ಕರ್ತೃತ್ವಶಾಲಿನಿಯರು ಜನ್ಮಿಸಿದ ಸಮಾಜದ ಉತ್ಕರ್ಷವಾಗದಿರುವದುಂಟೆ? ಮರಾಠಾ ರಾಜ್ಯದಲ್ಲಿಯ ಈ ನರರತ್ನಗಳು ಅಖಿಲ ಭಾರತಕ್ಕೆ ಸ್ಫೂರ್ತಿಯನ್ನಿತ್ತಿವೆ.

**ಸಾಂಸ್ಕೃತಿಕ ಕಾರ್ಯ:—** ಮರಾಠರು ಸ್ಪಾರ್ಟನ್ನರಂತೆ ಯುದ್ಧವೃತ್ತಿಯ ಸೈನಿಕರಾಗಿದ್ದರು. ಇವರಲ್ಲಿ ಗ್ರೀಕರ ಸೌಂದರ್ಯದೃಷ್ಟಿಯಿದ್ದಿಲ್ಲ. ಅಂತೆಯೆ ಮೊಗಲ ಸಾಮ್ರಾಟರು ಕಟ್ಟಿಸಿದಂಥ ಭವ್ಯ ಕಟ್ಟಡಗಳನ್ನು ಮರಾಠರು ಕಟ್ಟಿಸಿದ್ದು ಕಂಡುಬರುವದಿಲ್ಲ ವಾಙ್ಮಯ ಕ್ಷೇತ್ರದಲ್ಲಿ ಹದಿಮೂರನೇ ಶತಮಾನದಲ್ಲಿ ಜ್ಞಾನದೇವ, ನಾಮದೇವ *ರಿಂದ ಹದಿನೆಂಟನೆ ಶತಮಾನದ ಮೋರೋಪಂತ, ಶ್ರೀಧರರ ವರೆಗಿನ ಕಾಲದಲ್ಲಿ ಉತ್ತಮ ಪ್ರತಿಯ ಎಷ್ಟೋ ಲೇಖಕರು ಆಗಿಹೋದರು ಇವರ ಗ್ರಂಥ ರಚನೆಯೆಲ್ಲ ಧಾರ್ಮಿಕಸ್ವರೂಪದವಿದ್ದು ಮರಾಠಾ ಮನೋವೃತ್ತಿಗೆ ಒಪ್ಪುವಂತೆ

---

* ಈ ಎಲ್ಲ ಲೇಖಕರಲ್ಲಿ ನಾಮದೇವನ ಹೆಸರನ್ನು ಉಲ್ಲೇಖಿಸುವದು ಅಗತ್ಯವಿದೆ. ಇವನ ಅಭಂಗಗಳ ಪ್ರಸಾರವು ಪಂಜಾಬದ ವರೆಗೆ ಆಗಿತ್ತು. ಶೀಖರ ‘ಗ್ರಂಥಸಾಹೇಬ’ ದಲ್ಲಿ ನಾಮದೇವನ ಕೆಲ ಅಭಂಗಗಳನ್ನು ಸೇರಿಸಿಕೊಂಡಿದ್ದಾರೆ.

ಸುಲಭವೂ ಸರಳವೂ ಆಗಿದೆ. ಈ ವಿಚಾರದಲ್ಲಿ ಈ ಕೆಳಗಿನ ಶ್ಲೋಕವು ಪ್ರಸಿದ್ಧವಿದೆ.

ಸುಶ್ಲೋಕ ವಾಮನಾಚಾ ಅಭಂಗವಾಣಿ ಪ್ರಸಿದ್ಧ ತುಕ್ಯಾಚಿ ॥
ಓವಿ ಜ್ಞಾನೇಶಾಂಚಿ ಆರ್ಯಾ ಗಾವಿ ಮಯೂರಪಂತಾಂಚಿ ॥

( ಹಾಡಬೇಕಾದರೆ ವಾಮನನ ಉತ್ತಮ ಶ್ಲೋಕಗಳನ್ನೂ ತುಕಾರಾಮನ ಪ್ರಸಿದ್ಧ ಅಭಂಗಗಳನ್ನೂ ಜ್ಞಾನದೇವನ ಓವಿಗಳನ್ನೂ ಮೋರೋಪಂತನ ಆರ್ಯಾ-ಗಳನ್ನೂ ಹಾಡಬೇಕು. )

ಈ ವಾಙ್ಮಯವು ಹೆಚ್ಚು ಕಡಿಮೆ ಪಂಡಿತರ ಪದ್ಧತಿಯಾಗಿತ್ತು. ಬಹುಜನ ಸಮಾಜಕ್ಕೆ ಪ್ರಿಯವಾದ ವಾಙ್ಮಯವೆಂದರೆ ಲಾವಣಿಹಾಡುಗಳು. ರಾಮಜೋಶಿ, ಹೋನಾಜಿ ಬಾಳ, ಸಗನಭಾವು, ಪ್ರಭಾಕರ ಮುಂತಾದವರು ತಮ್ಮ ಲಾವಣಿಗಳಿಂದ ಸುಪರಿಚಿತರಾಗಿದ್ದಾರೆ. ಮರಾಠರು ಜನ್ಮತಃ ಸೈನಿಕವೃತ್ತಿಯವರಾದ್ದರಿಂದ ಅವರಿಗೆ ವೀರ–ಶೃಂಗಾರರಸಗಳ ಲಾವಣಿಗಳು ಅತ್ಯಂತ ಪ್ರಿಯವಾಗಿದ್ದವು. ಮರಾಠರು ಐತಿಹಾಸಿಕ ವಾಙ್ಮಯವನ್ನು ಹೆಚ್ಚಿಸಿದ್ದಾರೆ ಶಿವಾಜಿಯ ಕಾಲದಲ್ಲಿ ಕೌಟಿಲ್ಯನ ಅರ್ಥಶಾಸ್ತ್ರಕ್ಕೆ ಸಮಾನವಾದ ' ಆಜ್ಞಾಪತ್ರ ' ಮತ್ತು ' ರಾಜ್ಯವ್ಯವಹಾರ ಕೋಶ ' ವೆಂಬ ಗ್ರಂಥಗಳು ರಚಿತವಾದವು. ಮರಾಠರಲ್ಲಿ ದಿನಚರಿಗಳನ್ನು ಬರೆಯುವವರೂ ಅನೇಕರಿದ್ದರು. ಸಭಾಸದ, ಚಿಟನೀಸ, ಚಿತ್ರಗುಪ್ತ ಮುಂತಾದವರ ದಿನಚರಿಗಳು ಉಲ್ಲೇಖನೀಯವಾಗಿವೆ.

**ಸಮಾರೋಪ** :— ಭಾರತದ ಇತಿಹಾಸದಲ್ಲಿ ಮರಾಠರಿಗಿರುವ ಮಹತ್ವದ ಸ್ಥಾನವು ಇದೆಲ್ಲ ವಿವೇಚನೆಯಿಂದ ಸ್ಪಷ್ಟವಾಗುವದು. ಕೆಲವು ಪರಕೀಯ ಇತಿಹಾಸ ಕಾರರು ಮರಾಠರನ್ನು ಉಪೇಕ್ಷಿಸಿ ಅವರಿಗೆ ಗೌಣಸ್ಥಾನವನ್ನು ಕೊಟ್ಟಿರುವರು. ಆ ಇತಿಹಾಸಕಾರರ ಪೂರ್ವಗ್ರಹದೂಷಿತ ಮನಸ್ಸನ್ನೇ ವ್ಯಕ್ತಪಡಿಸುತ್ತದೆ. ಸೂರ್ಯ ಪ್ರಕಾಶವು ಸ್ವಯಂಸಿದ್ಧವಾಗಿದ್ದು ಯಾರೂ ಅದನ್ನು ದೀಪ ಹಿಡಿದು ತೋರಿಸಬೇಕಾ-ಗುವದಿಲ್ಲ. ಅದರಂತೆ ಭಾರತದ ಇತಿಹಾಸದಲ್ಲಿ ಮರಾಠರ ಮಹತ್ವವು ಸ್ವಯಂಸಿದ್ಧ-ವಾಗಿದೆ. ಮೊಗಲರ ನಂತರ ಹಿಂದುಸ್ಥಾನದ ಸೂತ್ರಗಳು ಮರಾಠರ ಕೈಗೆ ಬಂದವು. ದಿಲ್ಲಿಯ ಮಹತ್ವವು ಪುಣೆಗೆ ದೊರೆಯಿತು. ಮರಾಠರ ಪತನವಾದ ನಂತರವೇ ಇಂಗ್ಲಿಷರು ಭಾರತದ ಪ್ರಭುಗಳಾದರು ಎಂಬ ಇತಿಹಾಸವನ್ನು ಕಣ್ಮರೆಮಾಡಿ ನಡೆಯುವಂತಿಲ್ಲ. ಜಯಿಷ್ಣುವಾದ ಧರ್ಮಾಭಿಮಾನ, ಉಜ್ವಲ ದೇಶಾಭಿಮಾನ, ಸಾದಾ ಜೀವನ, ಉಚ್ಚ ವಿಚಾರಸರಣಿ ಇವುಗಳಿಗೆ ಆದರ್ಶವೆಂದರೆ ಮರಾಠರೇ. ಮರಾಠರ ಇತಿಹಾಸವೆಂದರೆ ಅಖಂಡ ಸ್ಫೂರ್ತಿಯ ಸೆಲೆಯಾಗಿದೆ.

## ಅವತರಣಿಕೆಗಳು

೧. ಗ್ರಾಂಟಡಫ್ ಎಂಬ ಇತಿಹಾಸಕಾರನು " ಮರಾಠರ ಇತಿಹಾಸ " ವನ್ನು ಬರೆದಿದ್ದಾನೆ. ಅವನು ಬಾಳಾಜಿ ಬಾಜೀರಾಯನ ಆಡಳಿತವನ್ನು ಬಹುವಾಗಿ ಪ್ರಶಂಸಿಸಿದ್ದಾನೆ. ಆತನು ಹೀಗೆ ಬರೆದಿದ್ದಾನೆ.

" ಈ ಪೇಶ್ವೆಯು ಸಂಭಾಷಣಚತುರನಾಗಿದ್ದು ನಡೆವಳಿಕೆಯಲ್ಲಿ ತುಂಬ ಸುಸಂಸ್ಕೃತನಾಗಿದ್ದನು. ಇವನು ರಾಜ್ಯಕಾರಭಾರದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿ ಪ್ರಗತಿಯನ್ನು ಸಾಧಿಸಿದನು. ಪ್ರತಿ ಜಿಲ್ಲೆಗೆ ಮಾಮಲೇದಾರ, ಸುಭೇದಾರ-ರನ್ನು ನೇಮಿಸಿ ಸುವ್ಯವಸ್ಥೆ, ಕಂದಾಯ ವಸೂಲಿ ಮತ್ತು ನ್ಯಾಯದಾನ ( ದಿವಾಣಿ-ಫೌಜದಾರಿ ) ಗಳಲ್ಲಿ ಅವರಿಗೆ ಸಾಕಷ್ಟು ಅಧಿಕಾರಗಳನ್ನು ಕೊಟ್ಟಿದ್ದನು. ಇವನ ಆಳಿಕೆಯಲ್ಲಿ ಗ್ರಾಮಪಂಚಾಯತಿಗಳು ವಿಶೇಷ ಪ್ರಗತಿಯನ್ನು ಸಾಧಿಸಿದವು. ಮರಾ-ಠರ ರಾಜ್ಯವು ಅತ್ಯಂತವಾಗಿ ವಿಸ್ತಾರಹೊಂದಿದ್ದು ಈತನ ಕಾಲದಲ್ಲಿ. ಇವನು ಬಹು ಜನ ಸಮಾಜದ ಸ್ಥಿತಿಯನ್ನು ಸುಧಾರಿಸಿದನು. ವಿಶೇಷತಃ ರೈತವರ್ಗದ ಪ್ರೀತಿ-ಯನ್ನು ಇವನು ದೊರಕಿಸಿದನು. "

೨. ಸರ್ ರಿಚರ್ಡ ಟೆಂಪಲ್ ಎಂಬ ಆಂಗ್ಲ ಲೇಖಕನು ಹಿರಿಯ ಮಾಧವ-ರಾಯನನ್ನು ಹೀಗೆ ಬಣ್ಣಿಸಿದ್ದಾನೆ.

" ಅರ್ಥಶಾಖೆ, ನ್ಯಾಯಶಾಖೆ ಮತ್ತು ಸಾಮಾನ್ಯ ಆಡಳಿತದ ಕಡೆಗೆ ವಿಶೇಷ-ವಾಗಿ ಲಕ್ಷವನ್ನು ಪೂರೈಸಿದನು. ಈ ಪೇಶ್ವೆಯು ದೀನಬಂಧುವೂ ದಬ್ಬಾಳಿಕೆ ನಡೆಸುವವರ ಶತ್ರುವೂ ಆಗಿದ್ದನೆಂಬ ವಿಶ್ವಾಸವು ಪ್ರಜಾಜನರಲ್ಲಿತ್ತು. "

## ಅಭ್ಯಾಸ

೧. ಬಾಳಾಜಿ ವಿಶ್ವನಾಥನು ಮರಾಠಾ ರಾಜ್ಯಕ್ಕೆ ಸಲ್ಲಿಸಿದ ಸೇವೆ ಯಾವದು ?

೨. ಮೊದಲನೇ ಬಾಜೀರಾಯನು ಯಾವ ಅಂಶಗಳಲ್ಲಿ ಶಿವಾಜಿಯ ಪಟ್ಟಶಿಷ್ಯನಾಗಿದ್ದನು? ಈ ಮಾತು ಯಾವ ವಿಷಯದಲ್ಲಿ ಈತನಿಗೆ ಅನ್ವಯಿಸುವದಿಲ್ಲ? ಎಂಬುದನ್ನು ಹೇಳಿರಿ.

೩. ಬಾಳಾಜಿ ಬಾಜೀರಾಯನ ಕಾಲದಲ್ಲಿ ಮರಾಠರು ಕೈಕೊಂಡ ಉತ್ತರದ ರಾಜಕಾರಣವು ಹೇಗೆ ಮುಕ್ತಾಯಹೊಂದಿತು ? ಈ ಕಾಲದಲ್ಲಿ ಮರಾಠರಿಗೆ ಅಪಜಯವೇಕಾಯಿತು ?

೪. ಪಾನಿಪತದ ಪರಾಭವಕ್ಕಿಂತ ಹಿರಿಯ ಮಾಧವರಾಯನ ಮೃತ್ಯುವಿನಿಂದ ಮರಾಠರ ರಾಜ್ಯಕ್ಕೆ ವಿಶೇಷ ಹಾನಿಯಾಯಿತೆಂದು ಹೇಳುತ್ತಾರೆ. ಏಕೆ ?

೫. ನಾನಾ ಮತ್ತು ಮಹಾದಾಜಿಯವರು ಮರಾಠರ ರಾಜ್ಯದ ವೈಭವವನ್ನು ಹೇಗೆ ಹೆಚ್ಚಿಸಿದರು ?

೬. ಮರಾಠರ ಅವನತಿಯ ಕಾರಣಗಳನ್ನು ವಿವರಿಸಿರಿ.

೭. ' ಭಾರತದ ಇತಿಹಾಸದಲ್ಲಿ ಮರಾಠರ ಮಹತ್ವ ' ಎಂಬ ವಿಷಯದ ಬಗ್ಗೆ ಚಿಕ್ಕ ನಿಬಂಧ ಬರೆಯಿರಿ.

| ಭಾರತದಲ್ಲಿ ] | ಕಾಲಪಟ | [ ಭಾರತದ ಹೊರಗೆ |
|---|---|---|
| | ೧೩೦೦ | |
| ವಿಜಯನಗರದ ಸ್ಥಾಪನೆ<br>ತೈಮೂರನ ದಾಳಿ | | ಬಂದೂಕಿನ ಮತ್ತು ಮದ್ದಿನ ಶೋಧ<br>ಧರ್ಮ ಸುಧಾರಕ ಜಾನ್ ವಿಕ್ಲಿಫ |
| | ೧೪೦೦ | |
| ಝೈನ ಉಲ್ ಅಬೀದೀನ<br>( ಕಾಶ್ಮೀರ ) | | ಹುತಾತ್ಮಾ ಹಸ್<br>ಜರ್ಮನಿಯಲ್ಲಿ ಮೊದಲನೇ ಮುದ್ರಣಾಲಯ |
| | ೧೫೦೦ | |
| ಕಬೀರ<br>ನಾನಕ<br>ಪಾನಿಪತದ ೨ ನೇ ಯುದ್ಧ | | ಇರೆಸ್ಮಸ್<br>ಮೆಗಲಾನ<br>ಮಾರ್ಟಿನ್ ಲ್ಯೂಥರ<br>ಮಾಯಕೆಲ್ ಅಂಜಲೊ<br>ಸ್ಪಾನಿಶ್ ಹಡಗುಪಡೆ<br>ಈ. ಇ. ಕಂಪನಿ ಸ್ಥಾಪನೆ |
| | ೧೬೦೦ | |
| ಥಾಮಸ್ ರೋ<br>ಮಲಿಕಂಬರ<br>ನಿಜಾಮಶಾಹಿಯ ಕೊನೆ<br>ಶಿವಾಜಿ ರಾಜ್ಯಾಭಿಷೇಕ<br>ಆದಿಲ್‌ಶಾಹಿಯ ಕೊನೆ | | ಪಿಲಿಗ್ರಿಮ್ ಫಾದರ್ಸ,<br>ಅಮೇರಿಕನ್ ವಸಾಹತು<br>ಗೆಲಿಲಿಯೋ |
| | ೧೭೦೦ | |
| ಔರಂಗಜೇಬನ ಮರಣ<br>ಮೊದಲನೇ ಬಾಜೀರಾಯ<br>ಪಾನಿಪತ್ತದ ೩ನೇ ಯುದ್ಧ | | ಸಪ್ತವಾರ್ಷಿಕ ಯುದ್ಧ<br>ಅಮೇರಿಕನ್ ಸ್ವಾತಂತ್ರ್ಯ ಯುದ್ಧ<br>ಜಾರ್ಜ ವಾಶಿಂಗಟನ್ |
| | ೧೮೦೦ | |
| ನಾನಾಫಡಣವೀಸನ ಮರಣ<br>ಪೇಶ್ವೆಯರ ಕೊನೆ<br>ಮೊಗಲಬಾದಶಾಹಿ ಕೊನೆ | | ಗುಲಾಮಗಿರಿ ತಡೆ<br>ಗುಲಾಮಗಿರಿಯಕೊನೆ<br>( ಅಮೇರಿಕಾ ) |
| | ೧೯೦೦ | |

೧ ಇಂಚಿಗೆ ೧೦೦ ವರ್ಷಗಳು

# ೧೬ನೆಯ ಪಾಠ

## ಸಮಾಲೋಚನೆ

### (ಇ. ಸ. ೬೦೦—೧೮೦೦)

"ಇತಿಹಾಸ ದರ್ಶನ"ದ ಎರಡನೆಯ ಪುಸ್ತಕದಲ್ಲಿ ನಾವು ೧೨೦೦ ವರ್ಷಗಳ ವಿಸ್ತೃತ ಕಾಲಖಂಡವನ್ನು ನಿಮ್ಮ ಮುಂದೆ ಇಟ್ಟೆವು. ಈ ಕಾಲಖಂಡದಲ್ಲಿ ಏಶಿಯಾ ಮತ್ತು ಯುರೋಪ ಇವುಗಳಲ್ಲಿಯ 'ಮಾನವೀ' ಜೀವನದೊಳಗೆ ಆದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಘಟನೆಗಳ ಪರಿಚಯವನ್ನು ನಾವು ಮಾಡಿಕೊಂಡೆವು. ಭೌಗೋಲಿಕ ಮತ್ತು ಶಾಸ್ತ್ರೀಯ ಶೋಧಗಳ ಮಾಹಿತಿಯನ್ನು ಮಾಡಿಕೊಳ್ಳುವಾಗ ನಾವು ಜಗತ್ ಪ್ರವಾಸಿಗಳಾಗಿದೆ ವು. ಕೋಲಂಬಸನೊಡನೆ ಪೃಥ್ವೀಪರ್ಯಟನಕ್ಕೆ ಹೊರಟು ನಾವು ಅವನ ಸಂಗಡ ಅಟಲಾಂಟಿಕ ಮಹಾಸಾಗರದೊಳಗೆ ಸಾಹಸಪೂರ್ಣವಾದ ಪ್ರವಾಸವನ್ನು ಮಾಡಿದೆವು. ವಾಸ್ಕೋ-ದ-ಗಾಮಾನ ಸಹವಾಸದಲ್ಲಿ ನಾವು "ಕೇಪ ಆಫ್ ಸ್ಟಾರ್ಮ್ಸ"ವನ್ನು (ಬಿರುಗಾಳಿ ಭೂಶಿರ ಎಂದು ಅರ್ಥ) ಸುತ್ತು ಹಾಕಿ ನಾವು ಭಾರತದ ಕಾಲಿಕತ ಬಂದರಕ್ಕೆ ಬಂದು ಸೇರಿದೆವು. "ಕೇಪ ಆಫ್ ಸ್ಟಾರ್ಮ್ಸ"ಗೆ ಮುಂದೆ "ಕೇಪ ಆಫ್ ಗುಡ್ ಹೋಪ್" ಎಂಬ ಅರ್ಥಪೂರ್ಣ ಹೆಸರು ದೊರೆತಿತು ಇದನ್ನು ನಾವು ನೋಡಿದ್ದೇವೆ. ಅದರಂತೆ ಡ್ರೇಕನ ಸಂಗಡ ನಾವು ಪೃಥ್ವೀಪರ್ಯಟನವನ್ನು ಮಾಡಿ ಅನಂತವಾದ ಮಹಾಸಾಗರದೊಳಗಿನ ಸಾಹಸಪೂರ್ಣ ಪ್ರವಾಸದಲ್ಲಿಯ ಭಯಾನಕತೆ ಮತ್ತು ಆನಂದಗಳ ಸಮ್ಮಿಶ್ರ ಸುಖಾಸ್ವಾದನೆಯನ್ನು ಮಾಡಿದ್ದೇವೆ. ಮೆಗೆಲಾನನ ಸಂಗಡ ದಕ್ಷಿಣ ಅಮೇರಿಕೆಯನ್ನು ಸುತ್ತಿ ಹಾಕಿ ನಾವು ಪ್ಯಾಸಿಫಿಕ ಮಹಾಸಾಗರದಲ್ಲಿ ಪ್ರವೇಶಿಸಿದೆವು. ಮತ್ತು ದಕ್ಷಿಣ ಅಮೇರಿಕೆಯ ತುದಿಯಲ್ಲಿರುವ ಸಾಮುದ್ರಧುನಿಗೆ 'ಮೆಗಲಾನ' ಸಾಮುದ್ರಧುನಿ ಎಂದು ಹೆಸರು ಕೊಟ್ಟೆವು. ಈ ಪ್ರವಾಸಗಳಲ್ಲಿ ಮನಸ್ಸನ್ನು ನಡುಗಿಸಿಬಿಡುವ ಎಷ್ಟೋ ಅನುಭವಗಳು ನಮಗೆ ಬಂದವು. ೧೨ ತಿಂಗಳುಗಳಿಗಿಂತ ಕಡಿಮೆಯಾದ ಅವಧಿಯಲ್ಲಿ ನಾವು ೧೨೦೦ ವರ್ಷಗಳ ಐತಿಹಾಸಿಕ ಕಾಲದಲ್ಲಿ ಸಂಚರಿಸಿದೆವು. ನಮ್ಮ ಅಭ್ಯಾಸದ ಕೋಣೆಯನ್ನು ಬಿಡದೆ ಪೃಥ್ವಿಯ ಪ್ರದಕ್ಷಣೆಯನ್ನು ಮಾಡಿದೆವು. ಇತಿಹಾಸವು ಎಂಥ ಚಮತ್ಕಾರಗಳನ್ನು ಮಾಡಿತೋರಿಸಬಹುದೆಂಬುದನ್ನು ಹೇಳಲು ಬರುವದಿಲ್ಲ. ಇಷ್ಟು ದೊಡ್ಡ ಇತಿಹಾಸವನ್ನು ಕೇವಲ ಒಂದು ಚಿತ್ರಪಟದಲ್ಲಿ ತೋರಿಸುವದು ಅಶಕ್ಯಪ್ರಾಯವಿದೆ. ನಮಗೆ ದೊರೆತ ಇತಿಹಾಸದ ದರ್ಶನವು ಬಹಳ ಸಮೃದ್ಧ ಮತ್ತು ಸುಸ್ಪಷ್ಟವಿದ್ದಿತಲ್ಲವೆ ?

ಅರಬಸ್ಥಾನದೊಳಗಿನ ಮುಹಮ್ಮದ ಪೈಗಂಬರನಿಂದ ಹಿಡಿದು ನಾವು ಈ ಇತಿಹಾಸ ದರ್ಶನವನ್ನು ಪ್ರಾರಂಭಿಸಿದೆವು. ದೇವದೂತ ಗಾಬ್ರಿಅಲನಿಂದ ಮುಹಮ್ಮದ ಪೈಗಂಬರನಿಗೆ ಅರಬ ಸಮಾಜದಲ್ಲಿ ನವಚೈತನ್ಯದ ನಿರ್ಮಾಣವನ್ನು ಮಾಡಿ ಆ

ಸಮಾಜವನ್ನು ಸಾಂಸ್ಕೃತಿಕ ಮಟ್ಟಕ್ಕೆ ತರಬೇಕೆಂಬ ಪ್ರೇರಣೆಯು ಆಯಿತು. ಪೈಗಂಬರನಿಗೆ ಈ ದಿವ್ಯ ದೃಷ್ಟಿಯು ಹೇಗೆ ಪ್ರಾಪ್ತವಾಯಿತೆಂಬುದರ ಅವಲೋಕನ ವನ್ನೂ ನಾವು ಮಾಡಿದ್ದೇವೆ. "ಇಸ್ಲಾಮು" ಅಂದರೆ "ಈಶ್ವರೀ ಇಚ್ಛೆಯ ಎದುರು ನಮ್ರನಾಗಿರುವದು" ಎಂಬ ಇಸ್ಲಾಮ ಧರ್ಮದ ಸಂದೇಶವನ್ನು ನಾವು ಗ್ರಹಿಸಿದ್ದೇವೆ. ಸ. ೬೩೨ ರಲ್ಲಿ ಪೈಗಂಬರರ ದೇಹವು ನಾಶವಾಯಿತು. ಅದರ ನಂತರದ ಒಂದು ಶತಕದಲ್ಲಿ ಖಲೀಫ ಪಟ್ಟಗಳು ಮತ್ತು ಅವುಗಳ ಯಶಸ್ವಿ ಸೇನೆ, ಇವು ಏಶಿಯಾ ಆಫ್ರಿಕಾ, ಮತ್ತು ಯುರೋಪ ಈ ಮೂರು ಖಂಡಗಳಲ್ಲಿ ಇಸ್ಲಾಮು ಅಧಿರಾಜ್ಯಗಳನ್ನು ಹೇಗೆ ಸ್ಥಾಪಿಸಿದವೆಂಬುದನ್ನು ನಾವು ಕಂಡಿದ್ದೇವೆ. ಮುಸಲ್ಮಾ-ನರ ಈ ದಿಗ್ವಿಜಯದೊಳಗಿನ ಇತರ ಎಷ್ಟೋ ಸಂಗತಿಗಳನ್ನು ನಾವು ಮರೆತರೂ "ಜಿಬ್ರಾಲ್ಟರ" ಎಂಬ ಹೆಸರು ಸ್ಪೇನವನ್ನು ಜಯಿಸಿದ ಮೊದಲನೆಯ ಅರಬ ವಿಜೇತನ ಮೂಲಕ ಬಂದಿತೆಂಬುದನ್ನು ಮರೆಯುವದು ಶಕ್ಯವಿಲ್ಲ. ಮಧ್ಯ ಯುಗದಲ್ಲಿ ಯುರೋಪವು ಅಜ್ಞಾನದ ಕತ್ತಲೆಯಲ್ಲಿ ಹೊರಳಾಡುತ್ತಿದ್ದಾಗ ಯುರೋಪದಲ್ಲಿ ಜ್ಞಾನಜ್ಯೋತಿಯನ್ನು ಹಚ್ಚಲು ಅರಬರೇ ಮುಂದಾಳಾಗಿದ್ದರು. ಯುರೋಪದಲ್ಲಿ ಜ್ಞಾನಯುಗದ ಬೆಳಕನ್ನು ಕೆಡುಹಿದ ವ್ಯಕ್ತಿಗಳಿಗೆ ಪ್ರೇರಣೆಯು ಅರಬ ಜನರಿಂದಲೇ ದೊರಕಿತು. ವಿಜ್ಞಾನಯುಗದ (ವಿಶೇಷವಾಗಿ ವೈದ್ಯಕ) ಆದ್ಯ ಪ್ರವರ್ತಕರು ಅರಬ ಜನರೇ ಸರಿ. ಲಲಿತ ಕಲೆ ಮತ್ತು ಉಚ್ಚ ಸಂಸ್ಕೃತಿ ಇವುಗಳ ಸ್ಫೂರ್ತಿಯನ್ನು ಅವರೇ ಕೊಟ್ಟರು. ಅಲ್ಲಾನ ದರ್ಬಾರದಲ್ಲಿ ಧನಿಕರು ಮತ್ತು ದರಿದ್ರರು ಒಂದೇ ರೀತಿಯಾಗಿ ನೋಡಲ್ಪಡುತ್ತಾರೆ ಎಂಬ ಸಮಾನತೆಯ ತತ್ವದ ಮೇಲೆ ಆಧಾರಿತವಾದ ಮುಸಲ್ಮಾನ ಬಾಂಧವರ ಸಾಮರ್ಥ್ಯಶಾಲಿ ಸಂಘಟನೆಯನ್ನು ಅವರೇ ನಿರ್ಮಾಣ ಮಾಡಿದರು.

ವೇಷ ಬದಲಿಸಿ ನಾವು ಕೂಡ ಖಲೀಫ ಹರೂನ–ಅಲ್–ರಶೀದನ ಸಂಗಡ ಬಗದಾದದೊಳಗಿನ ನಾನಾ ಪ್ರಕಾರದ ಜನಸಮೂಹದಲ್ಲಿ ಸೇರಿಕೊಂಡೆವು. ಆ ಖಲೀಫನ ಸಾಮ್ರಾಜ್ಯದೊಳಗಿನ ಇತರ ಭಾಗಗಳ ನಿರೀಕ್ಷಣೆಯನ್ನು ಮಾಡಿದೆವು. ಖಲೀಫನ ದೂತರು, ಸಿಂಧದ ಹಿಂದೂ ರಾಜನಾದ ದಾಹಿರ ಮತ್ತು ಅವನ ರಾಣಿ ರಾಣೀಬಾಯಿ ಇವರ ಸಂಗಡ ಸ. ೭೧೨ ರಲ್ಲಿ ಮಾಡಿದ ರಣಸಂಗ್ರಾಮನ್ನೂ ನಾವು ನೋಡಿದ್ದೇವೆ. ನಂತರದ ಅವಧಿಯಲ್ಲಿ ತುರ್ಕ ಸುಲ್ತಾನರು ಬಗದಾದದ ಖಲೀಫ ನನ್ನು ಬದಿಗೆ ಸರಿಸಿದರು. ಮುಂದೆ ಕೊನೆಗೆ ೧೩ ನೆಯ ಶತಕದಲ್ಲಿ ಮಂಗೋಲಿಯನ ಆಕ್ರಮಣಕಾರರು ಖಲೀಫನ ಸತ್ತೆಯನ್ನು ನಾಮಶೇಷ ಮಾಡಿದರು.

ಗಝನಿಯ ಮಹಮೂದನು ಭಾರತದ ಮೇಲೆ ವಿದ್ಯುದ್ಗತಿಯಿಂದ ೧೬ ಸಲ ದಾಳಿ ಮಾಡಿದುದನ್ನು ಮತ್ತು ಕೊನೆಗೆ ಸ. ೧೦೨೫ ರಲ್ಲಿ ಅವನು ಸೋಮನಾಥದಲ್ಲಿ ಮಾಡಿದ ದುರ್ದೆಸೆಯನ್ನು ನೋಡಿ ನಮಗೆ ಅದೆಷ್ಟು ಬಲವಾದ ಪೆಟ್ಟು ಬಿದ್ದಿತು! ಆದರೂ ಇದೇ ವೇಳೆಯಲ್ಲಿ ಸ್ವರ್ಗೀಯ ಕವಿ ಫಿರ್ದೌಸಿ ಮತ್ತು ವಿದ್ವಾನ್ ಪಂಡಿತ ಅಲ್‌ಬೆರುನಿ ಇವರ ಪರಿಚಯವು ನಮಗೆ ಆಗಿ ಅಷ್ಟೇ ಸಮಾಧಾನವೆನಿಸಿತು.

ಭಾರತದೊಳಗಿನ ಇಸ್ಲಾಮದ ಈ ವಿಜಯಗಳ ಉತ್ತರದಾಯಿತ್ವವು ಆ ಕಾಲದ ಹಿಂದುಗಳ ಮೇಲೆಯೇ ಬೀಳುತ್ತಿತ್ತೆಂಬುದು ನಿಜ. ಆದರೆ ತುರ್ಕಿ ಆಕ್ರಮಣ ಕಾರರಿಗೆ ಕೈಯನ್ನು ತೋರಿಸಲು ಸುಸಜ್ಜಿತರಾದ ನಮ್ಮ ಬಾಂಧವರಿಗೆ ಆರ್ಥಿಕ ಸಹಾಯವನ್ನು ನೀಡಲು ಹಿಂದೂ ಲಲನೆಯರು ತಮ್ಮ ಮೈಮೇಲಿನ ಅಲಂಕಾರ ಗಳನ್ನು (ಆಭರಣ) ಮಾರಿ ಮತ್ತು ದೀನ ದರಿದ್ರರು ನೂಲನ್ನು ನೂತು ಹಣವನ್ನು ಸಂಗ್ರಹಿಸಿದುದನ್ನು ಮರೆತರೆ ಹೇಗೆ ನಡೆಯುವದು? ಪೃಥ್ವೀರಾಜರಂತಹ ವೀರ ಪುರುಷರು ಇದೇ ಕಾಲದಲ್ಲಿ ಮುಂದೆ ಬಂದರು. ಇತಿಹಾಸದಲ್ಲಿ ದೊರೆತ ಅಪಯಶ ಸ್ಸಿನಿಂದ ಪಡೆಯಬೇಕಾಗಿದ್ದ ಉಪದೇಶವನ್ನು ತೀವ್ರವಾಗಿ ಪಡೆದುಕೊಳ್ಳಲಿಲ್ಲ. ತಡವಾಗಿಯಾದರೂ ಈಗ ನಮಗೆ ನಮ್ಮ ಸೋಲಿನ ಕಾರಣಗಳು ಲಕ್ಷ್ಯಕ್ಕೆ ಬಂದಿವೆ. ದೇಶಾಭಿಮಾನ ಮತ್ತು ರಣರಂಗದಲ್ಲಿರಬೇಕಾದ ಧೈರ್ಯ ಇವುಗಳ ಕೊರತೆ ನಮ್ಮಲ್ಲಿದ್ದಿಲ್ಲವೆಂತಲ್ಲ. ತುರ್ಕ ಆಕ್ರಮಣಕಾರರ ತೀವ್ರಗತಿಯಿಂದ ನಾಗಾಟ ಮಾಡುವ ಸುಸಜ್ಜಿತವಾದ ಅಶ್ವದಳಗಳು ನಮಗೆ ನೀಗದಂತಾದವು. ಈ ಆಕ್ರಮಣ ಕಾರರು ತಮ್ಮ ಸವಧರ್ಮನಿಷ್ಠೆಯ ಹೊಟ್ಟೆಯಲ್ಲಿ ಉದ್ಭವಿಸಿದ ದ್ವೇಷದಿಂದ ನಮ್ಮ ಮೈಮೇಲೆ ಕಡಿದುಕೊಂಡು ಬಿದ್ದರು. ಇಂಥ ಉರಿಯುತ್ತಿರುವ ಧರ್ಮಾಭಿಮಾನವು ನಮ್ಮಲ್ಲಿ ಇದ್ದಿಲ್ಲ. ನಮ್ಮ ಈ ಕೊರತೆಯ ಮೂಲಕ ಆಕ್ರಮಣಕಾರರ ಮಾರ್ಗವು ತೀವ್ರವಾಗಿ ಮುಕ್ತವಾಗಿ ಅವರ ಆಧಿಕಾರವು ಭಾರತದ ಬಹು ದೊಡ್ಡ ಭಾಗದ ಮೇಲೆ ಎಷ್ಟೋ ಶತಕಗಳವರೆಗೆ ಉಳಿಯಿತು. " ಸಮಯಕ್ಕೆ ಸರಿಯಾಗಿ ಹಾಕಿದ ಒಂದು ಟೆಬ್ಬಿಯು ಮುಂದಿನ ಒಂಬತ್ತು ಟೆಬ್ಬಿಗಳ ಶ್ರಮವನ್ನು ಉಳಿಸುವದು. " ಆದರೆ ನಾವು ಬಹಳ ಮಂದಗತಿಯಿಂದ ಜಾಣರಾದೆವು. ಆದುದರಿಂದಲೇ "ಹಿಂದೆ ಇಟ್ಟ ಮೊದಲ ಹೆಜ್ಜೆಯು ನೂರು ಹೆಜ್ಜೆಗಳಿಗೆ ಮೊದಲನೆಯದಾಗುತ್ತದೆ" ಎಂದು ಜಪಾನಿ ಭಾಷೆಯಲ್ಲಿ ಒಂದು ನಾಣ್ಣುಡಿ ಇದೆ. ನಮ್ಮ ಸ್ವಾತಂತ್ರ್ಯ, ನಮ್ಮ ದೇಶ, ಇವುಗಳನ್ನು ನಾವು ಕಳೆದುಕೊಂಡೆವು; ಏಕೆ? ನಮ್ಮ ಆಕ್ರಮಣಕಾರರನ್ನು ನಮ್ಮ ರಾಷ್ಟ್ರದ ಸೀಮೆಯ ಬದಿಯಲ್ಲಿ ತಡೆದು ನಿಲ್ಲಿಸಲಿಲ್ಲವೆಂದೇ.

ಪರದೇಶದ ತುರ್ಕ ಗುಲಾಮನು ದಿಲ್ಲಿಯ ಸುಲ್ತಾನ ಪದವಿಯ ವರೆಗೆ ಏರಿದರೆ ನಮ್ಮ ರಾಜ ಮಹಾರಾಜರು ಆ ವಿಜೇತನ ಗುಲಾಮರಾದರು. ಮುಂದೆ ದೈವ ಯೋಗದಿಂದ ಸುಸಂಸ್ಕೃತ ಮೊಗಲ ಜನರು ಭಾರತಕ್ಕೆ ಬರುವವರೆಗೆ ಖಿಲ್ಜೀ, ತುಘ ಲಕ, ಇತ್ಯಾದಿ ಜನರ ಬಲುಮೆಯ ರಾಜಕಾರಭಾರವನ್ನು ನಾವು ಸಹಿಸಿಕೊಳ್ಳ ಬೇಕಾಯಿತು. ಆದರೂ ನಮ್ಮ ಸಂಸ್ಕೃತಿ ಮತ್ತು ಸಮಾಜವ್ಯವಸ್ಥೆ ಇವುಗಳೊಳಗಿದ್ದ ಅಮೌಲ್ಯ ಸಂಗತಿಗಳನ್ನು ನಮ್ಮ ವಿಜೇತರು ಕಸಿದುಕೊಳ್ಳಲು ಶಕ್ತರಾಗಲಿಲ್ಲ. "ಇಲ್ಲಿಯ ವರೆಗೆಯೇ, ಇದರ ಮುಂದೆ ಒಂದು ಹೆಜ್ಜೆಯೂ ಇಲ್ಲ" ಎಂಬ ಭಾರತೀಯ ಸಂಸ್ಕೃತಿಯ ಧ್ವನಿಯು ಗಡುಚಿಟ್ಟಿತು. ಇದರಿಂದ ರಾಜಕೀಯ ಸತ್ತೆ ಮತ್ತು ಐಹಿಕ ಐಶ್ವರ್ಯ ಇವುಗಳನ್ನು ಕಳೆದುಕೊಂಡರೂ ನಾವು ನಮ್ಮ ಧರ್ಮ ಮತ್ತು ಸಮಾಜರಚನೆಗೆ ಆಘಾತಗೊಳಿಸಲಿಲ್ಲ. ಜಾತಿ, ಸಂಸ್ಥೆ ಮತ್ತು ಲೋಕಸತ್ತಾ,

ಗ್ರಾಮಸಭೆ ಇವುಗಳು ಭದ್ರವಾದ ತಟಬಂದಿಯಂತೆ ಉಪಯೋಗವಾದವು. ಕಾಲಾಂತರದಿಂದ ವಿಜಯನಗರದ ಹಿಂದೂ ರಾಜರು ಮತ್ತು ಶಿವಾಜಿ ಇವರಂತಹ ಸತ್ತಾಧೀಶರು ಉದಯಹೊಂದಿ ಸಾಮರ್ಥ್ಯಶಾಲಿಯಾದ ರಾಜಕೀಯ ಸತ್ತೆಯನ್ನು ಮತ್ತು ಸಂಘಟನೆಯನ್ನು ನಿರ್ಮಿಸಿ ಸಂಸ್ಕೃತಿ ರಕ್ಷಣೆಯ ಮಹಾಕಾರ್ಯವನ್ನು ಮಾಡಿದರು. ತೆಂಗಿನಕಾಯಿಯೊಳಗಿನ ಕೊಬ್ಬರಿ ಮತ್ತು ಮಧುರ ನೀರನ್ನು ರಕ್ಷಿಸಲು ಹೊರಗಿನ ಕಠಿಣವಾದ ಕವಚವು ಬೇಕಾಗುವಂತೆ, ಸಾಂಸ್ಕೃತಿಕ ಇಡುವಿನೊಳಗಿನ ಶಾಶ್ವತವಾದ ಪೌಲಿಕಗಳ ರಕ್ಷಣೆಗೆ ರಾಜಕೀಯ ಸತ್ತೆ ಮತ್ತು ಸೈನಿಕ ಸಂಘಟನೆಗಳ ಕವಚವು ಬೇಕಾಗುತ್ತದೆ.

ಸುಲ್ತಾನಶಾಹಿಯ ರಾತ್ರಿಯು (೧೨೦೬-೧೫೨೬) ಕಳೆಯುತ್ತಲೆ ಭಾರತದ ಕ್ಷಿತಿಜದ ಮೇಲೆ ಅರುಣೋದಯದ ಪ್ರಭೆಯು ಚಿಮ್ಮಿತು. "ಕ್ಷಿತಿಜದ ಮೇಲೆ ಸೂರ್ಯನು ಸಾಕಷ್ಟು ಏರಿದ್ದನು. ಆಗ್ಗೆ ಪಾನಿಪತ್ತದ ರಣಭೂಮಿಯ ಮೇಲೆ ಇಬ್ರಾಹಿಮ ಲೋದಿಯ ಸೈನ್ಯದೊಡನೆ ನಮ್ಮ ಯುದ್ಧವು ಸುರುವಾಯಿತು" ಎಂದು ಬಾಬರನು ತನ್ನ ಆತ್ಮಚರಿತ್ರೆಯಲ್ಲಿ ಬರೆದಿದ್ದಾನೆ. ಇದರ ಮೇಲೆ ಆಲಂಕಾರಿಕವಾಗಿ ಹೀಗೆ ಹೇಳಲು ಬರುತ್ತದೆ. "ಸ. ೧೬೦೫ ರಲ್ಲಿ ಅಕಬರನು ಮರಣಹೊಂದಲು ಮೊಗಲ ವೈಭವದ ಸೂರ್ಯನು ಸುಮಾರು ನೆತ್ತಿಯ ಮೇಲೆ ಬಂದಿದ್ದನು. ಶಾಹಾಜಹಾನನ ಸಮಯದಲ್ಲಿ ಮಧ್ಯಾಹ್ನದ ಪ್ರಕಾಶವು ಬಿದ್ದಿತು ಮತ್ತು ಔರಂಗಜೇಬನ ಕೊನೆಗೆ (ಸ. ೧೭೦೭) ಸೂರ್ಯನು ಮುಳುಗಹತ್ತಿ ರಾತ್ರಿಯ ಕೃಷ್ಣಛಾಯೆಯು ತೀವ್ರವಾಗಿ ಸಮೀಪಿಸಹತ್ತಿದ್ದಿತು."

ಸ. ೧೫೨೬ ರಿಂದ ೧೭೦೭ರ ಕಾಲವು ಯುರೋಪದೊಳಗೆ ಆಧುನಿಕ ಯುಗದ ಉದಯಕಾಲವೆಂದು ತಿಳಿಯಲಾಗುತ್ತದೆ. ಈ ಕಾಲದಲ್ಲಿಯೇ ಇಂಗ್ಲಂಡದಲ್ಲಿ ಟ್ಯೂಡರ ಮತ್ತು ಫ್ರಾನ್ಸದೊಳಗೆ ೧೪ನೆಯ ಲುಯಿ ಈ ಸಮರ್ಥ ರಾಜರಾದರು. ಬಂದೂಕಿನ ಮದ್ದಿನ ಬಲದ ಮೇಲೆಯೇ, ಇಂಗ್ಲಂಡದಲ್ಲಿ ಟ್ಯೂಡರರು, ಭಾರತದಲ್ಲಿ ಬಾಬರನು ವಿಜಯಶ್ರೀಯನ್ನು ಸಂಪಾದಿಸಿದರು. ಹೋಕಾಯಂತ್ರದ (ಮರಿನರ್ಸ ಕಂಪಾಸ) ಸಹಾಯದಿಂದ ಕೋಲಂಬಸನು ಅಮೇರಿಕೆಯ, ವಾಸ್ಕೊ-ದ-ಗಾಮಾನು ಹಿಂದುಸ್ಥಾನಕ್ಕೆ ಹೋಗುವ, ಜಲಮಾರ್ಗಗಳನ್ನು ಶೋಧಿಸುವದು ಸಾಧ್ಯವಾಯಿತು. ಮುದ್ರಣಾಲಯದ ಶೋಧದಿಂದ ಯುರೋಪದಲ್ಲಿ ಸಾಂಸ್ಕೃತಿಕ ಮತ್ತು ಧಾರ್ಮಿಕ ಪುನರುಜ್ಜೀವನದ ಯುಗವು ಉದಯವಾಗಿ ಮಾನವೀ ಮನಸ್ಸಿನ ವಿಕಾಸವಾಗಿ ಪ್ರಗಲ್ಭವಾಯಿತು. ಭಾರತದಲ್ಲಿ ಬಾಬರನಿಂದ ಔರಂಗಜೇಬನ ವರೆಗಿನ ಅವಧಿಯಲ್ಲಿ ಇದೇ ಬಗೆಯ ಧಾರ್ಮಿಕ ಮತ್ತು ಸಾಂಸ್ಕೃತಿಕ ವಿಕಾಸವಾಯಿತು.

ಪ್ರಕಾಶಯುತ ಮೊಗಲ ಯುಗದ ಮೊದಲು ಅಂಧಃಕಾರಮಯ ಸುಲ್ತಾನಶಾಹಿಯ ಕಾಲವು ಹಿಂದುಸ್ಥಾನದ ಇತಿಹಾಸದಲ್ಲಿ ಕಂಡುಬಂದಂತೆ ಯುರೋಪದ ಇತಿಹಾಸದಲ್ಲಿಯೂ ಜ್ಞಾನಮಾರ್ಗದ ಪ್ರಕಾಶ ಬೀಳುವ ಮುಂಚೆ ಮಧ್ಯಯುಗೀನ ರಾಜರ ಅಂಧಃಕಾರಮಯ ರಾಜ್ಯಕಾರಭಾರವು ಆಗಿಹೋಯಿತು. ಹಿಂದುಸ್ಥಾನ

ಮತ್ತು ಯುರೋಪ ಇವೆರಡರಲ್ಲಿಯೂ ಈ ಕಾಲದ ಇತಿಹಾಸದಲ್ಲಿ ರಾಜಕೀಯ ದೃಷ್ಟಿಯಿಂದ ಭಿನ್ನತೆಯ ವಾತಾವರಣವು ಉತ್ಪನ್ನವಾಗಿದ್ದರೂ ಧರ್ಮದ ಜ್ಯೋತಿಯು ಉರಿಯುತ್ತಿತ್ತು. ಅದರ ಪ್ರಕಾಶವು ಆಶಾದಾಯಕವಾಗಿದ್ದಿತು. ಯುರೋಪ ದೊಳಗಿನ ಸಂತ ಫ್ರಾನ್ಸಿಸ್ ಇತ್ಯಾದಿ ಸಾಧುಗಳ ಕಾಲ ಮತ್ತು ಹಿಂದುಸ್ಥಾನ ದೊಳಗಿನ ಬಸವೇಶ್ವರ, ಜ್ಞಾನೇಶ್ವರ ಇವರ ಕಾಲ ಇವು ಸುಮಾರು ಒಂದೇ ಆಗಿದ್ದವು. ಈ ಯೋಗಾಯೋಗವನ್ನು ಲಕ್ಷಿಸುವಂತಿದೆ.

ಆದರೂ ಉಭಯ ದೇಶಗಳಲ್ಲಿ ಒಂದು ಮಹತ್ವದ ವ್ಯತ್ಯಾಸವನ್ನು ಧ್ಯಾನದಲ್ಲಿ ಡುವದು ಅವಶ್ಯವಿದೆ. ಯುರೋಪದೊಳಗಿನ ರೋಮನ್ ಕೆಥೋಲಿಕ ಧರ್ಮ ಪೀಠದ ಪೋಪನು ಕ್ರಿಸ್ತೀಧರ್ಮದ ಸಂಘಟನೆಯನ್ನು ಮಾಡಿದಂತೆ ಹಿಂದುಧರ್ಮದ ಸಂಘಟನೆ ಮಾಡುವ ವ್ಯವಸ್ಥಾಪಕರು ಭಾರತದಲ್ಲಿ ಇದ್ದಿರಲಿಲ್ಲ. ಯುರೋಪ ದೊಳಗಿನ 'ಇನ್‌ಕ್ವಿಝಿಶನ'ದ ಹೆಸರಿನಲ್ಲಿ ಯುರೋಪದಲ್ಲಿ ಆಗುತ್ತಿದ್ದ ಭಯಂಕರ ವಾದ ಧಾರ್ಮಿಕ ಹಿಂಸೆಯು ಭಾರತದಲ್ಲಿ ಆಗಲಿಲ್ಲ. ಯುರೋಪದಲ್ಲಿ ಧರ್ಮದ ಹೆಸರಿನಲ್ಲಿ ಆದ 'ಕ್ರುಸೇಡು'ಗಳು ಎಷ್ಟೋ ಶತಕಗಳ ವರೆಗೆ ನಡೆದವು. ಆ ರೀತಿ ಯಾಗಿ ಹಿಂದುಸ್ಥಾನದೊಳಗಿನ ಹಿಂದು ಮುಸಲ್ಮಾನರು ಎಂದೂ ಜಗಳಾಡಲಿಲ್ಲ.

ಭಾರತದೊಳಗಿನ ಧರ್ಮ-ಧರ್ಮಗಳೊಳಗಿನ ಬಾಹ್ಯಾತ್ಕಾರಿ ವಿರೋಧವನ್ನು ಇಲ್ಲದಂತೆ ಮಾಡಲು ಭಾರತೀಯ ಸಾಧುಸಂತರು ಪ್ರಯತ್ನಿಸಿದರು. ಯುರೋಪ ದೊಳಗೆ ಪೀಟರ ದಿ ಹರಮಿಟ್‌ನಂತಹ ಕಲಹಪ್ರಿಯ ಸಂತರಿದ್ದರೆ ಭಾರತದಲ್ಲಿ ನಾನಕ, ಕಬೀರ ಇತ್ಯಾದಿ ಶಾಂತ ಮತ್ತು ಕೋಮಲ ಸ್ವಭಾವದ ಸಂತರಿದ್ದರು. ಲ್ಯೂಥರ ಮತ್ತು ಕಾಲ್ವಿನ್ ಇವರು ಪುರಸ್ಕರಿಸಿದ ಪಂಥವು ಕಲಹಪ್ರಿಯ ವೃತ್ತಿ ಯದಾಗಿದ್ದಿತು. ಆದರೆ ಭಾರತೀಯ "ಪ್ರಾಟೆಸ್ಟಂಟ ಪಂಥ"ದ (ಭಕ್ತಿಮಾರ್ಗ) ಕಾರ್ಯವು ಶಾಂತ ರೀತಿಯಿಂದ ನಡೆದಿದ್ದಿತು! ಉತ್ತರ ಭಾರತದಲ್ಲಿ ನಾನಕ ಮತ್ತು ಕಬೀರ ಮತ್ತು ದಕ್ಷಿಣದೊಳಗೆ ಮಹಾರಾಷ್ಟ್ರದಲ್ಲಿ ನಾಮದೇವ, ತುಕಾರಾಮ ಮತ್ತು ಕರ್ನಾಟಕದಲ್ಲಿ ಬಸವ ಮತ್ತು ಕನಕದಾಸ ಈ ಸಂತಶ್ರೇಷ್ಠರು ಭಕ್ತಿಮಾರ್ಗ ಮತ್ತು ಸಮಾನತೆ ಇವುಗಳ ಸಂದೇಶವನ್ನು ಬೀರುವಾಗ ಪ್ರೇಮಭಾವದ ಮರೆವು ಆಗಗೊಡಲಿಲ್ಲ. ಅಲ್ಲದೆ ಯುರೋಪಿಯ ಮತ್ತು ಭಾರತೀಯ ಧರ್ಮಸುಧಾರಕರರಲ್ಲಿ ಬಹಳ ಮಹತ್ವದ ಒಂದು ಅಂತರವಿದೆ. ಯುರೋಪೀಯ ಧರ್ಮಸುಧಾರಕರು ತಮ್ಮ ಸನಾತನ ಧರ್ಮಪೀಠದ ಸಂಬಂಧವನ್ನು ಸಂಪೂರ್ಣವಾಗಿ ಕಡಿದುಕೊಂಡು ಅವರ ದ್ವೇಷ ಮತ್ತು ರೋಷವನ್ನು ಮೈಮೇಲೆ ಹಾಕಿಕೊಂಡರು. ಆದರೆ ಭಾರತೀಯ ಸಂತರು, ಸನಾತನಿ ಜನರನ್ನು ಸ್ವಲ್ಪ ಕೂಡ ನೋಯಿಸದೆ ತದ್ವಿರುದ್ಧವಾಗಿ ಅವರ ಪ್ರೇಮವನ್ನೇ ಸಂಪಾದಿಸಿದರು. ಸನಾತನ! ಧರ್ಮಪೀಠಗಳು ಈ ಸಾಧು ಸಂತರ ವಿಷಯದಲ್ಲಿ ಆದರಭಾವದಿಂದ ನಡೆದುಕೊಂಡವು.

ಯುರೋಪದ ಮಾನದಿಂದ, ಭಾರತದೊಳಗಿನ ಕಲಾಕೌಶಲ್ಯ, ಸಂಗೀತ ಮತ್ತು ವಾಙ್ಮಯ ಇವುಗಳ ಸಮನ್ವಯವನ್ನು ಅದೆಷ್ಟೋ ಅಧಿಕ ಪ್ರಮಾಣದಲ್ಲಿ ಸಾಧಿಸ

ಲಾಯಿತು. ಮುಸಲ್ಮಾನಿ ಸಂಸ್ಕೃತಿಯೊಡನೆ ಸಂಬಂಧ ಬಂದಂದಿನಿಂದ ಹಿಂದು ಮುಸಲ್ಮಾನರು ತಮ್ಮ ತಮ್ಮ ವಾಙ್ಮಯ, ಕಲಾಕೌಶಲ್ಯ ಮತ್ತು ಸಂಗೀತ ಇವು ಗಳಲ್ಲಿ ಎಷ್ಟೋ ಕೊಡಕೊಳ್ಳುವದನ್ನು ಮಾಡಿದರು. ಈ ಕೊಡಕೊಳ್ಳುವದರಿಂದ ಭಾರತೀಯ ಸಮ್ಮಿಶ್ರ ಸಂಸ್ಕೃತಿಯ ನಿರ್ಮಾಣವಾಯಿತು. ಮಹಾಭಾರತದೊಳಗಿನ ವೀರ ಸ್ತ್ರೀ ಪುರುಷರ ಪ್ರತಿಮೆಗಳನ್ನು ರೇಖಿಸುವ ಮೊಗಲ ಧರತಿಯ ಶ್ರೀಕೃಷ್ಣ, ದ್ರೌಪದಿ ಇತ್ಯಾದಿ ಚಿತ್ರಗಳಿವೆ. ದಾರಾಶೇಖೋನ "ಮಜ್‌ಮಾ-ಅಲ್-ಬಹರಾ-ಯಿನ್" (ವೇದಾಂತ ಮತ್ತು ಸುಫೀ ಧರ್ಮಪಂಥದ ಸಂಗಮ ಎಂಬ ಅರ್ಥದ) ಎಂಬ ಪುಸ್ತಕವು ಈ ಕಾಲದಲ್ಲಿಯ ವ್ಯಾಪಕವಾದ ಧರ್ಮಭಾವನೆಯ ಪ್ರತೀಕವಿದೆ.

ಸಾಮಾಜಿಕ ಕ್ಷೇತ್ರದಲ್ಲಿ ಹಿಂದು ಜಾತಿವ್ಯವಸ್ಥೆಯು ಹಳೆಯ ಸ್ವರೂಪದಲ್ಲಿ ಉಳಿದಿದ್ದರೂ ಆದರ ಮೇಲೆ ಇಸ್ಲಾಂ ಧರ್ಮದೊಳಗಿನ ಬಂಧುಭಾವದ ಮುದ್ರೆಯು ಬೀಳದೆ ಉಳಿಯಲಿಲ್ಲ. ನಾನಕನಿಂದ ಸುರುವಾದ ಸಂತಮಾಲಿಕೆಯ ಉಪದೇಶದಲ್ಲಿ ಬಂಧುಭಾವದ ಉಪದೇಶವು ಎಡೆಬಿಡದೆ ಕಂಡುಬರುತ್ತದೆ. ಇದರ ವಿರುದ್ಧವಾಗಿ ಮಲಕಾನಾದ ರಜಪೂತರಂತೆ ಮತಾಂತರ ಹೊಂದಿದ ಜನರಲ್ಲಿ ಮುಂಚಿನ ಕೆಲವು ಹಿಂದೂ ಪದ್ಧತಿಗಳು ಇಂದಿಗೂ ಪಾಲಿಸಲ್ಪಡುತ್ತವೆ. ಈ ಜನರು ಮಂದಿರ ಮತ್ತು ಮಸೀದೆ ಎರಡೂ ಸ್ಥಳಗಳಿಗೆ ಹೋಗುತ್ತಾರೆ. ಮತ್ತು ಹಿಂದೂ ಮುಸಲ್ಮಾನ ಧರ್ಮ ಗಳೊಳಗಿನ ನಿಯಮಗಳನ್ನು ಪಾಲಿಸುತ್ತಾರೆ. ಮೊಹರಮ್ಮದ ಹಬ್ಬದಲ್ಲಿ ಭಾಗ ತೆಗೆದುಕೊಳ್ಳುವ ಹಿಂದುಗಳೇನು ಕಡಿಮೆಯಿಲ್ಲ. ಹಿಂದುಗಳ ಲಗ್ನ ಸಮಾರಂಭಗಳ ಮೆರವಣಿಗೆಗಳ ಎದುರಿನಲ್ಲಿ ಬ್ಯಾಂಡು ಬಾರಿಸುವವರ ಎಷ್ಟೋ ಗುಂಪುಗಳು ಮುಸಲ್ಮಾನರವು ಇರುತ್ತವೆ. ಪೀರರ ಹೆಸರಿನಿಂದ ಆಣೆ ಶಪಥಗಳನ್ನು ಮಾಡುವ ಹಿಂದುಗಳೂ ಇದ್ದಾರೆ. ಆದರಂತೆ ಖಂಡೋಬಾ, ಜ್ಯೋತಿಬಾ ಇತ್ಯಾದಿ ಹಿಂದೂ ದೇವತೆಗಳ ಆಣೆ ಮಾಡುವ ಮುಸಲ್ಮಾನರೂ ಇದ್ದಾರೆ. ಹಿಂದು-ಮುಸಲ್ಮಾನ ಸಂಗಮದ ಆರಂಭವು ನಾನಕ, ಕಬೀರ ಇವರ ವೇಳೆಯಿಂದ ಆಯಿತು; ಮತ್ತು ಆದು ಇಂದಿನವರೆಗೂ ಉಳಿದು ನಿಂತಿದೆ !

ವಿಜಯನಗರದ ಕೃಷ್ಣದೇವರಾಯ, ಶಿವಾಜಿ, ಪೇಶವೆ ಇವರು ಸುಲ್ತಾನ ಮತ್ತು ಮೊಗಲ ಬಾದಶಾಹಾ ಇವರೊಡನೆ ಮಾಡಿದ ಯುದ್ಧಗಳು ಧಾರ್ಮಿಕವಾ-ಗಿರದೆ ರಾಜಕೀಯವಾಗಿದ್ದವು. ಪ್ರಾಚೀನ ಹಿಂದೂ ಸಂಸ್ಕೃತಿಯಲ್ಲಿ ಹೇಳಿದ ಸಹಿಷ್ಣು ವೃತ್ತಿಪ್ರಧಾನವಾದ ವ್ಯಾಪಕ ಧರ್ಮವು, ಅಮೌಲ್ಯವಾದ ಇಡುವು ಆಗಿದ್ದಿತು. ಬೇಕಾದಷ್ಟು ಬೆಲೆ ಕೊಟ್ಟು ಈ ಗಂಟಿನ ರಕ್ಷಣೆ ಮಾಡುವದು ಅವಶ್ಯವಿದ್ದಿತು. ಇಸ್ಲಾಮಿ ಆಕ್ರಮಣವನ್ನು ಎದುರಿಸಿ ಈ ಮಹತ್ಕಾರ್ಯವನ್ನು ವಿಜಯನಗರ ಮತ್ತು ಮರಾ-ಠರು ಮಾಡಿದರು. ಆದರೂ ಈ ಎರಡೂ ಹಿಂದೂ ಸತ್ತಾಧೀಶರು ಹಿಂದೂ ಸಂಸ್ಕೃತಿ-ಯೊಳಗಿನ ಉತ್ತಮೋತ್ತಮ ಸಂಗತಿಗಳ ರಕ್ಷಣೆ ಮಾಡಿ ಇಸ್ಲಾಮ ಧರ್ಮದ ವಿಷಯದಲ್ಲಿ ಅನಾದರವನ್ನು ತೋರಿಸಲಿಲ್ಲ. (ಹಿಂದೂ ಧರ್ಮದೊಳಗಿನ ಷಡ್ ದರ್ಶನಗಳಲ್ಲಿ, ಇಸ್ಲಾಮ ಎಂಬ ಇನ್ನೊಂದು ದರ್ಶನವನ್ನು ಸೇರಿಸಲಾಯಿತೆಂದು

೪. ಸ. ೧೫೨೬ ರಿಂದ ೧೮೦೦ರ ವರೆಗಿನ ಕಾಲವನ್ನು "ಆಧುನಿಕ ಯುಗದ ಉದಯ ಕಾಲ"ವೆಂದು ತಿಳಿಯುವ ಕಾರಣವೇನು ?

೫. ಯುರೋಪ ಮತ್ತು ಭಾರತ ಇವುಗಳಲ್ಲಿಯ ಧಾರ್ಮಿಕ ಪುನರುಜ್ಜೀವನದಲ್ಲಿ ಕಂಡು ಬರುವ ಭೇದಗಳೇನು ?

೬. ಹಿಂದೂ ಮುಸ್ಲಿಮರ ಸಂಬಂಧದಿಂದ ನಿರ್ಮಿತವಾದ ಭಾರತೀಯ ಸಂಸ್ಕೃತಿಯ ೨-೩ ನಿದರ್ಶನಗಳನ್ನು ಕೊಡಿರಿ.

೭. ಯುರೋಪಿಯನರ ಮುಂದೆ ಭಾರತೀಯರ ಪ್ರಾಚೀನ ವ್ಯವಸ್ಥೆಯು ಗಟ್ಟಿಯಾಗಿ ಉಳಿಯಲಿಲ್ಲವೇಕೆ ?

# ★ ಆದರ್ಶ ಇತಿಹಾಸ ಮಾಲಾ ★

೫ರಿಂದ ೭ನೆಯ ಇಯತ್ತೆಗಳ ಸಲುವಾಗಿ

**ವಿಶಾಲ ಭಾರತ**

**ಇತಿಹಾಸ ಪ್ರವೇಶ : ಪ್ರಥಮ ಸೋಪಾನ**

**ಇತಿಹಾಸ ಪ್ರವೇಶ : ದ್ವಿತೀಯ ಸೋಪಾನ**

**ಇತಿಹಾಸ ಪ್ರವೇಶ : ತೃತೀಯ ಸೋಪಾನ**

೮ರಿಂದ ೧೦ನೆಯ ಇಯತ್ತೆಗಳ ಸಲುವಾಗಿ

**ವಿಶಾಲ ಭಾರತ**

**ಇತಿಹಾಸ ದರ್ಶನ : ಮೊದಲನೆಯ ಪುಸ್ತಕ**

**ಇತಿಹಾಸ ದರ್ಶನ : ಎರಡನೆಯ ಪುಸ್ತಕ**

**ಇತಿಹಾಸ ದರ್ಶನ : ಮೂರನೆಯ ಪುಸ್ತಕ**

೧೧ನೆಯ ಇಯತ್ತೆಯ ಸಲುವಾಗಿ

**ವಿಶಾಲ ಭಾರತ**

**ಶಾಲಾಂತ ಇತಿಹಾಸ**

ಓರಿಎಂಟ್ ಲಾಂಗ್‌ಮನ್ಸ್ ಲಿಮಿಟೆಡ್